ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯ ವಿರಚಿತ

# ಶ್ರೀಮನ್ ಮಹಾಭಾರತ ತಾತ್ಪರ್ಯ ನಿರ್ಣಯ.

[ ಪಂಡಿತರಿಂದ ಬರೆಯಲ್ಪಟ್ಟ ಅರ್ಥ, ತಾತ್ಪರ್ಯ, ವಿಶೇಷಾರ್ಥ ಸಹಿತ. ]



***Part 2***

ಪ್ರಕಾಶಕರು

ಎಂ. ಮೂರ್ತಿರಾವ್,

"ಶ್ರೀಹರಿಕೃಪಾ" ಮಲ್ಲೇಶ್ವರಂ, ಬೆಂಗಳೂರು.

[ಬೆಲೆ ರೂ. 4.

# ಎಂಟನೆಯ ಅಧ್ಯಾಯ

ಅವತಾರಿಕೆ.—ಯುದ್ಧಕಾಂಡದ ಕಥೆಯನ್ನು ಹೇಳುತ್ತಾರೆ.—

**ಶ್ಲೋಕ || ಓಂ || ಶ್ರುತ್ವಾ ಹನೂಮದುದಿತಂ ಕೃತಮಸ್ಯ ಸರ್ವಂ |**
**ಪ್ರೀತಃಪ್ರಯಾಣಮಭಿರೋಚಯತೇ ಸ ರಾಮಃ ||**
**ಆರುಹ್ಯ ವಾಯುಸುತಮಂಗದಗೇನ ಯುಕ್ತಃ |**
**ಸೌಮಿತ್ರಿಣಾ ಸ ರವಿಜಃ ಸಹಸೇನ ಯಾಗಾತ್ ||೧||**

ಅರ್ಥ.—ಸರಾಮಃ=ಶ್ರೀರಾಮನು, ಹನೂಮದುದಿತಂ=ಹನುಮಂತನಿಂದ ಹೇಳಲ್ಪಟ್ಟ, ಅಸ್ಯ=ಈ ಹನುಮಂತನ, ಸರ್ವ-ಸಮಸ್ತವಾದ, ಕೃತಂ=ವ್ಯಾಪಾರವನ್ನು, ಶ್ರುತ್ವಾ=ಕೇಳಿ, ಪ್ರೀತಃ=ಸಂತೋಷಯುಕ್ತನಾಗಿ, ಪ್ರಯಾಣಂ=ಲಂಕಾಯಾತ್ರಾ ಪ್ರಯಾಣವನ್ನು, ಅಭಿರೋಚಯತೇ=ಅಪೇಕ್ಷಿಸಿದನು. ಅಥ=ಅನಂತರ, ಅಂಗದೇನ=ಅಂಗದನ ಭುಜದಮೇಲೆ ಕುಳಿತಿದ್ದ, ಸೌಮಿತ್ರಿಣಾ=ಸುಮಿತ್ರಾಪುತ್ರನಾದ ಲಕ್ಷ್ಮಣನಿಂದ ಯುಕ್ತನಾದ, ರಾಮಃ=ಶ್ರೀರಾಮನು, ವಾಯುಸುತಂ=ವಾಯು ಪುತ್ರನಾದ ಹನುಮಂತನ ಭುಜವನ್ನು, ಆರುಹ್ಯ=ಏರಿ, ಸ ರವಿಜಃ=ಸೂರ್ಯಪುತ್ರನಾದ ಸುಗ್ರೀವನಿಂದ ಸಹಿತನಾಗಿ, ಸೇನಯಾಸಹ=ವಾನರ ಸೈನ್ಯದಿಂದ ಕೂಡಿ, ಅಗಾತ್=ಲಂಕಾಪಟ್ಟಣವನ್ನು ಕುರಿತು ಹೊರಟನು.

ತಾತ್ಪರ್ಯ.—ಹನುಮಂತನು ಲಂಕೆಯಲ್ಲಿ ಮಾಡಿದ ಸಮಸ್ತ ವ್ಯಾಪಾರಗಳನ್ನೂ ಶ್ರೀರಾಮನು ಕೇಳಿ ಬಹಳ ಸಂತೋಷಪಟ್ಟು ಲಂಕಾಪಟ್ಟಣಕ್ಕೆ ಪ್ರಯಾಣಮಾಡಲು ಉದ್ದೇಶಿಸಿದನು. ಅನಂತರ ಶ್ರೀರಾಮನು ಹನುಮಂತನ ಭುಜದಲ್ಲಿ ಆರೋಹಣಮಾಡಿ, ಅಂಗದನ ಭುಜದಲ್ಲಿ ಆರೋಹಣ ಮಾಡಿರುವ ಲಕ್ಷ್ಮಣನಿಂದ ಕೂಡಿ ಸುಗ್ರೀವ ಸಹಿತನಾಗಿ ವಾನರ ಸೈನ್ಯದೊಡನೆ ಲಂಕಾಪಟ್ಟಣವನ್ನು ಕುರಿತು ಪ್ರಯಾಣಮಾಡಿದನು.

**ಶ್ಲೋಕ ॥ ಸಂಪ್ರಾಪ್ಯ ದಕ್ಷಿಣ ಮಪಾಂ ನಿಧಿಮತ್ರ ದೇವಃ ।**
**ಶಿಶ್ಯೇ ಜಗದ್ಗುರುತಮೋಽಪ್ಯವಿಚಿಂತ್ಯ ಶಕ್ತಿಃ ॥**
**ಅಗ್ರೇಹಿ ಮಾರ್ದವಮನುಪ್ರಥಯನ್ಸಧರ್ಮಂ ।**
**ಪಂಥಾನಮರ್ಥಿತು ಮಪಾಂಪತೇಃ ಪ್ರತೀತಃ ॥೨॥**

ಅರ್ಥ.—ಜಗದ್ಗುರುತಮಃ=ಜಗತ್=ಪ್ರಪಂಚಕ್ಕೆ, ಗುರುತಮಃ=ಮುಖ್ಯ ಗುರುವೆಂದು, ಪ್ರಸಿದ್ಧಃ=ವಿಖ್ಯಾತನಾದ, ದೇವಃ=ಪ್ರಭುವಾದ ಶ್ರೀರಾಮನು, ದಕ್ಷಿಣ=ದಕ್ಷಿಣದಿಕ್ಕಿನಲ್ಲಿರುವ, ಅಪಾಂನಿಧಿಂ=ಸಮುದ್ರವನ್ನು ಸಂಪ್ರಾಪ್ಯ=ಸೇರಿ, ಅತ್ರ=ಆ ಸಮುದ್ರತೀರದಲ್ಲಿ, ಅಗ್ರೇ–ಮೊದಲು (ಪ್ರಾರಂಭದಲ್ಲಿ) ಸಃ=ಆ ಶ್ರೀರಾಮನು, ಅವಿಚಿಂತ್ಯಶಕ್ತಿರಪಿ=ಅಚಿಂತ್ಯ ಶಕ್ತಿಯುಳ್ಳವನಾದಾಗ್ಯೂ, ಆರ್ದವಂ=ಮೃದುವಾದ, ಧರ್ಮಂ–ಧರ್ಮವು, ಅನುಪ್ರಥಯನ್–ಪ್ರಥಮತಃ ಇರಬೇಕೆಂಬುದನ್ನು ಪ್ರಕಟನ ಮಾಡಿದವನಾಗಿ, ಅಪಾಂಪತೇಃ=ಸಮುದ್ರದ ದೆಶೆಯಿಂದ, ಪಂಥಾನಂ=ಮಾರ್ಗವನ್ನು ಅರ್ಥಿತುಂ–ಬೇಡುವುದಕ್ಕೋಸ್ಕರ, ಶಿಶ್ಯೇ=ಮಲಗಿದನು.

ತಾತ್ಪರ್ಯ.—ಸಮಸ್ತ ಪ್ರಪಂಚಕ್ಕೂ ಮುಖ್ಯಗುರುವೆಂದು ಪ್ರಖ್ಯಾತನಾದ ಶ್ರೀರಾಮನು ವಾನರ ಸೈನ್ಯದಿಂದ ಸಹಿತನಾಗಿ ದಕ್ಷಿಣ ಸಮುದ್ರಕ್ಕೆ ಬಂದು ಆ ಸಮುದ್ರತೀರದಲ್ಲಿ ತಾನು ಚಿಂತಿಸಲಸಾಧ್ಯವಾದ ಶಕ್ತಿಯುಳ್ಳವನಾದಾಗ್ಯೂ ಆದಿಯಲ್ಲಿ ಮೃದುವಾದ ಸಾತ್ವಿಕ ಧರ್ಮವು ಇರಬೇಕೆಂಬುದನ್ನು ಪ್ರಕಟನಮಾಡಿ ಸಮುದ್ರದ ದೆಶೆಯಿಂದ ಮಾರ್ಗವನ್ನು ಕೇಳುವುದಕ್ಕೋಸ್ಕರ ಸಮುದ್ರದ ತೀರದಲ್ಲಿ ದರ್ಭಾಸನದ ಮೇಲೆ ಮಲಗಿಕೊಂಡನು.

**ಶ್ಲೋಕ ॥ ತತ್ರಾಜಗಾಮ ಸ ವಿಭೀಷಣನಾಮಧೇಯೋ ।**
**ರಕ್ಷಃಪತೇರವರಜೋಽಪ್ಯಥ ರಾವಣೇನ ॥**
**ಭಕ್ತ್ಯೋಽಧಿಕಂ ರಘುಪತಾ ವತಿಧರ್ಮನಿಷ್ಟ ।**
**ಸ್ತ್ಯಕ್ತೋಽ ಜಗಾಮ ಶರಣಂಚ ರಘೂತ್ತಮಂತಂ ॥೩॥**

ಅರ್ಥ.—ತತ್ರ–ಶ್ರೀರಾಮನು ಮಲಗಿದ್ದ ಸ್ಥಳದಲ್ಲಿ, ರಕ್ಷಗತೇಃ–ರಾವಣನ, ಅವರಜಃ=ತಮ್ಮನಾದ, ವಿಭೀಷಣ ನಾಮಧೇಯಃ=ವಿಭೀಷಣ

ನೆಂಬುವನು, ಅತಿಧರ್ಮನಿಷ್ಠಃ=ಧರ್ಮದಲ್ಲಿ ಅತ್ಯಂತ ಆಸಕ್ತನು, ಅಪಿ= ಮತ್ತು, ರಘುಪತೌ=ಶ್ರೀರಾಮನಲ್ಲಿ, ಅಧಿಕಂ= ಅತ್ಯಂತವಾದ, ಭಕ್ತಃ= ಭಕ್ತಿಯುಳ್ಳವನು, ಇತಿ=ಈ ಕಾರಣಗಳಿಂದ, ರಾವಣೇನ=ರಾವಣನಿಂದ, ತ್ಯಕ್ತಃ=ಬಿಡಲ್ಪಟ್ಟು ಬಹಿಷ್ಕೃತನಾದನು, ಅಥ=ಅನಂತರದಲ್ಲಿ, ಸಃ=ಆ ವಿಭೀಷಣನು, ತಂ= ಆ ಮಲಗಿದ್ದ, ರಘೂತ್ತಮಂಚ = ರಘುವರನಾದ ಶ್ರೀರಾಮನನ್ನೇ, ಶರಣಂಜಗಾಮ=ಶರಣು ಹೊಂದಿದನು.

ತಾತ್ಪರ್ಯ.—ರಾವಣನು ತನ್ನ ತಮ್ಮನಾದ ವಿಭೀಷಣನೆಂಬ ರಾಕ್ಷಸನು ಕೇವಲ ಧರ್ಮನಿಷ್ಠನಾದ್ದರಿಂದಲೂ, ಶ್ರೀರಾಮನಲ್ಲಿ ಅವನಿಗೆ ಅತ್ಯಂತ ಭಕ್ತಿ ಇದ್ದದ್ದರಿಂದಲೂ ಅವನನ್ನು ತ್ಯಾಗಮಾಡಿ ಲಂಕಾಪಟ್ಟಣದಿಂದ ಹೊರಗೆ ಹೊರಡಿಸಿದನು. ಆ ವಿಭೀಷಣನು ಈಗ ಸಮುದ್ರತೀರದಲ್ಲಿ ದರ್ಭಾಸನದಲ್ಲಿ ಮಲಗಿದ್ದ ಶ್ರೀರಾಮನನ್ನು ಶರಣಾಗತನಾದನೆಂದು ತಾತ್ಪರ್ಯವು.

ಶ್ಲೋಕ ॥ ಬ್ರಹ್ಮಾತ್ಮಜೇನ ರವಿಜೇನ ಬಲಪ್ರಣೇತ್ರಾ ।
ನೀಲೇನ ಮೈಂದ ವಿವಿದಾಂಗದ ತಾರಪೂರ್ವೈಃ ॥
ಸರ್ವೈಶ್ಚ ಶತೃಸದನಾ ದುಪಯಾತ ಏಷ ।
ಭ್ರಾತಾಸ್ಯ ನಗ್ರಹಣಯೋಗ್ಯ ಇತಿಸ್ಮಿರೋಕ್ತೇಃ ॥೪॥

ಅರ್ಥ.—ಬ್ರಹ್ಮಾತ್ಮಜೇನ=ಬ್ರಹ್ಮಪುತ್ರನಾದ ಜಾಂಬವಂತನಿಂದಲೂ ರವಿಜೇನ=ಸೂರ್ಯ ಪುತ್ರನಾದ ಸುಗ್ರೀವನಿಂದಲೂ, ಬಲಪ್ರಣೇತ್ರಾ=ಸೇನಾಪತಿಯಾದ, ನೀಲೇನ=ನೀಲನಿಂದಲೂ, ಮೈಂದ=ಮೈಂದನು, ವಿವಿದ= ವಿವಿದನು, ಅಂಗದ=ಅಂಗದನು, ತಾರ=ತಾರನು ಇವರೇ ಮೊದಲಾಗಿ ವುಳ್ಳ, ಸರ್ವೈಶ್ಚ = ಸಮಸ್ತರಾದ ವಾನರ ಶ್ರೇಷ್ಠರೂ, ಏಷಃ — ಇಲ್ಲಿಗೆ ಬಂದಿರುವ ಈ ವಿಭೀಷಣನು, ಶತೃಸದನಾತ್ = ಶತೃವಾದ ರಾವಣನ ಮನೆಯಿಂದ, ಉಪಯಾತಃ—ಬಂದಿದ್ದಾನೆ. ಮತ್ತು ಅಸ್ಯ=ರಾವಣನಿಗೆ, ಭ್ರಾತಾ=ಸಹೋದರನು, ಆದ್ದರಿಂದಲೇ ಏಷಃ=ಇವನು, ಗ್ರಹಣಯೋಗ್ಯಃ=ಗ್ರಹಣ ಮಾಡುವದಕ್ಕೆ, ಯೋಗ್ಯಃ=ಅರ್ಹನಾದವನು, ನಭವತಿ= ಆಗುವದಿಲ್ಲ, ಇತಿ=ಹೀಗೆಂದು (ಆ ವಾನರ ಮುಖಂಡರು ಶ್ರೀರಾಮನನ್ನು ಕುರಿತು ಹೇಳಿದರು)

ತಾತ್ಪರ್ಯ.—ವಿಭೀಷಣನು ಬಂದು ಶ್ರೀರಾಮನಿಗೆ ಶರಣಾಗತನಾದದ್ದನ್ನು ನೋಡಿ ಅಲ್ಲಿದ್ದ ಜಾಂಬವಂತ, ಸುಗ್ರೀವ ಸೇನಾಪತಿಯಾದ ನೀಲ, ಮೈಂದ, ವಿವಿದ, ಅಂಗದ, ತಾರ ಮೊದಲಾದ ಕಪಿ ಶ್ರೇಷ್ಠರೆಲ್ಲರೂ ಶ್ರೀರಾಮನನ್ನು ಕುರಿತು ಈ ವಿಭೀಷಣನು ಶತೃವಾದ ರಾವಣನ ಮನೆಯಿಂದ ಬಂಡಿದ್ದಾನೆ ಮತ್ತು ಶತೃವಿನ ಸಾಕ್ಷಾತ್ ಸಹೋದರನು ; ಆದ್ದರಿಂದ ನಾವು ಆತನನ್ನು ಎಷ್ಟು ಮಾತ್ರವೂ ಸಂಗ್ರಹೆ ಮಾಡಬಾರದೆಂದು ದೃಢವಾಗಿ ಹೇಳಿದರು.

**ಶ್ಲೋಕ ॥ ಅತ್ರಾಹರೂಪ ಮಪರಂ ಬಲದೇವತಾಯಾಃ ।**
**ಗ್ರಾಹ್ಯ ಸ್ಸಏವ ನಿತರಾಂ ಶರಣಂ ಪ್ರಪನ್ನಃ ॥**
**ಭಕ್ತಶ್ಚ ರಾಮಪದಯೋ ರ್ವಿನಿಶಿಷ್ಟು ರಕ್ಷೋಃ ।**
**ವಿಜ್ಞಾಯ ರಾಜ್ಯ ಮುಪಭೋಕ್ತು ಮಿಹಾಭಿಯಾತಃ ॥೫॥**

ಅರ್ಥ.—ಬಲದೇವತಾಯಾಃ = ಶ್ರೀರಾಮನ ಬಲಕ್ಕೆ ಅಭಿಮಾನಿ ದೇವತೆಯು, ಅಪರಂರೂಪಂ = ಎರಡನೇ ರೂಪನಾದ ಹನುಮಂತನು, ಅತ್ರ=ಈ ವಿಭೀಷಣನ ವಿಷಯದಲ್ಲಿ, ಶ್ರೀರಾಮಂಪ್ರತಿ=ಶ್ರೀರಾಮನನ್ನು ಕುರಿತು, ಶರಣಂಪ್ರಪನ್ನಃ = ಶರಣಾಗತನಾಗಿರುವ ಈ ವಿಭೀಷಣನು. ರಾಮಪದಯೋಃ=ಶ್ರೀರಾಮನ ಪಾದಗಳಲ್ಲಿ, ನಿತರಾಂ = ಅತ್ಯಂತವಾಗಿ, ಭಕ್ತಶ್ಚ=ಭಕ್ತಿಯುಳ್ಳವನು, ಸಃ=ಆ ವಿಭೀಷಣನು, ರಕ್ಷಃ=ರಾಕ್ಷಸನಾದ ರಾವಣನನ್ನು, ವಿನಿಶಿಷ್ಟುಂ=ಜಾಗ್ರತೆಯಾಗಿ ನಾಶಹೊಂದತಕ್ಕವನನ್ನಾಗಿ, ವಿಜ್ಞಾಯ=ತಿಳಿದು=ರಾಜ್ಯಂ=ಲಂಕಾ ರಾಜ್ಯವನ್ನು ಉಪಭೋಕ್ತುಮೇವ= ಅನುಭವಿಸುವದಕ್ಕೋಸ್ಕರವಾಗಿಯೇ, ಅಭಿಯಾತಃ=ಬಂದಿದ್ದಾನೆ. ಆದ್ದರಿಂದ, ಏಷಃ=ಈ ವಿಭೀಷಣನು, ಗ್ರಾಹ್ಯಏವ=ಪರಿಗ್ರಹ ಮಾಡಲು ಅರ್ಹನಾಗಿದ್ದಾನೆ ಇತಿ=ಹೀಗೆಂದು, ಆಹ=ಹೇಳಿದನು.

ತಾತ್ಪರ್ಯ. —ಶರಣಾಗತನಾಗಿ ಬಂದ ವಿಭೀಷಣನು ಶತೃಪಕ್ಷದವನಾದ್ದರಿಂದ ಇವನು ಪರಿಗ್ರಾಹ್ಯನಲ್ಲವೆಂದು ಜಾಂಬವಾದಿ ಸಮಸ್ತ ವಾನರ ಪ್ರಮುಖರು ಹೇಳುತ್ತಿರಲಾಗಿ, ಶ್ರೀರಾಮನ ಬಲ ದೇವತೆಯ ಎರಡನೇ ಅಭಿಮಾನ ದೇವತೆಯಂತಿರುವ ಶ್ರೀ ಹನುಮಂತನು ಹೇಳುತ್ತಾನೆ:— ಶರಣಾಗತನಾಗಿರುವ ಈ ವಿಭೀಷಣನು ಶ್ರೀರಾಮನ ಪಾದಗಳಲ್ಲಿ

ಅತ್ಯಂತ ಭಕ್ತಿಯುಳ್ಳವನು. ರಾವಣನು ಅತಿ ಶೀಘ್ರವಾಗಿ ನಾಶವಾಗ ತಕ್ಕವನೆಂದು ತಿಳಿದು ಆ ಲಂಕಾರಾಜ್ಯವನ್ನು ತಾನು ಅನುಭವಿಸಬೇಕೆಂಬ ಉದ್ದೇಶ್ಯದಿಂದ ಇಲ್ಲಿಗೆ ಬಂದು ಶರಣಾಗತನಾಗಿದ್ದಾನೆ, ಆದ್ದರಿಂದ ಈತನು ಪರಿಗ್ರಹ ಮಾಡುವುದಕ್ಕೆ ಅರ್ಹನಾಗಿದ್ದಾನೆಂದು ಹೇಳಿದನು.

**ಶ್ಲೋಕ ॥ ಇತ್ಯುಕ್ತೆ ವತ್ಯಥ ಹನೂಮತಿ ದೇವದೇವಃ ।**
**ಸಂಗೃಹ್ಯತದ್ವಚನ ಮಾಹ ಯಥೈವ ಪೂರ್ವಂ ॥**
**ಸುಗ್ರೀವ ಹೇತುಕ ಇಮಂ ಸ್ಥಿರ ಮಾಗ್ರಹಿಷ್ಯೇ ।**
**ಪಾದಪ್ರಪನ್ನ ಮಿದಮೇವ ಸದಾವ್ರತಂ ಮೇ ॥೬॥**

ಅರ್ಥ.—ದೇವದೇವಃ=ಸಮಸ್ತ ದೇವತೆಗಳಿಗೂ ಸ್ವಾಮಿಯಾದ ಶ್ರೀರಾಮನು, ಹನೂಮತಿ=ಹನುಮಂತನು, ಇತಿ=ಈ ಪ್ರಕಾರ, ಉಕ್ತ ವತಿಸತಿ=ಹೇಳುತ್ತಿರಲಾಗಿ, ತದ್ವಚನಂ=ಆ ಮಾತನ್ನು, ಸಂಗೃಹ್ಯ=ಸ್ವೀಕಾರ ಮಾಡಿ, ಪೂರ್ವಂ=ಮೊದಲು, ಸುಗ್ರೀವಹೇತುಕಃ=ಸುಗ್ರೀವನ ವಿಷಯದಲ್ಲಿ, ಯಥಾ=ಹೇಗೆ, ಪರಿಗ್ರಹ ಮಾಡಲ್ಪಟ್ಟಿತೋ ತಥೈವ=ಅದೇ ರೀತಿಯಾಗಿ, ಪಾದಪ್ರಪನ್ನಂ=ಪಾದಾಕ್ರಾಂತನಾಗಿರತಕ್ಕ, ಇಮಂ=ಈ ವಿಭೀಷಣನನ್ನು, ಸ್ಥಿರಂ=ದೃಢವಾಗಿ, ಆಗ್ರಹಿಷ್ಯೇ=ಸ್ವೀಕಾರ ಮಾಡುತ್ತೇನೆ, ಇದಮೇವ= ಈ ಶರಣಾಗತ ರಕ್ಷಣೆಯೇ, ಮೇ=ನನಗೆ, ಸದಾ=ಸರ್ವಕಾಲದಲ್ಲಿಯೂ, ವ್ರತಂ=ಸ್ವತಃ ಸಿದ್ಧವಾದ ಸಂಕಲ್ಪವು, ಇತಿ=ಹೀಗೆಂದು, ಆಹ=ಹೇಳಿದನು

ತಾತ್ಪರ್ಯ.—ಹನುಮಂತನು ವಿಭೀಷಣನ ವಿಷಯದಲ್ಲಿ ಇವನು ಶ್ರೀರಾಮನ ಪಾದಗಳಲ್ಲಿ ಅತ್ಯಂತ ಭಕ್ತಿಯುಳ್ಳವನಾದ್ದರಿಂದ ಶತ್ರುಪಕ್ಷ ದವನಾದಾಗ್ಯೂ ಶರಣಾಗತನಾಗಿ ಇಲ್ಲಿಗೆ ಬಂದಿರುವ ಕಾರಣ ಪರಿಗ್ರಹ ಮಾಡುವುದಕ್ಕೆ ಅರ್ಹನಾಗಿರುತ್ತಾನೆಂದು ಹೇಳಿದನು. ಈ ವಾಕ್ಯವನ್ನು ದೇವತೆಗಳಿಗೆ ದೇವನಾದ ಶ್ರೀರಾಮನು ಅಂಗೀಕಾರಮಾಡಿ ಹೇಳುತ್ತಾನೆ:— ನಾನು ಪೂರ್ವದಲ್ಲಿ ಶರಣಾಗತನಾದ ಸುಗ್ರೀವನನ್ನು ಯಾವ ಕಾರಣದಿಂದ ಪರಿಗ್ರಹ ಮಾಡಿದೆನೋ ಅದೇ ಕಾರಣದಿಂದ ಪಾದಾಕ್ರಾಂತನಾದ ಈ ವಿಭೀಷಣನನ್ನೂ ದೃಢವಾಗಿ ಪರಿಗ್ರಹ ಮಾಡುತ್ತೇನೆ, ಶರಣಾಗತ ರಕ್ಷಣೆಯೇ ನನಗೆ ಯಾವಾಗಲೂ ಸ್ವತಃ ಸಿದ್ಧವಾದ ಸಂಕಲ್ಪವಾಗಿರುತ್ತದೆ-

**ಶ್ಲೋಕ || ಸಬ್ರಹ್ಮಕಾಃ ಸುರಗಣಾಃ ಸಹದೈತ್ಯ ಮರ್ತ್ಯಾಃ |**
**ಸರ್ವೇ ಸಮೇತ್ಯ ಚ ಮದಂಗುಳಿಚಾಲನೇಪಿ ||**
**ನೇಶಾಭಯಂ ನ ಮಮ ರಾತ್ರಿ ಚರಾ ದಮುಷ್ಮಾ |**
**ಚ್ಛುದ್ಧಃ ಸ್ವಭಾವ ಇತಿ ಚೈನ ಮಹಂವಿಜಾನೇ ||೭||**

ಅರ್ಥ.—ಸಬ್ರಹ್ಮಕಾಃ=ಬ್ರಹ್ಮದೇವರಿಂದ ಸಹಿತರಾಗಿ, ಸರ್ವೇ-ಸಮಸ್ತವಾದ, ಸುರಗಣಾಃ=ದೇವತೆಗಳ ಸಮೂಹವು, ದೈತ್ಯಮರ್ತ್ಯಾಃ=ದೈತ್ಯರೂ ಮನುಷ್ಯರೂ, ಸಹ =ಸಹಿತರಾಗಿ, ಸಮೇತ್ಯ = ಮಿಳಿತರಾಗಿ, ಮದಂಗುಳಿಚಾಲನೇಪಿ= ನನ್ನ ಬೆರಳನ್ನು ಅಲ್ಲಾಡಿಸುವುದಕ್ಕೂ ಸಹ, ಈಶಾಃ=ಸಮರ್ಥರು, ನಭವಂತಿ=ಆಗಲಾರರು, ಮಮ =ನನಗೆ, ಅಮುಷ್ಮಾತ್=ಇಲ್ಲಿಗೆ ಬಂದಿರತಕ್ಕ, ರಾತ್ರಿಚರಾತ್=ರಾಕ್ಷಸನಾದ, ವಿಭೀಷಣನಿಂದ ಭಯಂ=ಭಯವು, ನಾಸ್ತಿ=ಇಲ್ಲವು, ಏನಂ=ಇವನನ್ನು, ಶುದ್ಧ ಸ್ವಭಾವ ಇತಿ=ನಿಷ್ಕಪಟ ಸ್ವಭಾವವುಳ್ಳವನನ್ನಾಗಿ, ಅಹಂ=ನಾನು, ವಿಜಾನೇ=ತಿಳಿದಿದ್ದೇನೆ, ಇತಿ=ಹೀಗೆಂದು, ಶ್ರೀರಾಮನು ಉವಾಚ=ಹೇಳಿದನು.

ತಾತ್ಪರ್ಯ.—ಈ ವಿಭೀಷಣನು ಶತ್ರುವಿನ ಪಕ್ಷದಿಂದ ಬಂದಿರುತ್ತಾನೆಂದು ಕಪಿಗಳು ಹೇಳಿದ್ದಕ್ಕೆ ಶ್ರೀರಾಮನು ಉತ್ತರವನ್ನು ಹೇಳುತ್ತಾನೆ. ಈ ಜಗತ್ತಿನಲ್ಲಿರತಕ್ಕ ದೈತ್ಯರು ಮತ್ತು ಮನುಷ್ಯರೂ ಸೇರಿ ಬ್ರಹ್ಮದೇವರಿಂದ ಸಹಿತರಾದ ಸಮಸ್ತ ದೇವತೆಗಳೂ ಸಹ ಮಿಳಿತರಾಗಿ ನನ್ನ ಒಂದು ಬೆರಳನ್ನು ಅಲ್ಲಾಡಿಸಲು ಶಕ್ತರಾಗಲಾರರು. ಹೀಗಿರುವಲ್ಲಿ ಇಲ್ಲಿಗೆ ಬಂದ ಒಬ್ಬ ರಾಕ್ಷಸನೇನು ಮಾಡಿಯಾನು? ಈ ವಿಭೀಷಣನಿಂದ ನನಗೇನೂ ಭಯವಿಲ್ಲ. ಅದಲ್ಲದೆ ಇವನು ನಿಷ್ಕಪಟವಾದ ಶುದ್ಧ ಸ್ವಭಾವವುಳ್ಳವನೆಂದು ನಾನು ತಿಳಿದುಕೊಂಡಿದ್ದೇನೆ ಎಂದು ಶ್ರೀರಾಮನು ಹೇಳಿದನು.

**ಶ್ಲೋಕ || ಇತ್ಯುಕ್ತವಾಕ್ಯ ಉತ ತಂ ಸ್ವಜನಂ ವಿಧಾಯ |**
**ರಾಜ್ಯೇಭಿಷೇಚಯ ದಪಾರ ಸುಸತ್ವ ರಾಶಿಃ ||**
**ಮತ್ವಾ ತೃಣೋಪಮಮಶೇಷಸದಂತಕಂ ತಂ |**
**ರಕ್ಷಃ ಪತೇಸ್ತ್ವವರಚಸ್ಯ ದದೌಸಲಂಕಾಂ ||೮||**

ಅರ್ಥ.—ಇತ್ಯುಕ್ತವಾಕ್ಯಃ=ಈ ರೀತಿಯಾಗಿ ಹೇಳಲ್ಪಟ್ಟ ವಾಕ್ಯವುಳ್ಳ, ಸಃ=ಆ ಶ್ರೀರಾಮನು, ತಂ=ಆ ವಿಭೀಷಣನನ್ನು, ಸ್ವಜನಂ=ತನ್ನ

ಸ್ವಂತ ಸೇವಕನನ್ನಾಗಿ ಮಾಡಿಕೊಂಡು. ಉತ = ಅನಂತರ, ರಾಜ್ಯೇ-ಲಂಕಾರಾಜ್ಯದಲ್ಲಿ. ಅಭಿಷೇಚಯುತ್=ಪಟ್ಟಾಭಿಷೇಕ ಮಾಡಿದರು. ಸಃ=ಆ ರಾಮನು. ಅಪಾರ ಸ್ವಸತ್ವರಾಶಿಃ - ಅಪಾರ=ಅಪರಿಮಿತವಾದ, ಸು = ಸಮೀಚೀನವಾದ ಸತ್ವ = ಸ್ವಾಭಾವಿಕವಾದ ಬಲವುಳ್ಳವನಾದ್ದರಿಂದಲೇ, ಅಶೇಷ ಸದಂತಕಂ: ಅಶೇಷ=ಸಮಸ್ತರಾದ, ಸತ್=ಸಜ್ಜನರಿಗೆ, ಅಂತಕಂ=ಯಮಸ್ವರೂಪನಾದ, ತಂ=ಆ ರಾವಣನನ್ನು, ತೃಣೋಪಮಂ=ತೃಣಕ್ಕೆ ಸಮಾನನಾದವನನ್ನಾಗಿ. ಮತ್ವಾ = ತಿಳಿದು, ರಕ್ಷಃಪತೇಃ = ರಾಕ್ಷಸರಾಜನಾದ ರಾವಣನಿಗೆ ಅವರಜಸ್ಯತ:=ತಮ್ಮನಾದ ವಿಭೀಷಣನಿಗೆ, ಲಂಕಾಂ=ಲಂಕಾರಾಜ್ಯವನ್ನು ದದೌ=ಕೊಟ್ಟನು.

ತಾತ್ಪರ್ಯ: ಶ್ರೀರಾಮನು ವಿಭೀಷಣನು ಶತ್ರುಪಕ್ಷದವನಾದಾಗ್ಯೂ ಇವನಿಂದ ನನಗೇನೂ ಭಯವಿಲ್ಲ, ಮತ್ತು ಈ ವಿಭೀಷಣನು ನಿಷ್ಕಪಟಿ ಸ್ವಭಾವವುಳ್ಳವನೆಂಬ ವಿಷಯವನ್ನು ನಾನು ತಿಳಿದಿದ್ದೇನೆ ಎಂದು ಹೇಳಿ ಅವನನ್ನು ತನ್ನ ಸೇವಕನನ್ನಾಗಿ ಮಾಡಿಕೊಂಡು ಲಂಕಾರಾಜ್ಯದಲ್ಲಿ ಪಟ್ಟಾಭಿಷೇಕ ಮಾಡಿದನು. ಆದರೆ ಇವನ ಭ್ರಾತೃವಾದ ರಾವಣನು ಲಂಕಾಕ್ಕೆ ರಾಜನಾಗಿ ಜೀವಸಹಿತನಾಗಿರಲಾಗಿ ಇವನಿಗೆ ಹೇಗೆ ಪಟ್ಟಾಭಿಷೇಕ ಮಾಡಿದನು ಎಂದು ಕೇಳಿದರೆ, ಶ್ರೀರಾಮನು ಸ್ವತಃ ಅಪರಿಮಿತವಾದ ಮತ್ತು ಸಮೀಚೀನವಾದ ಬಲದ ರಾಶಿಯುಳ್ಳವನಾದ್ದರಿಂದ ಸಮಸ್ತ ಸಜ್ಜನರಿಗೂ ಕಾಲಾಂತಕ ರೂಪಿಯಾದ ರಾವಣರಾಜನನ್ನು ತೃಣಕ್ಕೆ ಸಮನನ್ನಾಗಿ ತಿಳಿದು, ಅವನ ತಮ್ಮನಾದ ವಿಭೀಷಣನಿಗೆ ಲಂಕಾರಾಜ್ಯವನ್ನು ಕೊಟ್ಟನೆಂದು ತಾತ್ಪರ್ಯ.

ಶ್ಲೋಕ|| ಕಲ್ಪಾಂತಮಸ್ಯ ನಿಶಿಚಾರಿ ಪತಿತ್ವ ಪೂರ್ವ |
ಮಾಯುಃ ಪ್ರದಾಯ ನಿಜಲೋಕಗತಿಂ ತದಂತೇ ||
ರಾತ್ರಿತ್ರಯೇ ಪ್ಯನುಪಗಾಮಿನಮೀಕ್ಷ್ಯ ಸೋಬ್ಧಿಂ |
ಚುಕ್ರೋಧ ರಕ್ತನಯನಾಂತಮುಯುಂಜದಬ್ಧೌ ||೯||

ಅರ್ಥ.—ಸಃ - ಶ್ರೀರಾಮನು, ಅಸ್ಯ=ಈ ವಿಭೀಷಣನಿಗೆ, ನಿಶಿಚಾರಿ ಪತಿತ್ವಂ-ನಿಶಿಚಾರಿ-ರಾತ್ರಿಂಚರರಾದ ರಾಕ್ಷಸರಿಗೆ, ಪತಿತ್ವಪೂರ್ವಂ-ಸ್ವಾಮಿ

ತ್ವ ಪೂರ್ವಕವಾಗಿ, ಕಲ್ಪಾಂತಂ = ಬ್ರಹ್ಮದೇವರ ದಿನ ಕಲ್ಪದವರೆವಿಗೂ, ಆಯುಃ=ದೀರ್ಘಾಯುವನ್ನು, ತದಂತೇ-ಆ ಬ್ರಹ್ಮಕಲ್ಪಾನಂತರದಲ್ಲಿ, ನಿಜ ಲೋಕಗತಿಂ=ತನ್ನ ಸ್ವಂತ ಲೋಕಮಾರ್ಗವನ್ನೂ, (ಬ್ರಹ್ಮದೇವರಿಂದ ಸಹ ಮುಕ್ತಿಯನ್ನೂ) ಪ್ರದಾಯ-ಕೊಟ್ಟು, ಸಃ=ಶ್ರೀರಾಮನು, ರಾತ್ರಿತ್ರಯೇಪಿ= ಮೂರು ರಾತ್ರಿಗಳಾದಾಗ್ಯೂ, ಅನುಗಾಮಿನಂ=ತನ್ನ ಸನ್ನಿಧಾನಕ್ಕೆ ಬಾ ರದೇ ಇರತಕ್ಕ, ಅಬ್ಧಿಂ-ಸಮುದ್ರನನ್ನು, ಈಕ್ಷ್ಯ-ನೋಡಿ, ಚುಕ್ರೋಧ= ಕೋಪಗೊಂಡರು. ಮತ್ತು ಅಬ್ಧೌ = ಸಮುದ್ರದಲ್ಲಿ, ರಕ್ತನಯನಾಂಕಂ- ಕೆಂಪಗೆ ಮಾಡಲ್ಪಟ್ಟ ಕಡೆಗಣ್ಣಿನ ನೋಟವನ್ನು, ಅಯುಂಜತ್=ಪ್ರಯೋ ಗಿಸಿದರು. (ಕೋಪದಿಂದ ಕಣ್ಣು ಕೆಂಪಗೆ ಮಾಡಿಕೊಂಡು ಆ ಕಣ್ಣಿನಿಂದ ಸಮುದ್ರದ ಕಡೆಗೆ ನೋಡಿದರೆಂದು ತಾತ್ಪರ್ಯವು.)

ತಾತ್ಪರ್ಯ.—ವಿಭೀಷಣನು ಶ್ರೀರಾಮನ ಪ್ರಸಾದದಿಂದ ಲಂಕಾಧಿ ಪತ್ಯವನ್ನು ಹೊಂದಿ ವೈವಸ್ವತ ಮನ್ವಂತರಕಾಲ ಪರ್ಯಂತ ರಾವಣನ ತಮ್ಮನೆಂದೆನಿಸಿಕೊಂಡು ಬ್ರಹ್ಮ ದಿನದ ಕೊನೆಯಾದ ಮಹಾ ಕಲ್ಪ ಪರಿ ಯಂತ ಬ್ರಹ್ಮ ಲೋಕವನ್ನು ಹೊಂದಿ ಅನಂತರ ಬ್ರಹ್ಮದೇವರಿಂದ ಸಹಿತ ನಾಗಿ ಮುಕ್ತಿಯನ್ನು ಹೊಂದುತ್ತಾನೆಂದು ತಿಳಿಯಬೇಕು. ಈ ವಿಷಯ ದಲ್ಲಿ ಬ್ರಹ್ಮ ಪುರಾಣದಲ್ಲಿರುವ ಮಹಾತ್ಮ್ಯ ವಾಕ್ಯದಲ್ಲಿ ಪ್ರಮಾಣವುಕ್ತವಾ ಗಿದೆ. ಹೇಗೆಂದರೆ:— ಶ್ಲೋಕ —ಆಯುಶ್ಚ ಪರಮಂದತ್ತಂ। ಐಶ್ವರ್ಯ ಮತುಲಂಭುವಿ ॥ ಉಪೇಷ್ಯಸಿ ಬ್ರಹ್ಮಲೋಕಂ । ಪುನರ್ಲಂಕಾಂ ಸಮೇಷ್ಯ ಸಿ॥ ದ್ವಿಪರಾರ್ಧಾವಸಾನೇತ್ವಂ । ಮಯಾಸಹ ವಿಭೀಷಣ ॥ ಪ್ರಯಾಸ್ಯಸಿ ಪರಂ ಲೋಕಂ ಸರ್ಗ ಪ್ರಲಯವರ್ಜಿತಂ॥ ಇತಿ॥ ಕಲ್ಪಶ್ಚ ಪ್ರಲಯೇನ್ಯಾ ಯೇ। ಶಾಸ್ತ್ರೇ ಬ್ರಹ್ಮದಿನೇ ಸ್ಮೃತಂ॥ ಎಂಬ ವಚನದಿಂದ ಕಲ್ಪ ಶಬ್ದವು ಬ್ರಹ್ಮದೇವರ ದಿನ ಕಾಲವೆಂದು ತಿಳಿಯಬೇಕು.

ಶ್ಲೋಕ ॥ ಸಕ್ರೋಧದೀಪ್ತನಯನಾಂತ ಹತಃ ಪರಸ್ಯ ।
ಶೋಷಂ ಕ್ಷಣಾದುಪಗತೋದನಜಾದಿಸತ್ವೈಃ ।
ಸಿಂಧುಃ ಶಿರಸ್ಯರ್ಹಣಂ ಪರಿಗೃಹ್ಯ ರೂಪೀ ।
ಪಾದಾರವಿಂದಮುಪಗಮ್ಯ ಬಭಾಷ ಏತತ್ ॥೧೧॥

ಅರ್ಥ.— ಪರಸ್ಯ = ಪರಮಾತ್ಮನಾದ ಶ್ರೀರಾಮನ, ಸಕ್ರೋಧವಿಸ್ಫುರನಯನಾಂತಹತಃ = ಸಕ್ರೋಧ – ಕೋಪದಿಂದ ಸಹಿತವಾದ, ದೀಪ್ತ = ಜಾಜ್ವಲ್ಯಮಾನವಾದ, ನಯನಾಂತ=ಕಡೆಗಣ್ಣಿನ ನೋಟದಿಂದ, ಹತಃ = ಪೆಟ್ಟು ತಿಂದವನಾದ, ಸಃ – ಆ ಸಮುದ್ರನು, ದನುಜಾದಿಸತ್ವೈಃ– ದಾನವಾದಿ ಜಾತಿಯೇ ಮೊದಲಾದ, ಸತ್ವೈಃ = ಜಲಚರಾದಿ ನಾನಾ ಪ್ರಾಣಿಗಳಿಂದ ಕೂಡಿ, ಕ್ಷಣಾತ್ = ಕ್ಷಣ ಮಾತ್ರದಲ್ಲಿಯೇ, ಕ್ಷೋಭಂ = ಕ್ಷೋಭವನ್ನು, ಉಪಗತಃ = ಹೊಂದಿದನು, (ಅನಂತರ) ಸಿಂಧುಃ=ಸಮುದ್ರವು ರೂಪೀರ್ಣ = ವರುಣರೂಪನಾಗಿ, ಶಿರಸಿ – ಶಿರಸ್ಸಿನಲ್ಲಿ, ಅರ್ಹಣಂ –ಪೂಜಾ ಸಾಮಗ್ರಿಯನ್ನು, ಪರಿಗೃಹ್ಯ – ಧಾರಣ ಮಾಡಿಕೊಂಡು, ಪಾದಾರವಿಂದಂ = ಶ್ರೀರಾಮರ ಪಾದಕಮಲಗಳನ್ನು, ಉಪಗಮ್ಯ – ಹೊಂದಿ, ಏತತ್ = ಮುಂದೆ ಹೇಳುವ ರೀತಿಯಲ್ಲಿ, ಬಭಾಷೇ = ಮಾತನಾಡಿದನು.

ತಾತ್ಪರ್ಯ.—ಶ್ರೀರಾಮನು ಸಮುದ್ರ ತೀರದಲ್ಲಿ ಮಾರ್ಗಾರ್ಥಿಯಾಗಿ ನಿರೀಕ್ಷಣ ಮಾಡಿ ಮಲಗಿಕೊಂಡು ಮೂರು ದಿವಸಗಳಾದಾಗ್ಯೂ ಸಮುದ್ರರಾಜನು ಇವನ ದರ್ಶನಕ್ಕೆ ಬರದೇ ಇರುವುದನ್ನು ನೋಡಿ ಕೋಪಗೊಂಡು ಕೆರಳಿದ ಕಣ್ಣುಗಳ ಕಡೆನೋಟದಿಂದ ಸಮುದ್ರನನ್ನು ನೋಡಲಾಗಿ ಆ ನೋಟ ಮಾತ್ರದಿಂದಲೇ ತನ್ನಲ್ಲಿ ವಾಸಮಾಡಿಕೊಂಡಿದ್ದ ದಾನವರು ಮೊದಲಾದ ಜಲಚರಪ್ರಾಣಿಗಳ ಸಮೇತನಾಗಿ ಕ್ಷೋಭವನ್ನು ಹೊಂದಿ ಭಯಗ್ರಸ್ಥನಾದ ಸಮುದ್ರನು ತನ್ನ ನಿಜರೂಪವಾದ ವರುಣರೂಪದಿಂದ ಶ್ರೀರಾಮನ ಪಾದಪೂಜೆಗೆ ಬೇಕಾದ ಸಾಮಗ್ರಿಯನ್ನು ಶಿರಸ್ಸಿನಲ್ಲಿ ಇಟ್ಟುಕೊಂಡು ಶ್ರೀರಾಮನಪಾದಾರವಿಂದವನ್ನು ಸೇರಿ ಮುಂದೆ ಹೇಳುವ ಪ್ರಕಾರ ಮಾತನಾಡಿದನು.

**ಶ್ಲೋಕ ॥ ತಂ ತ್ವಾ ವಯಂ ಜಡಧಿಯೋ ನವಿದಾಮ ಭೂಮನ್ ।**
**ಕೂಟಸ್ಥಮಾದಿಪುರುಷಂ ಜಗತಾಮಧೀಶಂ ॥**
**ತ್ವಂಸತ್ವತಃ ಸುರಗಣಾನ್ ರಜಸೋ ಮನುಷ್ಯಾಂ ।**
**ಸ್ತಾಮಸಯತೋ ಸುರಗಣಾನ್ ಸಭಿತಸ್ತಥಾಸ್ತ್ರಾಃ ॥೧೧॥**

ಶ್ಲೋಕ ॥ ಕಾಮಂ ಪ್ರಯಾಹಿ ಜಹಿವಿಶ್ರವಸೋಽವಮೋಹಂ ।
ತ್ರೈಲೋಕ್ಯ ರಾವಣಮವಾಪ್ನುಹಿ ವೀರಪತ್ನೀಂ॥
ಬಧ್ನೀಹಿ ಸೇತುಮಿಹತೇಯಶಸೋ ವಿತತ್ಯೈ ।
ಗಾಯಂತಿ ದಿಗ್ವಿಜಯಿನೋ ಯಮುಪೇತ್ಯ ಭೂಪಾಃ ॥೧೨॥

ಅರ್ಥ.—ಸಃ = ವರುಣ ರೂಪವನ್ನು ಹೊಂದಿರುವ ಸಮುದ್ರನು, ಹೇ ಭೂಮನ್ = ಮಹಾ ಸ್ವಾಮಿಯೇ, ತ್ವಂ = ನೀನು, ಅಭಿತಃ = ಸರ್ವ ಕಲ್ಪಗಳಲ್ಲಿಯೂ, ಸತ್ವತಃ = ಸತ್ವ ಗುಣದ ದೆಶೆಯಿಂದ, ಸುರಗಣಾನ್ = ದೇವತಾ ಸಮೂಹಗಳನ್ನು, ರಜಸಃ = ರಜೋಗುಣದ ದೆಶೆಯಿಂದ ಮನುಷ್ಯಾನ್ – ಮನುಷ್ಯರನ್ನೂ. ತಥಾ = ಹಾಗೆಯೇ, ತಾತಿ ಯತಃ–ಮೂರನೆಯದಾದ ತಮೋಗುಣದ ದೆಶೆಯಿಂದ, ಅಸುರಗಣಾನ್ = ದೈತ್ಯ ಸಮೂಹಗಳನ್ನೂ, ಅಸ್ರಾಃ = ಸೃಷ್ಟಿಸಿದ್ಧೀಯೋ, ತಂ – ಅಂತಹ ಪ್ರಸಿದ್ಧನಾದ, ಕೂಟಸ್ಥಂ = ನಿರ್ವಿಕಾರವಾದ, ಆದಿಪುರುಷಂ = ಪುರಾಣ ಪುರುಷನಾದ, ಜಗತಾಂ = ಸಮಸ್ತ ಜಗತ್ತುಗಳಿಗೂ, ಅಧೀಶಂ = ಪ್ರಭುವಾದ, ತ್ವಾ= ನಿನ್ನನ್ನು, ಜಡಧಿಯಃ=ಜಡ ಸದೃಶವಾದ ಮಂದ ಬುದ್ಧಿಯುಳ್ಳ ವಯಂ= ನಾವುಗಳು, ನವಿದಾಮ=ತಿಳಿದುಕೊಳ್ಳಲಾರೆವು. ॥೧೧॥

ಅರ್ಥ.—ಹೇ ಸ್ವಾಮಿಯೇ ! ತ್ವಂ = ನೀನು, ಕಾಮಂ – ನಿನ್ನ ಇಚ್ಛಾನುಸಾರವಾಗಿ, ಪ್ರಯಾಹಿ = ಈ ಸಮುದ್ರ ಮಾರ್ಗವಾಗಿ ಹೋಗು. ವಿಶ್ರವಸಃ = ವಿಶ್ರವಸ್ಸುನಾಮಕ ಋಷಿಯು, ಅವಮೋಹಂ = ರೇತೋವಿಕಾರನಾದ, ತ್ರೈಲೋಕ್ಯರಾವಣಂ=ಮೂರು ಲೋಕಕ್ಕೂ ರೋದನಕಾರಕನಾದ ರಾವಣನನ್ನು, ಜಹಿ = ಸಂಹರಿಸು. ವೀರಪತ್ನೀಂ – ವೀರ ಪತ್ನಿಯಾದ ಸೀತಾ ಕೃತಿಯನ್ನು, ಅವಾಪ್ನುಹಿ – ಹೊಂದು. ತೇ = ನಿನ್ನ, ಶಯಸಃ – ಕೀರ್ತಿಯು, ವಿತತ್ಯೈ = ಪ್ರಸಿದ್ಧಿ ಹೊಂದುವುದಕ್ಕೋಸ್ಕರ, ಸೇತುಂ – ಸೇತುವೆಯನ್ನು, ಬಧ್ನೀಹಿ = ಬಂಧನಮಾಡು. ತದಾ = ಆಗ, ಯಂ= ಯಾವ ಸೇತುವೆಯನ್ನು, ದಿಗ್ವಿಜಯಿನಃ = ದಿಗ್ವಿಜಯ ಮಾಡತಕ್ಕ, ಭೂಪಾಃ – ರಾಜರುಗಳು, ಉಪೇತ್ಯ – ಹೊಂದಿ. ಗಾಯಂತಿ = ನಿನ್ನ ಕೀರ್ತಿಯನ್ನು ಹೊಗಳುತ್ತಾರೆಯೋ ಆದ್ದರಿಂದ ಸೇತು ಬಂಧನ ಮಾಡೆಂದು ಶರಣಾಗತನಾದ ಸಮುದ್ರರಾಜನು ತನ್ನ ನಿಜರೂಪವಾದ ವರುಣ ರೂಪವನ್ನು ಹೊಂದಿ ಶ್ರೀರಾಮನನ್ನು ಕುರಿತು ಮಾತನಾಡಿದನು. ॥೧೨॥

ತಾತ್ಪರ್ಯ—ವರುಣರೂಪಿಯಾದ ಸಮುದ್ರರಾಜನು, ಶ್ರೀರಾಮನ ರಕ್ತಾಂತನೇತ್ರದ ದೃಷ್ಟಿಯಿಂದ ತಪ್ತನಾಗಿ ಭಯಪಟ್ಟು ಪೂಜಾ ಸಾಮಗ್ರಿಯಿಂದ ಸಹಿತನಾಗಿ ಶ್ರೀರಾಮನ ಬಳಿಬಂದು ಶ್ರೀರಾಮನನ್ನು ಕುರಿತು ಮಾತನಾಡುತ್ತಾ ಸ್ತೋತ್ರ ಮಾಡುತ್ತಾನೆ. ಮಹಾ ಸ್ವಾಮಿಯೇ! ಮಂದಬುದ್ಧಿಯುಳ್ಳ ನಾವುಗಳು ನಿರ್ವಿಕಾರನಾದ ಮತ್ತು ಪುರಾತನ ಪುರುಷನಾದ ಸಮಸ್ತ ಜಗತ್ತುಗಳಿಗೂ ಪ್ರಭುವಾದ ನಿನ್ನನ್ನು ಹೇಗೆ ತಿಳಿದೇವು? ನೀನಾದರೋ ಸತ್ವಗುಣದಿಂದ ದೇವತಾ ಸಮೂಹಗಳನ್ನೂ ರಜೋಗುಣದಿಂದ ಮನುಷ್ಯರನ್ನೂ ಮೂರನೆಯದಾದ ತಮೋಗುಣದಿಂದ ದೈತ್ಯರನ್ನೂ ಕಲ್ಪ ಕಲ್ಪಗಳಲ್ಲಿಯೂ ಸೃಷ್ಟಿಮಾಡುತ್ತೀಯೆ, ಹೀಗೆ ಪ್ರಸಿದ್ಧನಾಗಿರುವ ಜಗತ್ಪ್ರಭುವಾದ ನಿನ್ನನ್ನು ನಾವು ಎಂದಿಗೂ ತಿಳಿಯಲಾರೆವು. ||೧೨||

ಪರಾಕ್ರಮಶಾಲಿಯಾದ ಪರಮಾತ್ಮನೇ! ನೀನು ನಿನ್ನ ಇಚ್ಛಾನುಸಾರ ಈ ಸಮುದ್ರವನ್ನು ದಾಟಿ ಹೋಗು. ವಿಶ್ರವಸಋಷಿಯ ರೇತೋವಿಕಾರನಾದ ಮತ್ತು ಮೂರು ಲೋಕದಲ್ಲಿ ರೋಧನಕ್ಕೆ ಕಾರಣನಾದ ರಾವಣನನ್ನು ಸಂಹಾರಮಾಡು, ವೀರಪತ್ನಿಯಾದ ಸೀತಾಕೃತಿಯನ್ನು ಹೊಂದು; ಮತ್ತು ನಿನ್ನ ಕೀರ್ತಿಯು ಪ್ರಸಿದ್ಧಿಯಾಗುವದಕ್ಕೋಸ್ಕರ ಸಮುದ್ರದಲ್ಲಿ ಸೇತು ಬಂಧನ ಮಾಡು; ಆಗ ದಿಗ್ವಿಜಯಾರ್ಥಿಗಳಾದ ಅನೇಕ ರಾಜರುಗಳು ಈ ಸೇತುವೆಯನ್ನು ನೋಡಿ (ಹೊಂದಿ) ಸಮಸ್ತರೂ ನಿನ್ನನ್ನು ಹೊಗಳುತ್ತಾರೆ ||೧೩|| ಹೀಗೆಂದು ಸಮುದ್ರರಾಜನು ಶ್ರೀರಾಮನನ್ನು ಶರಣಾಗತನಾಗಿ ತಾನು ತಲೆಯಮೇಲೆ ಹೊತ್ತುಕೊಂಡು ಬಂದಿದ್ದ ಪೂಜಾ ಸಾಮಗ್ರಿಗಳಿಂದ ಶ್ರೀರಾಮನನ್ನು ಪೂಜಿಸಿ ಪ್ರಾರ್ಥನೆ ಮಾಡಿಕೊಂಡನು.

**ಶ್ಲೋಕ॥ ಇತ್ಯುಕ್ತವಂತ ಮಮುಮಾಶ್ವನುಗೃಹ್ಯ ಬಾಣಂ।**
**ತಸ್ಮೈ ಧೃತಂದಿತಿಸುತಾತ್ಮಸು ಚಾಂತ್ಯಜೇಷು ॥**
**ಶರ್ವಾದ್ವರಾ ದ್ವಿಗತ ಮೃತ್ಯುಷು ದುರ್ಜಯೇಷು**
**ನಿಃಸಂಖ್ಯಕೇಷ್ವಮುಚದಾಶುದದಾಹ ಸರ್ವಾನ್ ||೧೪||**

ಅರ್ಥ.—ಸಃ=ಶ್ರೀರಾಮನು, ಇತಿ=ಈ ಪ್ರಕಾರವಾಗಿ, ಉಕ್ತವಂತಂ-ಮಾತನಾಡಿದ, ಅಮುಂ=ಈ ಸಮುದ್ರನನ್ನು, ಆಶು=ಕೂಡಲೇ, ಅನುಗೃಹ್ಯ=ಮನ್ನಿಸಿ, ತಸ್ಮೈ - ಅವನಿಗೋಸ್ಕರ, ಧೃತಂ = ಧಾರಣಮಾಡಿದ್ದ, ಬಾಣಂ=ಬಾಣವನ್ನು, ಶರ್ವಾತ್=ರುದ್ರದೇವರ, ವರಾತ್ - ವರಪ್ರಸಾದದಿಂದ, ವಿಗತಮೃತ್ಯುಷು=ಅವಧ್ಯರಾದ. ದುರ್ಜಯೇಷು=ಜಯಿಸಲಸಾಧ್ಯರಾದ, ನಿಃಸಂಖ್ಯಕೇಷು=ಇಷ್ಟೆಂದು ಎಣಿಸಲಸಾಧ್ಯರಾದ, ಅಂತ್ಯಜೇಷು-ಚಂಡಾಲರಲ್ಲಿಯೂ, ದಿತಿಸುತಾತ್ಮಸುಚ=ದಿತಿಯ ಪುತ್ರರಾದ ದೈತ್ಯರಲ್ಲಿಯೂ, ಅಮುಚತ್-ಪ್ರಯೋಗಮಾಡಿದನು. ಆಶು=ತತ್ಕ್ಷಣದಲ್ಲಿಯೇ, ಸರ್ವಾನ್-ಆ ಸಮಸ್ತ ದೈತ್ಯರನ್ನೂ ಮತ್ತು ಚಂಡಾಲರನ್ನೂ, ದಧಾಹ = ಆ ಬಾಣವು ಸುಟ್ಟುಬಿಟ್ಟಿತು.

ತಾತ್ಪರ್ಯ.—ಈ ಪ್ರಕಾರ ಪ್ರಾರ್ಥನೆಮಾಡಿ ಹೇಳುತ್ತಿರುವ ಸಮುದ್ರನನ್ನು ಕ್ಷಮಿಸಿ ಶ್ರೀರಾಮನು ಅವನಿಗೋಸ್ಕರ ಹೂಡಿದ್ದ ಭಾಣವನ್ನು ಅಲ್ಲಿದ್ದ ಅಸಂಖ್ಯಾಕರಾದ ಈಶ್ವರನ ವರಪ್ರಸಾದದಿಂದ ಅವಧ್ಯರಾದ, ಮತ್ತು ಜಯಿಸಲಸಾಧ್ಯರಾದ ದಿತಿದೇವಿಯ ಪುತ್ರರಾದ ದೈತ್ಯರುಗಳಲ್ಲೂ ಚಂಡಾಲರಲ್ಲೂ ಪ್ರಯೋಗ ಮಾಡಿ ಅವರೆಲ್ಲರನ್ನೂ ಸುಟ್ಟನೆಂದು ತಾತ್ಪರ್ಯ.

ಶ್ಲೋಕ॥ ಕೃತ್ವೇರಿಣಂತಮಥಮೂಲಫಲಾನಿಚಾತ್ರ।
ಸಮ್ಯಗ್ವಿಧಾಯ ಭವಶತ್ರುರಮೋಘಚೇಷ್ಟಃ॥
ಬದ್ಧುಂ ದಿದೇಶ ಸುರವರ್ಧಿಕಿನೋಽವತಾರಂ ।
ತಜ್ಜುಂನಲಂ ಹರಿವರಾನಪರಾಂಶ್ಚ ಸೇತುಂ ॥೧೪॥

ಅರ್ಥ.—ಭವಶತ್ರುಃ-ಭಕ್ತರ ಜನನ ಮರಣಾಖ್ಯ ಸಂಸಾರ ಕ್ಲೇಶಗಳನ್ನ ನಾಶಮಾಡುವ, ಅಮೋಘಚೇಷ್ಟಃ=ಅಮೋಘ-ಅಪರಿಮಿತವಾದ, ಚೇಷ್ಟಃ-ವ್ಯಾಪಾರವುಳ್ಳ, ಶ್ರೀರಾಮನು, ತತ್=ಆ ಸಮುದ್ರತೀರದಲ್ಲಿರುವ, ಈರಣಂ=ಪ್ರಸಿದ್ಧವಾದ ಊಷರಭೂಮಿ (ಯಾವ ಬೆಳೆಯೂ ಆಗದ ಪ್ರದೇಶವನ್ನು.) ಕೃತ್ವಾ=ಉತ್ತಮವಾದ ಭೂಮಿಯನ್ನಾಗಿ ಮಾಡಿ, ಅಥ=ಅನಂತರ, ಅತ್ರ-

ಆ ಭೂಮಿಯಲ್ಲಿ, ಫಲಾನಿ=ಕಂದಮೂಲ ಫಲಗಳನ್ನು, (ವೃಕ್ಷಗಳನ್ನು) ನೆಟ್ಟು ಸಸ್ಯಗ್ರಾಮಾಯ-ಫಲವತ್ತಾದ್ದನ್ನಾಗಿಮಾಡಿ, ಸುರವರ್ಧಕಿನಃ=ದೇವ ಬಡಗಿಯಾದ ವಿಶ್ವಕರ್ಮನ, ಅವತಾರಂ=ಅವತಾರರೂಪನಾದ, ತಜ್ಜಂ=ಆ ವಿಶ್ವಕರ್ಮನ ದೆಸೆಯಿಂದ ಉತ್ಪನ್ನನಾದ, ನಲಂ=ಕಪಿಸೇನಾಪತಿಯಾದ ನಲಶ್ರೇಷ್ಠನನ್ನೂ, ಅಪರಾನ್=ಇತರರಾದ, ಕಪಿವರಾಂಶ್ಚ=ಕಪಿಶ್ರೇಷ್ಠರುಗಳನ್ನೂ ಕುರಿತು, ಸೇತುಂ=ಸೇತುವೆಯನ್ನು. ಬದ್ಧುಂ=ಕಟ್ಟುವುದಕ್ಕೋಸ್ಕರ, ಆದಿದೇಶ=ಆಜ್ಞಾಪಿಸಿದನು.

ತಾತ್ಪರ್ಯ.—ಭಕ್ತರ ಜನನ ಮರಣಾಖ್ಯಸಂಸಾರ ದುಃಖವನ್ನು ಪರಿಹಾರಮಾಡತಕ್ಕ ಶ್ರೀರಾಮನು, ಸಮುದ್ರನನ್ನು ಕ್ಷಮಿಸಿ, ಅವನಿಂದ ಪ್ರಾರ್ಥಿತನಾಗಿ ವೃಕ್ಷ ಫಲಮೂಲಾದಿಗಳು ಯಾವದೂ ಬೆಳೆಯದಂತಹ ಊಷರಭೂಮಿಯಾಗಿರುವ ಆ ಪ್ರದೇಶದಲ್ಲಿ ಅಪರಿಮಿತವಾದ ವ್ಯಾಪಾರವುಳ್ಳವನಾದ ಶ್ರೀರಾಮನು ಫಲಮೂಲ ವೃಕ್ಷಗಳನ್ನು ನೆಟ್ಟು ಫಲಕಾರಿಯಾದ ಉತ್ತಮ ಭೂಮಿಯನ್ನಾಗಿ ಮಾಡಿದನು. ಅನಂತರ ಶ್ರೀರಾಮನು, ದೇವತೆಗಳಿಗೆ ಬಡಗಿಯಾದ ವಿಶ್ವಕರ್ಮನ ಅವತಾರಭೂತನಾದ, ವಿಶ್ವಕರ್ಮನಿಂದ ಉತ್ಪನ್ನನಾದ ವಾನರ ಸೇನಾಪತಿಯಾದ ನಲನೆಂಬ ಕಪಿಶ್ರೇಷ್ಠನನ್ನೂ ಮತ್ತು ಇತರ ವಾನರ ಶ್ರೇಷ್ಠರನ್ನೂ ಕುರಿತು ಸಮುದ್ರದಲ್ಲಿ ಲಂಕೆಯವರೆಗೆ ಸೇತುವೆಯನ್ನು ಕಟ್ಟುವಂತೆ ಆಜ್ಞೆಮಾಡಿದನು.

**ಶ್ಲೋಕ॥ ಬಧ್ವೋದಧೌ ರಘುಪತಿರ್ವಿವಿಧಾದ್ರಿಕೂಟೈಃ**
**ಸೇತುಂ ಕಪೀಂದ್ರ ಕರಕಂಪಿತ ಭೂರುಹಾಂಗೈಃ॥**
**ಸುಗ್ರೀವ ನೀಲ ಹನುಮತ್ಪ್ರಮುಖೈ ರನೀಕೈ।**
**ಲಂಕಾಂ ವಿಭೀಷಣದೃಶಾ ವಿಶದಾಶು ದಗ್ಧಾಂ ॥೧೫॥**

**ಅರ್ಥ.**—ರಘುಪತಿಃ-ರಘುಕುಲಶ್ರೇಷ್ಠನಾದ ಶ್ರೀರಾಮನು, ಕಪೀಂದ್ರ-ಕಪಿಶ್ರೇಷ್ಠರ, ಕರ=ಹಸ್ತಗಳಿಂದ, ಕಂಪಿತ=ಕಿತ್ತುಹಾಕಲ್ಪಟ್ಟ, ಭೂರುಹಾಂಗೈ=ವೃಕ್ಷಗಳ ಭೂಷ, ದೇಶವುಳ್ಳ, ವಿವಿಧಾದ್ರಿಕೂಟೈಃ=ವಿವಿಧ=ನಾನಾವಿಧಗಳಾದ ಅದ್ರಿಕೂಟೈಃ = ಪರ್ವತ ಶಿಖರಗಳಿಂದ, ಉದಧೌ - ಸ

ಸಮುದ್ರದಲ್ಲಿ, ಸೇತುಂ–ಸೇತುವೆಯನ್ನು, ಬಧ್ವಾ=ಕಟ್ಟಿ (ಆ ಮೂಲಕವಾಗಿ) ಶ್ರೀರಾಮನು, ಸುಗ್ರೀವನೀಲಹನುಮತ್ಪ್ರಮುಖೈಃ=ಸುಗ್ರೀವ, ನೀಲ, ಹನುಮಂತನೇ ಮೊದಲಾದ, ಅನೇಕೈಃ–ಇತರ ಅನೇಕ ಕಪಿಗಳಿಂದ ಸಹಿತನಾಗಿ, ವಿಭೀಷಣದೃಶಾ – ವಿಭೀಷಣನು ತೋರಿಸಿದ ಮಾರ್ಗವಾಗಿ, ದಗ್ಧಾಂ=ಮೊದಲೇ ಹನುಮಂತನಿಂದ ಸುಡಲ್ಪಟ್ಟಿದ್ದ, ಲಂಕಾಂ – ಲಂಕಾಪಟ್ಟಣವನ್ನು ಆಶು–ಶೀಘ್ರವಾಗಿ, ಅವಿಶತ್=ಪ್ರವೇಶಮಾಡಿದನು.

ತಾತ್ಪರ್ಯ.—ಶ್ರೀರಾಮನ ಆಜ್ಞಾಪ್ರಕಾರ ನೀಲಾದಿ ಸಮಸ್ತ ಕಪಿಗಳೂ ಅಲ್ಲಿದ್ದ ಗಿಡ ವೃಕ್ಷಗಳನ್ನು ಕಿತ್ತು ಸರಿಪಡಿಸಿದ ಭೂಮಿಯಲ್ಲಿ ಅನೇಕ ಶಿಖರಗಳುಳ್ಳ ಪರ್ವತಾದಿಗಳಿಂದ ಸೇತುವೆಯನ್ನು ನಿರ್ಮಾಣಮಾಡಿದರು. ಅನಂತರ ಶ್ರೀರಾಮನು ಸುಗ್ರೀವ, ನೀಲ, ಹನುಮಂತನು ಮೊದಲಾದ ಕಪಿ ಮುಖ್ಯರಿಂದಲೂ ಇನ್ನೂ ಅನೇಕ ಕಪಿಶ್ರೇಷ್ಠರಿಂದಲೂ ಸಹಿತನಾಗಿ ವಿಭೀಷಣನು ತೋರಿಸಿದ ಮಾರ್ಗದಿಂದ ಪೂರ್ವದಲ್ಲಿಯೇ ಹನುಮಂತನು ಸುಟ್ಟು ಹಾಕಿದ್ದ ಲಂಕಾಪಟ್ಟಣವನ್ನು ಜಾಗ್ರತೆಯಾಗಿ ಪ್ರವೇಶಮಾಡಿದನು.

ಶ್ಲೋಕ॥ ಪ್ರಾಪ್ತಂ ನಿಶಮ್ಯ ಪರಮಂ ಭುವನೈಕಸಾರಂ।
ನಿಃಸ್ಸೀಮ ಪೌರುಷ ಮನಂತ ಮಸೌ ದಶಾಸ್ಯಃ॥
ತ್ರಾಸಾದ್ವಿಷಣ್ಣ ಹೃದಯೋ ನಿತರಾಂ ಬಭೂವ।
ಕರ್ತವ್ಯಕರ್ಮ ವಿಷಯೇ ಚ ವಿಮೂಢಚೇತಾಃ ॥೧೬॥

ಅರ್ಥ.—ಅಸೌ=ಈ, ದಶಾಸ್ಯಃ = ಹತ್ತು ಮುಖವುಳ್ಳ ರಾವಣನು, ಭುವನೈಕಸಾರಂ=ಭುವನ=ಪ್ರಪಂಚಕ್ಕೆ, ಏಕಸಾರಂ = ಮುಖ್ಯ ಬಲರೂಪನಾದ, ಪರಮಂ=ಅತ್ಯಂತ ಉತ್ಕೃಷ್ಟನಾದ, ನಿಃಸೀಮಪೌರುಷಂ=ನಿಸ್ಸೀಮ=ಅಪಾರವಾದ, ಪೌರುಷಂ=ತೇಜಸ್ಸುಳ್ಳ, ಅನಂತಂ – ಅಂತ್ಯ ರಹಿತನಾದ ಶ್ರೀರಾಮನನ್ನು ಪ್ರಾಪ್ತಂ=ತನಗೆ ಕೇವಲ ಸಮೀಪದಲ್ಲಿ ಬಂದಿರುವನನ್ನಾಗಿ, ನಿಶಮ್ಯ=ಕೇಳಿ ತ್ರಾಸಾತ್=ಭಯದ ದೆಶೆಯಿಂದ ನಿತರಾಂ=ಅತ್ಯಂತವಾಗಿ, ವಿಷಣ್ಣಃ = ದುಃಖಗೊಂಡ, ಹೃದಯಃ (ಸನ್) = ಮನಸುಳ್ಳವನಾಗಿ, ಕರ್ತವ್ಯಕರ್ಮವಿಷಯೇ=ತಾನು ಮುಂದೆ ಮಾಡಬೇಕಾದ ಕಾರ್ಯಗಳ ವಿಷಯದಲ್ಲಿ, ವಿಮೂಢಚೇತಾಶ್ಚ=ಮಂಕುಬುದ್ಧಿಯುಳ್ಳವನಾದನು.

ತಾತ್ಪರ್ಯ — ರಾಮನು ವಾನರ ಸೈನ್ಯ ಸಮೇತನಾಗಿ ಲಂಕಾಪ್ರವೇಶ ಮಾಡಿದನಂತರ ದಶಾಸ್ಯನಾದ ರಾವಣನು ಪರಮೋತ್ಕೃಷ್ಟನಾದ ಸಮಸ್ತ ಜಗತ್ತಿಗೂ ಮುಖ್ಯ ಸಾರಭೂತನಾದ ಅಪಾರ ತೇಜಸ್ಸುಳ್ಳ, ಅನಂತರೂಪ ನಾದ ಶ್ರೀರಾಮನು ಅತ್ಯಂತ ಸಮೀಪಕ್ಕೆ ಬಂದನೆಂಬ ವರ್ತಮಾನವನ್ನು ಕೇಳಿ ಭಯದಿಂದ ಅತ್ಯಂತ ವಿಷಾದಯುಕ್ತನಾದನು, ಮತ್ತು ತಾನು ಮುಂದೆ ಏನು ಮಾಡಬೇಕು ? ಎಂದು ಯೋಚಿಸಿ ಯಾವದೂ ತೋಚದೆ ಮಂದ ಬುದ್ಧಿಯುಳ್ಳವನಾದನು.

ಶ್ಲೋಕ॥ ಪ್ರಸ್ಥಾಪ್ಯ ವಾಲಿಸುತಮೇವ ಚ ರಾಜನೀತ್ಯೈ ।
ರಾಮಸ್ತದುಕ್ತವಚನೇ ಪ್ಯಮುನಾಗೃಹೀತೇ ॥
ದ್ವಾರೋ ರುರೋಧ ಸ ಚತಸ್ರ ಉದೀರ್ಣ ಸೈನ್ಯೋ ।
ರಕ್ಷಃಪತೇಃ ಪುರಉದಾರ ಗುಣಃಪರೇಶಃ ॥೧೭॥

ಅರ್ಥ.— ಉದೀರ್ಣಸೈನ್ಯಃ = ಅಪಾರವಾದ ಸೈನ್ಯವುಳ್ಳ, ಉದಾರಗುಣಃ = ಉತ್ಕೃಷ್ಟ ಗುಣವುಳ್ಳ, ಪರೇಶಃ–ಸರ್ವ ಪ್ರಭುವಾದ, ರಾಮಃ– ಶ್ರೀರಾಮನು, ರಾಜನೀತ್ಯೈವ–ರಾಜನೀತಿಯನ್ನನುಸರಿಸಿ, ವಾಲಿಸುತಂ= ವಾಲಿಯ ಪುತ್ರನಾದ ಅಂಗದನನ್ನು, ಪ್ರಸ್ಥಾಪ್ಯ=ರಾವಣನ ಬಳಿಗೆ ಕಳುಹಿಸಲಾಗಿ, ಅಮುನಾ=ಆ ರಾವಣನಿಂದ, ತದುಕ್ತವಚನೇ=ತದುಕ್ತ = ಅಂಗದನಿಂದ ಹೇಳಲ್ಪಟ್ಟ ವಚನವು, ಅಗೃಹೀತೇಸತಿ = ತಿರಸ್ಕರಿಸಲ್ಪಡಲಾಗಿ ಸಃ = ಆ ಶ್ರೀರಾಮನು, ರಕ್ಷಃಪತೇಃ=ರಾಕ್ಷಸರಾಜನಾದ ರಾವಣನ, ಪುರಂ = ಲಂಕಾಪಟ್ಟಣದ, ಚತಸ್ರಃ=ನಾಲ್ಕು, ದ್ವಾರಃ=ಊರು ಬಾಗಿಲುಗಳನ್ನೂ, ನಿರೋಧಃ = ಸೈನ್ಯದಿಂದ ತಡೆದನು.

ತಾತ್ಪರ್ಯ.—ಶ್ರೀರಾಮನು ಅಪಾರವಾದ ವಾನರ ಸೈನ್ಯ ಸಮೇತನಾಗಿ ಲಂಕಾಪಟ್ಟಣ ಪ್ರವೇಶಮಾಡಿ. ರಾಜನೀತಿಯನ್ನನುಸರಿಸಿ, ಉದಾರ ಮನಸ್ಸಿನಿಂದ ರಾವಣನಿಗೆ ಅಂಗದನ ಮುಖಾಂತರ ಹೇಳಿಕಳುಹಿಸಿದನು. ಆ ರಾವಣನು ಅಂಗದನ ಮಾತನ್ನು ತಿರಸ್ಕಾರಮಾಡಿದನು. ಆಗ ಶ್ರೀರಾಮನು ಲಂಕಾಪಟ್ಟಣದ ನಾಲ್ಕುದಿಕ್ಕಿನ ದ್ವಾರಗಳನ್ನೂ ತಡೆದುಬಿಟ್ಟನು.

ಶ್ಲೋಕ॥ ದ್ವಾರಾಂ ನಿರೋಧಸಮಯೇ ಸ ದಿದೇಶಪುತ್ರಂ।
ವಾರಾಂಪತೇ ರ್ದಿಶಿ ಸುರೇಶ್ವರ ಶತ್ರುಮುಗ್ರಂ ॥
ಪ್ರಾಚ್ಯಾಂ ಪ್ರಹಸ್ತಮದಿಶ ದ್ದಿಶಿ ವಜ್ರದಂಷ್ಟ್ರಂ।
ಪ್ರೇತಾಧಿಪಸ್ಯ ಶಶಿನಃ ಸ್ವಯಮೇವ ಚಾಗಾತ್ ॥೧೮॥

ಅರ್ಥ.—ಸಃ=ಆ ರಾವಣನು, ದ್ವಾರಾಂ=ದ್ವಾರಗಳ ನಿರೋಧಸಮಯೇ=ತಡೆಯುತ್ತಿರುವ ಕಾಲದಲ್ಲಿ, ವಾರಾಂಪತೇಃ=ಸಮುದ್ರರಾಜನಾದ ವರುಣನ, ದಿಶಿ=ದಿಕ್ಕಾದ ಪಶ್ಚಿಮದ್ವಾರದಲ್ಲಿ, ಉಗ್ರಂ = ಕ್ರೂರನಾದ, ಇಂದ್ರಶತ್ರುಂ=ಇಂದ್ರದೇವನಿಗೆ ಶತ್ರುವಾದ, ಪುತ್ರಂ – ತನ್ನ ಪುತ್ರನಾದ ಇಂದ್ರಜಿತುವನ್ನು, ದಿದೇಶ=ಕಳುಹಿಸಿದನು, ಪ್ರಾಚ್ಯಾಂ=ಪೂರ್ವದಿಕ್ಕಿಗೆ ಪ್ರಹಸ್ತಂ–ಪ್ರಹಸ್ತನೆಂಬ ಮಂತ್ರಿಯನ್ನು, ಅದಿಶತ್=ಕಳುಹಿಸಿದನು. ಪ್ರೇತಾಧಿಪಸ್ಯ = ಪ್ರೇತಾಧಿಪತಿಯಾದ ಯಮನ, ದಿಶಿ = ದಕ್ಷಿಣದಿಕ್ಕಿನಲ್ಲಿ, ವಜ್ರದಂಷ್ಟ್ರಂ=ವಜ್ರದಂಷ್ಟ್ರನೆಂಬ ರಾಕ್ಷಸನನ್ನೂ, ದಿಶತ್=ಕಳುಹಿಸಿದನು. ಶಶಿನಃ=ಚಂದ್ರನ, ದಿಶಂಪ್ರತಿ=ಉತ್ತರದಿಕ್ಕಿನ ದ್ವಾರವನ್ನು ಕುರಿತು, ಸ್ವಯಮೇವ = ರಾವಣನೇ, ಆಗಾತ್ – ಹೊರಟುಹೋದನು.

ಶ್ಲೋಕ॥ ವಿಜ್ಞಾಯ ತತ್ಸ ಭಗವಾನ್ ಹನುಮಂತಮೇವ।
ದೇವೇಂದ್ರ ಶತ್ರು ವಿಜಯಾಯ ದಿದೇಶ ಚಾಶು ॥
ನೀಲಂ ಪ್ರಹಸ್ತ ನಿಧನಾಯ ಚ ವಜ್ರದಂಷ್ಟ್ರಂ।
ಹಂತುಂ ಸುರೇಂದ್ರ ಸುತಸೂನು ಮಥಾದಿದೇಶ ॥೧೯॥

ಅರ್ಥ.—ತತ್=ರಾವಣನು ದ್ವಾರಗಳಲ್ಲಿ ಅವರುಗಳನ್ನು ನೇಮಿಸಿದ ಸಂಗತಿಯನ್ನು, ವಿಜ್ಞಾಯ=ತಿಳಿದುಕೊಂಡು, ಭಗವಾನ್=ಐಶ್ವರ್ಯಾದಿಗುಣ ಸಂಪನ್ನನಾದ, ಸಃ=ಶ್ರೀರಾಮಚಂದ್ರನು, ದೇವೇಂದ್ರ ಶತ್ರುವಿಜಯಾಯ=ದೇವೇಂದ್ರಶತ್ರು=ಇಂದ್ರದೇವರ ಶತ್ರುವಾದ ಇಂದ್ರಜಿತುವನ್ನು, ವಿಜಯಾಯ–ಜಯಿಸುವುದಕ್ಕೋಸ್ಕರ, ಹನುಮಂತಮೇವ–ಹನುಮಂತನನ್ನೇ, ಆಶು–ಜಾಗ್ರತೆಯಾಗಿ, ದಿದೇಶ=ಆಜ್ಞಾಪಿಸಿದನು. ಪ್ರಹಸ್ತ=ಪ್ರಹಸ್ತನನ್ನು, ನಿಧನಾಯ=ಕೊಲ್ಲುವುದಕ್ಕೋಸ್ಕರ, ನೀಲಂ=ನೀಲನೆಂಬ ವಾನರ ಶ್ರೇಷ್ಠ

ನನ್ನೂ, ಅಥ=ಅನಂತರ, ವಜ್ರದಂಷ್ಟ್ರಂ=ವಜ್ರದಂಷ್ಟ್ರನನ್ನು, ಹಂತುಂ=ಕೊಲ್ಲುವದಕ್ಕೋಸ್ಕರ, ಸುರೇಂದ್ರಸುತಸೂನುಂಚ=ಸುರೇಂದ್ರ= ದೇವೇಂದ್ರನ, ಸುತ=ಮಗನಾದ ವಾಲಿಯ, ಸೂನುಂಚ=ಪುತ್ರನಾದ ಅಂಗದನನ್ನು, ಆದಿದೇಶ=ಅಜ್ಞಾಪಿಸಿದನು.

ತಾತ್ಪರ್ಯ.—ರಾವಣನು ಯುದ್ಧ ಮಾಡುವದಕ್ಕೋಸ್ಕರ ಚತುರ್ದ್ವಾರಗಳಲ್ಲಿಯೂ ರಾಕ್ಷಸರನ್ನು ನೇಮಿಸಿ ತಾನೂಯುದ್ಧಕ್ಕಾಗಿ ಸಿದ್ಧವಾದ ಸಂಗತಿಯನ್ನು ತಿಳಿದು ಶ್ರೀರಾಮನು ಅವರುಗಳ ಸಂಗಡ ಯುದ್ಧಮಾಡುವದಕ್ಕೋಸ್ಕರ ಏರ್ಪಡಿಸಿದ ಕ್ರಮ ಹೇಗೆಂದರೆ:— ಇಂದ್ರಜಿತುವನ್ನು ಜಯಿಸುವುದಕ್ಕೋಸ್ಕರವೇ (ಕೊಲ್ಲುವುದಕ್ಕೆ ಅಲ್ಲ) ಹನುಮಂತನನ್ನು ಕಳುಹಿಸಿದನು. ಅನಂತರ ಪ್ರಹಸ್ಥನನ್ನು ಕೊಲ್ಲುವದಕ್ಕೋಸ್ಕರ ನೀಲನನ್ನೂ ವಜ್ರದಂಷ್ಟ್ರನನ್ನು ಸಂಹರಿಸುವದಕ್ಕೋಸ್ಕರ ವಾಲಿಯ ಪುತ್ರನಾದ ಅಂಗದನನ್ನೂ ಕಳುಹಿಸಿದನು.

**ಶ್ಲೋಕ॥ ಮಧ್ಯೇ ಹರೀಶ್ವರ ಮಧಿಜ್ಯ ಧನುರ್ನಿಯುಜ್ಯ।**
**ಯಸ್ಯಾಂ ಸರಾಕ್ಷಸಪತಿ ರ್ದಿಶಮೇವ ತಾಂಹಿ ॥**
**ಉದ್ದಿಶ್ಯ ಸಂಸ್ಥಿತ ಉಪಾತ್ತಶರಃ ಸಖಡ್ಗೋ।**
**ದೇದೀಪ್ಯಮಾನವಪುರುತ್ತಮ ಪೌರುಷೋಽಸೌ ॥೨೦॥**

ಅರ್ಥ.—ದೇದೀಪ್ಯಮಾನ=ಅತ್ಯಂತ ಪ್ರಕಾಶಮಾನವಾದ, ವಪುಃ=ಶರೀರವುಳ್ಳ, ಉತ್ತಮಪುರುಷಃ=ಪರಮ ಪುರುಷನಾದ, ಅಸೌ=ಶ್ರೀರಾಮನು, ಮಧ್ಯೇ=ಪೂರ್ವ ದಕ್ಷಿಣದಿಕ್ಕುಗಳ ಮಧ್ಯದಲ್ಲಿ (ಆಗ್ನೇಯದಿಕ್ಕಿನಲ್ಲಿ) ಹರೀಶ್ವರಂ=ಕಪಿರಾಜನಾದ ಸುಗ್ರೀವನನ್ನು, ಅಧಿಜ್ಯ=ನಿಲ್ಲಿಸಿ, ಯಸ್ಯಾಂ=ಯಾವ ದಿಕ್ಕಿನಲ್ಲಿ, ಸರಾಕ್ಷಸಪತಿಃ=ಆ ರಾವಣನಿದ್ದನೋ, ರಾಮೇವದಿಶಂ=ಆ ದಿಕ್ಕನ್ನೇ (ಉತ್ತರದಿಕ್ಕನ್ನು) ಉದ್ದಿಶ್ಯ=ಉದ್ದೇಶಮಾಡಿ, ಉಪಾತ್ತಶರಃ=ಬತ್ತಳಿಕೆಯಲ್ಲಿ ಹೊಂದಲ್ಪಟ್ಟ ಬಾಣಗಳುಳ್ಳವನಾಗಿಯೂ, ಸಖಡ್ಗಃ=ಖಡ್ಗಾಯುಧದಿಂದ ಸಹಿತನಾಗಿ, ಧನುರ್ನಿಯುಜ್ಯ=ಹೆದೆಯಲ್ಲಿ ಏರಿಸಲ್ಪಟ್ಟ ಬಾಣವುಳ್ಳ ಧನುಸ್ಸನ್ನು ಸಂಧಾನಮಾಡಿ, ಸಂಸ್ಥಿತಃ=ತಾನೇ ಯುದ್ಧಕ್ಕೆ ನಿಂತನು

ತಾತ್ಪರ್ಯ.— ಪರಮಪುರುಷನೂ ಪ್ರಕಾಶಮಾನವಾದ ಶರೀರವುಳ್ಳವನೂ ಆದ ಶ್ರೀರಾಮನು ಪೂರ್ವ ದಕ್ಷಿಣದಿಕ್ಕುಗಳ ಮಧ್ಯದಲ್ಲಿ (ಆಗ್ನೇಯದಲ್ಲಿ) ಕಪಿರಾಜನಾದ ಸುಗ್ರೀವನನ್ನು ಯುದ್ಧಕ್ಕೆ ನಿಲ್ಲಿಸಿ ಶ್ರೀರಾಮನು ಯುದ್ಧಮಾಡುವುದಕ್ಕಾಗಿ ರಾವಣನು ಸಿದ್ಧವಾಗಿ ನಿಂತಿದ್ದ ಉತ್ತರದಿಕ್ಕಿಗೆ ಸ್ವತಃ ತಾನೇಬತ್ತಲಿಕೆಯಲ್ಲಿ ಬಾಣಗಳುಳ್ಳವನಾಗಿ ಧನುಷ್ಟಂಕಾರಮಾಡಿಕೊಂಡು ಹೊರಟನು.

**ಶ್ಲೋಕ॥ ವಿದ್ರಾವಿತೋ ಹನುಮತೇಂದ್ರ ಜಿದಾಶು ಹಸ್ತಂ**
**ತಸ್ಯ ಪ್ರಪನ್ನ ಇವ ವೀರ್ಯ ಮಮುಷ್ಯಜಾನನ್ ॥**
**ನೀಲೋ ವಿಭೀಷಣ ಉಭೌ ಶಿಲಯಾ ಚ ಶಕ್ತ್ಯಾ,**
**ಸಂಚಕ್ರತು ರ್ಯಮವಶಂ ಗಮಿತಂ ಪ್ರಹಸ್ತಂ ॥೨೦॥**

ಅರ್ಥ.— ಅಮುಷ್ಯ = ಈ ಹನುಮಂತನ, ವೀರ್ಯಂ – ಪರಾಕ್ರಮವನ್ನು, ಜಾನನ್ = ತಿಳಿದಿರುವ, ಇಂದ್ರಜಿತ್ = ಇಂದ್ರಜಿತುವು, ತಸ್ಯ – ಆ ಹನುಮಂತನ, ಹಸ್ತಂ = ಕೈಗಳನ್ನು, ಪ್ರಪನ್ನ ಇವಭೂತ್ವಾ = ಹೊಂದಿದಹಾಗೆ ಮಾಡಿ, ಆಶು=ಜಾಗ್ರತೆಯಾಗಿ, ಹನುಮತಾ = ಹನುಮಂತನಿಂದ. ವಿದ್ರಾವಿತಃ = ಪರಾಜಿತನಾಗಿ ಓಡಿಸಲ್ಪಟ್ಟನು, ನೀಲಃ = ನೀಲನೆಂಬ ವಾನರ ಪ್ರಮುಖನು, ವಿಭೀಷಣಃ=ವಿಭೀಷಣನು ಉಭೌಚ – ಇವರಿಬ್ಬರೂ ಶಿಲಯಾ = ಶಿಲೆಗಳಿಂದಲೂ ಶಕ್ತ್ಯಾಚ=ಶಕ್ತ್ಯಾಯುಧದಿಂದಲೂ ಪ್ರಹಸ್ತಂ – ಪ್ರಹಸ್ತನೆಂಬ ರಾಕ್ಷಸನನ್ನು ಯಮವಶಂ = ಮೃತ್ಯುವಿನವಶವನ್ನು ಗಮಿತಂ = ಹೊಂದಲ್ಪಟ್ಟವನನ್ನಾಗಿ ಸಂಚಕ್ರತುಃ=ಮಾಡಿದರು

ತಾತ್ಪರ್ಯ.—ಲಂಕಾ ದಹನ ಕಾಲದಲ್ಲಿ ಹನುಮಂತನ ಪರಾಕ್ರಮಾತಿಶಯಗಳನ್ನು ನೋಡಿ ತಿಳಿದಿದ್ದ ಇಂದ್ರಜಿತುವು ಯುದ್ಧಕ್ಕೆ ಪ್ರಾರಂಭಿಸಿ ಹನುಮಂತನ ಕೈಗೆ ಸಿಕ್ಕಿದವನ ಹಾಗೆ ಆಗಿ ತಕ್ಷಣವೇ ಯುದ್ದದಿಂದ ಓಡಿಹೋದನು. ನೀಲನೂ ಮತ್ತು ವಿಭೀಷಣನೂ ಉಭಯತ್ರರೂ ಶೇರಿ ಪ್ರಹಸ್ತನನ್ನು ದೊಡ್ಡ ಶಿಲೆಗಳಿಂದಲೂ ಶಕ್ತ್ಯಾಯುಧದಿಂದಲೂ ಯುದ್ಧಮಾಡಿ ಯಮನವಶ ಹೊಂದಿಸಿದರು. ( ಸಂಹಾರಮಾಡಿದರು)

ಶ್ಲೋಕ॥ ನೀಲಸ್ಯನೈವ ವಶಮೇತಿ ಸ ಇತ್ಯಮೋಘ।
ಶಕ್ತ್ಯಾ ವಿಭೀಷಣ ಇಮುಂ ಪ್ರಜಹಾರಸಾಕಂ॥
ತಸ್ಮಿನ್ ಹತೇಽಂಗದ ಉಪೇತ್ಯ ಜಘಾನವಜ್ರ।
ದಂಷ್ಟ್ರಂ ನಿಪಾತ್ಯ ಭುವಿ ಶೀರ್ಷ ಮಮುಷ್ಯ ಮೃತ್ವನ್ ॥೨೨॥

ಅರ್ಥ.—ಸಃ = ಈ ಪ್ರಹಸ್ತನು, ನೀಲಸ್ಯ = ನೀಲನ, ವಶಂ ವಶವನ್ನು ನೇತಿ=ಹೊಂದುವುದಿಲ್ಲ, ವಿಭೀಷಣಃ=ವಿಭೀಷಣನು, ಇಮುಂ=ಈ ಪ್ರಹಸ್ತನನ್ನು, ಅಮೋಘಶಕ್ತ್ಯಾ = ಅಮೋಘ=ತಡೆಯಿಲ್ಲದ (ಸುಳ್ಳಾಗದ) ಶಕ್ತ್ಯಾ=ಶಕ್ತ್ಯಾಯುಧದಿಂದ, ಸಾಕಂ=ನೀಲನೊಡಗೂಡಿ, ಪ್ರಜಹಾರ = ಚೆನ್ನಾಗಿ ಪ್ರಹರಿಸಿದನು; ತಸ್ಮಿನ್ – ಆ ಪ್ರಹಸ್ತನು, ಹತೇಸತಿ=ಕೊಲ್ಲಲ್ಪಡಲು, ಅಂಗದಃ = ಅಂಗದನು, ವಜ್ರದಂಷ್ಟ್ರಂ = ವಜ್ರದಂಷ್ಟ್ರನನ್ನು, ಉಪೇತ್ಯ = ಹೊಂದಿ, ಭುವಿ=ಭೂಮಿಯುಮೇಲೆ, ನಿಪಾತ್ಯ–ಕೆಡಹಿಕೊಂಡು ಅಮುಷ್ಯ–ಈ ವಜ್ರದಂಷ್ಟ್ರನ, ಶೀರ್ಷಂ=ತಲೆಯುನ್ನು, ಮೃತ್ವನ್ = ಮರ್ದನಮಾಡುತ್ತಾ, ಜಘಾನ–ಸಂಹರಿಸಿದನು.

ವಿಶೇಷಾರ್ಥ.—ಶ್ರೀರಾಮನು ಪ್ರಹಸ್ತನ ಸಂಗಡ ಯುದ್ಧಮಾಡುವುದಕ್ಕಾಗಿ ನೀಲನನ್ನು ನೇಮಿಸಿದ್ದನು. ಹೀಗಿರಲು ನೀಲನ ಸಂಗಡ ವಿಭೀಷಣನೇಕೆ ಸೇರಿದನೆಂಬ ಸಂಶಯುವನ್ನು ಪರಿಹಾರಮಾಡುತ್ತಾರೆ–

ತಾತ್ಪರ್ಯ.—ಈ ಪ್ರಹಸ್ತನು ಅತಿ ಬಲಿಷ್ಠನಾದ್ದರಿಂದ ನೀಲನ ಹತೋಟಿಗೆ ಸಿಕ್ಕುವುದಿಲ್ಲವೆಂದು ವಿಭೀಷಣನು ತಿಳಿದು ನೀಲನ ಜೊತೆಗೆ ತಾನೂ ಸೇರಿಕೊಂಡು ಅವನನ್ನು ಯುದ್ಧದಲ್ಲಿ ಸಂಹರಿಸಿದನು. ಈ ಪ್ರಹಸ್ತನು ಸಂಹೃತನಾದಮೇಲೆ, ಅಂಗದನು ವಜ್ರದಂಷ್ಟ್ರನನ್ನು ಹೊಂದಿ ಅವನನ್ನು ಭೂಮಿಯುಮೇಲೆ ಕೆಡಹಿ ಅವನ ತಲೆಯುನ್ನು ಮರ್ದನಮಾಡಿ ಕೊಂದನು.

ಶ್ಲೋಕ॥ ಸರ್ವೇಷು ತೇಷು ನಿಹತೇಷು ದಿಪೋಽಕನ್ಯಾನ್ಯ।
ನೇತ್ರಂ ಸ ರಾಕ್ಷಸಪತಿಃ ಸ ಚ ಪಶ್ಚಿಮೇನ ॥
ದ್ವಾರೇಣ ಮಾರುತಿಸುತಂ ಸಮುಪೇತ್ಯ ದಗ್ಧ್ವಾಂ।
ಗ ಪ್ತೋಽಪಿ ಶೂಲಿವಚನೇನ ದುರಂತಶಸ್ತ್ರಂ ॥೨೩॥

ಅರ್ಥ.—ತೇಷು=ಆ ರಾವಣನಿಂದ ಆಜ್ಞಪ್ತರಾಗಿದ್ದ, ಸರ್ವೇಷು= ಸಮಸ್ತರಾದ ರಾಕ್ಷಸರೂ, ನಿಹತೇಷುಸತ್ಸು=ಹತರಾಗುತ್ತಿರಲಾಗಿ, ಸರಾಕ್ಷಸಪತಿಃ=ಆ ರಾವಣನು, ಧೂಮ್ರನೇತ್ರಂ= ಧೂಮ್ರನೇತ್ರನೆಂಬ ರಾಕ್ಷಸನನ್ನು, ದಿದೇಶ=ಯುದ್ಧಕ್ಕಾಗಿ ಆಜ್ಞೆ ಮಾಡಿದನು. ಸಚ = ಆ ಧೂಮ್ರನೇತ್ರನಾದರೋ, ಪಶ್ಚಿಮೇನದ್ವಾರೇಣ=ಪಶ್ಚಿಮಬಾಗಲಿನ ಕಡೆಯಿಂದ, ದುರಂತಶಕ್ತಿಂ=ಪಾರವಿಲ್ಲದ ಶಕ್ತಿಯುಳ್ಳ, ಮಾರುತಿಸುತಂ- ಶ್ರೀಹನುಮಂತನನ್ನು, ಉಪೇತ್ಯ=ಹೊಂದಿ, ಸಃ=ಅವನು, ಶೂಲಿವಚನೇನ=ರುದ್ರದೇವರ ವರಪ್ರಸಾದದಿಂದ, ಗುಪ್ತೋಽಪಿ=ರಕ್ಷಿಸಲ್ಪಟ್ಟವನಾಗಿದ್ದಾಗ್ಯೂ, ದಗ್ಧಃ= ಹನುಮಂತನಿಂದ ಸುಡಲ್ಪಟ್ಟನು.

ತಾತ್ಪರ್ಯ.—ಕಪಿಗಳ ಸಂಗಡ ಯುದ್ಧಮಾಡುವುದಕ್ಕೋಸ್ಕರ ಆಯಾ ದ್ವಾರಗಳಲ್ಲಿ ರಾವಣನಿಂದ ಆಜ್ಞಪ್ತರಾಗಿದ್ದ ಕೆಲವರು ಪಲಾಯನ ಮಾಡಿ ಮತ್ತೆ ಕೆಲವರು ಹತರಾದರು. ಬಳಿಕ ರಾಕ್ಷಸಪತಿಯಾದ ರಾವಣನು ಧೂಮ್ರನೇತ್ರನೆಂಬ ರಾಕ್ಷಸನನ್ನು ಯುದ್ಧಕ್ಕೆ ಕಳುಹಿಸಿದನು. ಅವನು ರುದ್ರದೇವರ ವರಪ್ರಸಾದದಿಂದ ರಕ್ಷಿತನಾಗಿದ್ದನು, ಇಂತಹ ಧೂಮ್ರನೇತ್ರನು ಪಶ್ಚಿಮ ದ್ವಾರದಿಂದ ಬಂದು ಅಪರಿಮಿತ ಶಕ್ತಿಯುಳ್ಳ ಹನುಮಂತನ ಸಂಗಡ ಯುದ್ಧಮಾಡಿ ಭಸ್ಮೀಭೂತನಾದನು.

**ಶ್ಲೋಕ॥ ಅಕಂಪನೋಽಪಿ ರಾಕ್ಷಸೋ ।**
**ನಿಶಾಚರೇಶಚೋದಿತಃ ॥**
**ಉಮಾಪತೇರ್ವರೋದ್ಧತಃ ।**
**ಕ್ಷಣಾದ್ಧತೋ ಹನೂಮತಾ ॥೨೪॥**

ಅರ್ಥ.—ನಿಶಾಚರೇಶ - ರಾವಣನಿಂದ, ಚೋದಿತಃ = ಪ್ರೇರೇಪಿಸಲ್ಪಟ್ಟ, ಮತ್ತು ಉಮಾಪತೇಃ=ರುದ್ರದೇವರ, ವರ = ವರಪ್ರಸಾದದಿಂದ, ಉದ್ಧತಃ–ಉನ್ಮತ್ತನಾದ, ಅಕಂಪನಃ = ಅಕಂಪನನಾಮಕನಾದ, ರಾಕ್ಷಸೋಽಪಿ=ರಾಕ್ಷಸನೂ ಕೂಡ, ಹನೂಮತಾ=ಹನುಮಂತನಿಂದ, ಕ್ಷಣಾತ್= ಕ್ಷಣಮಾತ್ರದಲ್ಲಿ. ಹತಃ=ಸಂಹರಿಸಲ್ಪಟ್ಟನು.

ತಾತ್ಪರ್ಯ.— ಅನಂತರ ರಾವಣನಿಂದ ಕಳುಹಿಸಲ್ಪಟ್ಟ ಅಕಂಪನೆಂಬ ರಾಕ್ಷಸನು ಹನುಮಂತನ ಸಂಗಡ ಯುದ್ಧಕ್ಕೆ ಬಂದನು. ಇವನು ಮುಪ್ರದೇವರ ವರದಿಂದ ಮಹಾ ಉನ್ಮತ್ತನಾಗಿದ್ದನು. ಹನುಮಂತನು ಇವನನ್ನು ನಿಮಿಷಮಾತ್ರದಲ್ಲಿ ಸಂಹರಿಸಿದನು.

ಶ್ಲೋಕ ॥ ಅಥಾಸ್ತ್ರಸಂಪ್ರದೀಪಿತೈಃ ।
ಸಮಸ್ತ ಶೋಮಹೋಲ್ಮುಕೈಃ ॥
ರಘುಪ್ರವೀರ ಚೋದಿತಾಃ ।
ಪುರಂ ನಿಶಿ ಸ್ವದಾಹಯನ್ ॥೨೫॥

ಅರ್ಥ.– ಅಥ=ಅನಂತರದಲ್ಲಿ, ರಘುಪ್ರವೀರ=ರಘುಕುಲದಲ್ಲಿ ಅತ್ಯಂತವೀರನಾದ ಶ್ರೀರಾಮಚಂದ್ರನಿಂದ, ಚೋದಿತಾಃ=ಪ್ರೇರಿತರಾದ, ಸರ್ವೇ= ಸಮಸ್ತ ಕಪಿಗಳೂ, ಅಸ್ತ್ರಸಂಪ್ರದೀಪಿತೈಃ = ಅಸ್ತ್ರ=ಅಗ್ನ್ಯಸ್ತ್ರದಿಂದ, ಸಂಪ್ರದೀಪಿತೈಃ=ಉರಿಯುತ್ತಿರುವ, ಮಹೋಲ್ಮುಕೈಃ–ಮಹಾ ಸ್ಥೂಲವಾದ ಕೊಳ್ಳಿಗಳಿಂದ, ನಿಶಿ=ರಾತ್ರಿಯಲ್ಲಿ ಸಮಸ್ತಶಃ=ಸಮಸ್ತವಾದ, ಪುರಂ– ಲಂಕಾಪುರವನ್ನು, ಸ್ವದಾಹಯನ್=(ಸು+ಅದಾಹಯನ್) ಚೆನ್ನಾಗಿ ಸುಟ್ಟುಬಿಟ್ಟರು.

ತಾತ್ಪರ್ಯ.– ಆ ರಾತ್ರಿಯಲ್ಲಿ ರಘುವೀರನಾದ ಶ್ರೀರಾಮನಿಂದ ಆಜ್ಞಪ್ತರಾದ ಸಮಸ್ತ ಕಪಿಗಳೂ ಅಗ್ನ್ಯಸ್ತ್ರದಿಂದ ಉರಿಯುತ್ತಿರುವ ಮಹತ್ತರವಾದ ಕೊಳ್ಳಿಗಳಿಂದ ಲಂಕಾಪಟ್ಟಣವನ್ನೆಲ್ಲಾ ಸುಟ್ಟುಬಿಟ್ಟರು.

ಶ್ಲೋಕ ॥ ತತಸ್ತೌ ನಿಕುಂಭೋಥ ಕುಂಭಶ್ಚ ಕೋಪಾತ್ ।
ಪ್ರದಿಷ್ಟೌ ದಶಾಸ್ಯೇನ ಕುಂಭಶ್ರುತೇರ್ಹಿ ॥
ಸುತೌ ಸುಪ್ರಹೃಷ್ಟೌ ರಣಾಯಾಭಿಯಾತೌ ।
ಕಪೀಂ ಸ್ತಾನ್ನೃಹಿಃ ಸರ್ವಶೋಯಾಪಯಿತ್ವಾ ॥೨೬॥

ಅರ್ಥ. —ತತಃ-ಅನಂತರದಲ್ಲಿ, ಕೋಪಾತ್=ಕೋಪದಿಂದ, ದಶಾಸ್ಯೇನ=ರಾವಣನಿಂದ, ಪ್ರದಿಷ್ಟೌ=ಆಜ್ಞಪ್ತರಾದ, ಕುಂಭಶ್ರುತೇಃ=ಕುಂಭಕರ್ಣನ, ಸುತೌ=ಮಕ್ಕಳಾದ ತೌ=ಆ, ನಿಕುಂಭಃ–ನಿಕುಂಭನು, ಕುಂಭಶ್ಚ=ಕುಂಭನೂ ಸಹ, ತಾನ್‌ಕಪೀನ್–ಲಂಕಾನಗರವನ್ನು ದಹಿಸುತ್ತಲಿರುವ

ವಾನರುಗಳನ್ನು, ಸರ್ವಶಃ=ಸಂಪೂರ್ಣವಾಗಿ, ಬಹಿಃ = ಲಂಕಾಪಟ್ಟಣದ ಹೊರಗಡೆಗೆ, ಯಾಪಯಿತ್ವಾ = ಹೊರಡಿಸಿ; ತೌ - ಆ ನಿಕುಂಭ ಮತ್ತು ಕುಂಭನೂ ಸಹ ಸುಪ್ರಹೃಷ್ಟೌ–ಅತಿ ಸಂತೋಷಯುಕ್ತರಾಗಿ, ರಣಾಯ= ಯುದ್ಧಕ್ಕೋಸ್ಕರ, ಅಭಿಯಾತೌಹಿ=ಹೊರಟರು.

ತಾತ್ಪರ್ಯ.– ವಾನರರು ಲಂಕಾಪಟ್ಟಣವನ್ನು ದಹಿಸಿದರೆಂಬ ಕೋಪದಿಂದ ರಾವಣನು ಕುಂಭಕರ್ಣನ ಮಕ್ಕಳಾದ ನಿಕುಂಭ ಮತ್ತು ಕುಂಭ ಎಂಬ ರಾಕ್ಷಸರನ್ನು ಯುದ್ಧಕ್ಕೆ ಕಳುಹಿಸಿದನು. ಅವರು ತಮಗೆ ಯುದ್ಧ ಸಿಕ್ಕಿದ್ದಕ್ಕಾಗಿ ಸಂತೋಷಪಟ್ಟು ಸಮಸ್ತ ಕಪಿಗಳನ್ನೂ ಲಂಕಾಪಟ್ಟಣದಿಂದ ಹೊರಕ್ಕೆ ಅಟ್ಟಿಬಿಟ್ಟು ತಾವು ಯುದ್ಧಕ್ಕಾಗಿ ಬಂದರು.

**ಶ್ಲೋಕ॥ ಸಕುಂಭೋ ವಿಧಾತುಃ ಸುತಂ ತಾರ ನೀಲೌ ।**
**ನಲಂ ಚಾಶ್ವಿಪುತ್ರೌ ಜಿಗಾಯಾಂಗದಂಚ ॥**
**ಸುಯುದ್ಧಂ ಚ ಕೃತ್ವಾ ದಿನೇಶಾತ್ಮಜೇನ ।**
**ಪ್ರಣೀತೋ ಯಮಸ್ಯಾಶು ಲೋಕಂ ಸುಪಾಪಃ ॥೨೭॥**

ಅರ್ಥ.—ಸಃ–ರಾವಣನಿಂದ ಆಜ್ಞಪ್ತನಾದ, ಸುಪಾಪಃ–ಅತ್ಯಂತ ಪಾಪಿಷ್ಠನಾದ, ಕುಂಭಃ–ಕುಂಭನಾಮಕ ರಾಕ್ಷಸನು, ವಿಧಾತುಃ – ಬ್ರಹ್ಮದೇವರ, ಸುತಂ=ಪುತ್ರನಾದ ಜಾಂಬವಂತನನ್ನು, ಅಶ್ವಿಪುತ್ರೌ=ಅಶ್ವಿನಿದೇವತೆಗಳ, ಪುತ್ರೌ=ಮಕ್ಕಳಾದ, ತಾರನೀಲೌ=ತಾರ ಮತ್ತು ನೀಲನಾಮಕರಾದ ಕಪಿಗಳನ್ನೂ, ಅಂಗದಂಚ=ಅಂಗದನನ್ನೂ ಕೂಡ, ಜಿಗಾಯ = ಯುದ್ಧಮಾಡಿ ಗೆದ್ದನು, ದಿನೇಶಾತ್ಮಜೇನ=ದಿನೇಶ=ಸೂರ್ಯನ, ಆತ್ಮಜೇನ= ಮಗನಾದ ಸುಗ್ರೀವನ ಸಂಗಡ, ಸುಯುದ್ಧಂಚ=ಬಲವಾದ ಯುದ್ಧವನ್ನು, ಕೃತ್ವಾ=ಮಾಡಿ, ಯಮಸ್ಯ=ಯಮನ, ಲೋಕಂ=ಲೋಕವನ್ನು ಕುರಿತು, ಆಶು=ಜಾಗ್ರತೆಯಾಗಿ, ಪ್ರಣೀತಃ=ಕಳುಹಿಸಲ್ಪಟ್ಟನು.

ತಾತ್ಪರ್ಯ.––ರಾವಣನಿಂದ ಆಜ್ಞಪ್ತರಾದ ನಿಕುಂಭ ಮತ್ತು ಕುಂಭ ಇವರಿಬ್ಬರಲ್ಲಿ ಒಬ್ಬನಾದ ಕುಂಭನು ಕಪಿಗಳೊಡನೆ ಚೆನ್ನಾಗಿ ಯುದ್ಧ ಮಾಡಿ ಜಾಂಬವಂತ, ತಾರ, ನೀಲ, ಅಂಗದ, ಇವರುಗಳನ್ನು ಗೆದ್ದು ಅನಂತರ ಸೂರ್ಯಸುತನಾದ ಸುಗ್ರೀವನೊಡನೆ ಯುದ್ಧಮಾಡಿ ಅವನಿಂದ ಸಂಹರಿಸಲ್ಪಟ್ಟನು.

ಶ್ಲೋಕ ||ತತೋ ನಿಕುಂಭೋದ್ರಿವರ ಪ್ರದಾರಣಂ ।
ಮಹಾಂತಮುಗ್ರಂ ಪರಿಘಂ ಪ್ರಗೃಹ್ಯ ||
ಸಸಾರ ಸೂರ್ಯಾತ್ಮಜ ಮಾಶುಭೀತಃ।
ಸ ಪುಪ್ಲುವೇ ಪಶ್ಚಿಮತೋ ಧನುಃ ಶತಂ ||೨೮||

ಅರ್ಥ:—ತತಃ=ಕುಂಭನು ಹತನಾದನಂತರ, ನಿಕುಂಭಃ–ನಿಕುಂಭನು, ಅದ್ರಿವರ=ಪರ್ವತ ಶ್ರೇಷ್ಠದಂತೆ, ಪ್ರದಾರಣಂ=ಅತ್ಯಂತ ಘೋರವಾದ ಮಹಾಂತಂ=ದೊಡ್ಡದಾದ, ಉಗ್ರಂ–ತೀಕ್ಷ್ಣವಾದ, ಪರಿಘಂ– ಪರಿಘಾಯುಧವನ್ನು, ಪ್ರಗೃಹ್ಯ=ತೆಗೆದುಕೊಂಡು, ಸೂರ್ಯಾತ್ಮಜಂ ಪ್ರತಿ=ಸುಗ್ರೀವನನ್ನು ಕುರಿತು, ಸಸಾರ=ಯುದ್ಧಕ್ಕೆ ಬಂದನು. ಸಃ=ಆ ಸುಗ್ರೀವನು, ಭೀತಃ ಸನ್=ಭಯಪಟ್ಟವನಾಗಿ, ಆಶು–ತಕ್ಷಣವೇ, ಪಶ್ಚಿಮತಃ=ಹಿಂದಕ್ಕೆ ಧನುಃ ಶತಂ=ಒಂದು ನೂರುಧನುಃ ಪ್ರಮಾಣ ದೂರಪ್ರದೇಶವನ್ನು, ಪುಪ್ಲುವೇ=ಹಾರಿದನು.

ತಾತ್ಪರ್ಯ.—ಕುಂಭನು ಮೃತನಾದ ನಂತರ ಅವನ ಅಣ್ಣನಾದ ನಿಕುಂಭನು ಪರ್ವತ ಶ್ರೇಷ್ಠದೋಪಾದಿಯುಂತಿರುವ ದೊಡ್ಡದಾದ ಮಹಾ ಕ್ರೂರವಾದ ಪರಿಘಾಯುಧ (ವನಿಕೆಯೋಪಾದಿಯಲ್ಲಿರುವ ಕಬ್ಬಿಣದ ಆಯುಧ) ವನ್ನು ತೆಗೆದುಕೊಂಡು ಸುಗ್ರೀವನ ಸಂಗಡ ಯುದ್ಧಕ್ಕೆ ಬಂದನು. ಸುಗ್ರೀವನು ಭಯಪಟ್ಟವನಾಗಿ ಒಂದುನೂರು ಧನುಃ ಪ್ರಮಾಣವಷ್ಟು ದೂರ ಪ್ರದೇಶವನ್ನು ಹಿಂದಕ್ಕೆ ಸರಿದು ಹಾರಿದನು.

ವಿಶೇಷ ವಿಷಯವು:—ಇಲ್ಲಿ ಧನುಃ ಪ್ರಮಾಣದಷ್ಟು ದೂರವೆಂದರೆ ಪ್ರಮಾಣವನ್ನು ಹೇಳಿದೆ (ಚತುರ್ಹಸ್ತೈಸ್ತು ದಂಡಕಃ। ಧನುರ್ದ್ವಾದಶಹಸ್ತೈಸ್ತು) ಎಂದು ಅಭಿಧಾನ ನಿಘಂಟಿನಲ್ಲಿ ಹೇಳಲ್ಪಟ್ಟಿದೆ. ಒಂದು ಧನುಃ ಪ್ರಮಾಣವೆಂದರೆ ಹನ್ನೆರಡು ಮೊಳದುದ್ದವು. ಇಂತಹ ಧನುಃಪ್ರಮಾಣವು ಒಂದುನೂರು ಅಂದರೆ($100\times12=1200$) ಒಂದು ಸಾವಿರದ ಎರಡು ನೂರು ಹಸ್ತ (ಮೊಳಕ್ಕೆ) ಆರುನೂರು ಗಜಗಳೆಂದರ್ಥವು. ಏತೇನ ಪರಿಘಾಯುಧವನ್ನು ತೆಗೆದುಕೊಂಡು ತನ್ನಸಂಗಡ ಯುದ್ಧಕ್ಕೆಬಂದ ನಿಕುಂ

ಭನನ್ನು ನೋಡಿ ಸುಗ್ರೀವನು ಭಯಗೊಂಡು ಆರುನೂರುಗಜದಷ್ಟು ದೂ ಹಿಂದಕ್ಕೆ ಹಾರಿಹೋದನೆಂದು ತಾತ್ಪರ್ಯ

ಶ್ಲೋಕ॥ ತಂ ಭ್ರಾಮಯತ್ಯಾಶು ಭುಜೇನ ವೀರೇ ।
ಭ್ರಾಂತಾ ದಿಶೋ ದ್ಯೌಶ್ಚ ಸ ಚಂದ್ರಸೂರ್ಯಾಃ ॥
ಸುರಾಶ್ಚ ತಸ್ಯೋರುಬಲಂ ವರಂ ಚ ।
ಶರ್ವೋದ್ಭವಂ ವೀಕ್ಷ್ಯ ವಿಷೇದುರೀಷತ್ ॥೨೯॥

ಅರ್ಥ:—ವೀರೇ=ಪರಾಕ್ರಮಶಾಲಿಯಾದ ನಿಕುಂಭನು, ತಂ=ಆ ಪರಿಘಾಯುಧವನ್ನು, ಭುಜೇನ=ತನ್ನಭುಜದಿಂದ, ಭ್ರಾಮಯತಿ ಸತಿ=ತಿರುಗಿಸುತ್ತಿರಲಾಗಿ, ಆಶು=ತಕ್ಷಣವೇ, ಸಚಂದ್ರಸೂರ್ಯಾಃ=ಸೂರ್ಯ ಚಂದ್ರರಿಂದ ಸಹಿತವಾದ, ದಿಶಃ=ದಿಕ್ಕುಗಳೂ, ದ್ಯೌಶ್ಚ=ಅಂತರಿಕ್ಷವೂಸಹ, ಭ್ರಾಂತಾಃ= ತಿರುಗಿಹೋದವು, ಸುರಾಶ್ಚ=ದೇವತೆಗಳಾದರೋ, ತಸ್ಯ=ಆ ನಿಕುಂಭ ರಾಕ್ಷಸನ, ಶರ್ವೋದ್ಭವಂ=ರುದ್ರದೇವರಿಂದ ಕೊಡಲ್ಪಟ್ಟ, ವರಂ=ವರಪ್ರಸಾದವನ್ನೂ, ಉರುಬಲಂಚ = ಉತ್ಕೃಷ್ಟವಾದ ಬಲವನ್ನೂ ಸಹ, ವೀಕ್ಷ್ಯ=ನೋಡಿ, ಈಷತ್=ಸ್ವಲ್ಪವಾಗಿ, ವಿಷೇದುಃ=ವಿಷಾದವನ್ನು ಹೊಂದಿದರು

ತಾತ್ಪರ್ಯ.—ವೀರನಾದ ನಿಕುಂಭನು ತನ್ನ ಭುಜದಿಂದ ಆ ಅಮೋಘವಾದ ಪರಿಘಾಯುಧವನ್ನು ತಿರುಗಿಸುತ್ತಿರಲಾಗಿ ಆ ರಭಸದಿಂದ ಸಮಸ್ತ ದಿಕ್ಕುಗಳೂ ಸೂರ್ಯಚಂದ್ರರೂ ಅಂತರಿಕ್ಷವೂ ಸಹಾ ತಿರಿಗಿ ಹೋದವು. ದೇವತೆಗಳಾದರೋ ಈ ನಿಕುಂಭನಿಗೆ ರುದ್ರದೇವರಿಂದ ಲಬ್ಧವಾಗಿರುವ ವರವನ್ನೂ ಅದರಿಂದ ಉಂಟಾದ ಮಹಾ ಬಲವನ್ನೂ ನೋಡಿ ಸ್ವಲ್ಪ ಮಟ್ಟಿಗೆ ವಿಷಾದವನ್ನು ಹೊಂದಿದರು

ಶ್ಲೋಕ ॥ ಅನನ್ಯಸಾಧ್ಯಂ ತಮುಥೊ ನಿರೀಕ್ಷ್ಯ ।
ಸಮುತ್ಪಪಾತಾಶು ಪುರೋಸ್ಯ ಮಾರುತಿಃ ॥
ಪ್ರಕಾಶ್ಯ ಬಾಹ್ವಾಂತರಮಾಹ ಚೈನಂ ।
ಕಿಮೇಭಿರತ್ರ ಪ್ರಹರಾಯುಧಂ ತೇ ॥೩೦॥

ಅರ್ಥ:—ಮಾರುತಿಃ-ಹನುಮಂತನು, ಅನನ್ಯಸಾಧ್ಯಂ=ಅನನ್ಯ-ತನ್ನ ವಿನಹ ಮತ್ಯಾರಿಂದಲೂ, ಅಸಾಧ್ಯಂ=ಕೊಲ್ಲಲು ಸಾಧ್ಯನಲ್ಲದ, ತಂ - ಆ ನಿಕುಂಭನನ್ನು, ನಿರೀಕ್ಷ್ಯ=ನೋಡಿ, ಅಸ್ಯ-ಈ ನಿಕುಂಭನ, ಪುರಃ-ಎದುರಿಗೆ, ಆಶು=ತಕ್ಷಣವೇ, ಸಮುತ್ಪಪಾತ-ಹಾರಿಬಂದನು. ಅಥ=ಅನಂತರ, ಬಾಹ್ವಂತರಂ - ಬಾಹುಗಳ ಮಧ್ಯದಲ್ಲಿರುವ ತನ್ನ ಎದೆಯಭಾಗವನ್ನು, ಪ್ರಕಾಶ್ಯ=ತೋರಿಸಿ, ಏನಂ ಪ್ರತಿ-ಈ ನಿಕುಂಭನನ್ನು ಕುರಿತು, ಯೇಭಿಃ-ಈ ಅಲ್ಪರಾದ ಕಪಿಗಳಿಂದ, ತೇ-ನಿನಗೆ, ಕಿಂ-ಏನಾಗತಕ್ಕದಿದೆ?, ಅತ್ರ-ಈ ನನ್ನ ಹೃದಯದಮೇಲೆ, ಆಯುಧಂ-ಪರಿಘಾಯುಧವನ್ನು, ಪ್ರಹರ-ಪ್ರಯೋಗಮಾಡು, ಇತಿ-ಹೀಗೆಂದು, ಆಹ-ಹೇಳಿದನು

ತಾತ್ಪರ್ಯ-—ನಿಕುಂಭನು ತನ್ನ ಪರಿಘಾಯುಧವನ್ನು ತಿರುಗಿಸುತ್ತಿರಲಾಗಿ ಇವನನ್ನು ಕೊಲ್ಲಲು ಮತ್ಯಾರಿಂದಲೂ ಸಾಧ್ಯವಿಲ್ಲವೆಂದು ಹನುಮಂತನು ತಿಳಿದು ತಕ್ಷಣವೇ ಇವನ ಎದುರಿಗೆ ಹಾರಿಬಂದು ತನ್ನ ಎದೆಯನ್ನು ಅವನಿಗೆ ತೋರಿಸಿ "ಅಲ್ಪರಾದ ಈ ಕಪಿಗಳಿಂದ ನಿನಗೇನಾಗಬೇಕಾಗಿದೆ ? ನನ್ನ ಎದೆಯಲ್ಲಿ ಪ್ರಯೋಗಿಸು" ಎಂದು ಹೇಳಿದನು.

**ಶ್ಲೋಕ ॥ ಇತೀರಿತಸ್ತೇನಸರಾಕ್ಷಸೋತ್ತಮೋ ।**
**ವರಾದಮೋಘಂಪ್ರಜಹಾರ ವಕ್ಷಸಿ ॥**
**ವಿಶೀರ್ಣತೋಽಸೌತದುರಸ್ಯ ಭೇದ್ಯೇ ।**
**ಯಥೈವವಜ್ರೋ ವಿಪತೌವೃಥಾಭವತ್ ॥೩೧॥**

ಅರ್ಥ:—ಇತೀ-ಈ ಪ್ರಕಾರವಾಗಿ ತೇನ=ಆ ಹನುಮಂತನಿಂದ ಈರಿತಃ-ಹೇಳಿಸಿಕೊಂಡ, ರಾಕ್ಷಸೋತ್ತಮಃ-ರಾಕ್ಷಸರಲ್ಲಿ ಶ್ರೇಷ್ಠನಾದ, ಸಃ-ಆ ನಿಕುಂಭನು, ವರಾತ್=ವರದ ದೆಶೆಯಿಂದ, ಅಮೋಘಂ-ವ್ಯರ್ಥವಾಗದೇ ಇರುವ ಪರಿಘವನ್ನು, ವಕ್ಷಸಿ-ಹನುಮಂತನ ಹೃದಯದಲ್ಲಿ, ಪ್ರಜಹಾರ-ಪ್ರಯೋಗಮಾಡಿದನು, ಅಸೌ=ಈ ಪರಿಘವು, ಅಭೇದ್ಯೇ=ಭೇಧಿಸಲಸಾಧ್ಯವಾದ, ತದುರಸಿ-ಆ ಹನುಮಂತನ ಹೃದಯದಲ್ಲಿ, ವಿಪತೌ-ಪಕ್ಷಿಗಳಿಗೆ ಪ್ರಭುವಾದ ಗರುಡನಲ್ಲಿ, ವಜ್ರೋ-ವಜ್ರಾಯುಧವು, ಯಥಾ=ಹಾಗಾವ

ರೀತಿಯಾಗಿ ವಿಫಲವಾಯಿತೋ, ತಥೈವ=ಅದೇರೀತಿಯಾಗಿ, ವಿಚೂರ್ಣಿತಃ =ಚೂರುಚೂರಾಗಿ, ವೃಥಾ–ವ್ಯರ್ಥವಾದದ್ದು, ಅಭವತ್–ಆಯಿತು.

ತಾತ್ಪರ್ಯ.––ಆ ಕಪಿಗಳಿಂದ ನಿನಗೇನಾಗತಕ್ಕದ್ದಿದೆ ? ನನ್ನ ವಕ್ಷಸ್ಥಳದಲ್ಲಿ ನಿನ್ನ ಪರಿಘವನ್ನು ಪ್ರಯೋಗಮಾಡೆಂದು ಹನುಮಂತನು ಹೇಳಿದಮೇಲೆ ನಿಕುಂಭನು ತಿರಿಗಿಸುತ್ತಿದ್ದ ವರಪ್ರಸಾದದ ಮಹತ್ತಿನಿಂದ ವ್ಯರ್ಥವಾಗದೇ ಇರತಕ್ಕ ಅಮೋಘವಾದ ಪರಿಘವನ್ನು ಹನುಮಂತನ ವಕ್ಷಸ್ಸಿನಲ್ಲಿ ಪ್ರಯೋಗಿಸಿದನು. ಅವನ ಎದೆಯು ಭೇದನಮಾಡಲಸಾಧ್ಯವಾದ್ದರಿಂದಲೇ ಆ ಪರಿಘವು ಗರುಡನಲ್ಲಿ ಪ್ರಯೋಗಮಾಡಲ್ಪಟ್ಟ ವಜ್ರಾಯುಧದೋಪಾದಿಯಲ್ಲಿ ಹನುಮಂತನ ವಕ್ಷಸ್ಥಳದಲ್ಲಿ ಬಿದ್ದು ಚೂರು ಚೂರಾಗಿ ವ್ಯರ್ಥವಾಯಿತು.

ಶ್ಲೋಕ ॥ ವಿಚೂರ್ಣಿತೇ ನಿಜಾಯುಧೇ ।
ನಿಕುಂಭ ಏತ್ಯಮಾರುತಿಂ ।
ಪ್ರಗೃಹ್ಯಚಾತ್ಮನೋಂಸಕೇ ।
ನಿಧಾಯಜಗ್ಮಿವಾನ್ದ್ರುತಂ ॥೩೨॥

ಅರ್ಥ.––ನಿಕುಂಭಃ = ನಿಕುಂಭನು, ನಿಜಾಯುಧೇ–ತನ್ನ ಪರಿಘಾಯುಧವು, ವಿಚೂರ್ಣಿತೇಸತಿ = ಚೂರುಚೂರಾಗಿ ವ್ಯರ್ಥವಾಗಲು, ಮಾರುತಿಂ = ಹನುಮಂತನ, ಏತ್ಯ = ಸಮೀಪವನ್ನು ಸೇರಿ, ಪ್ರಗೃಹ್ಯ = ಅವನನ್ನು ಹಿಡಿದುಕೊಂಡು, ಆತ್ಮನಃ – ತನ್ನ, ಅಂಸಕೇ = ಭುಜದಲ್ಲಿ, ನಿಧಾಯ = ಹೊತ್ತುಕೊಂಡು, ದ್ರುತಂ = ಬಹು ಜಾಗ್ರತೆಯಾಗಿ, ಜಗ್ಮಿವಾನ್ = ಲಂಕಾಪಟ್ಟಣಕ್ಕೆ ಹೊರಟನು.

ತಾತ್ಪರ್ಯ.––ತಾನು ಪ್ರಯೋಗಿಸಿದ ಪರಿಘಾಯುಧವು ಹನುಮಂತನ ಅಭೇದ್ಯವಾದ ವಕ್ಷಸ್ಥಳದಲ್ಲಿ ಬಿದ್ದು ಚೂರ್ಣೀಕೃತವಾಗಿ ವ್ಯರ್ಥವಾಯಿತು. ಆಮೇಲೆ ನಿಕುಂಭನು ಹನುಮಂತನ ಬಳಿಗೆ ಬಂದು ಅವನನ್ನು ಹಿಡಿದು ತನ್ನ ಹೆಗಲಮೇಲೆ ಹೊತ್ತುಕೊಂಡು ಬಹು ಜಾಗ್ರತೆಯಾಗಿ ಲಂಕಾಪಟ್ಟಣವನ್ನು ಕುರಿತು ಹೊರಟನು.

ಶ್ಲೋಕ ॥ ಪ್ರಗೃಹ್ಯ ಕಂಠಮಸ್ಯ ಸಃ ।
ಪ್ರಧಾನಮಾರುತಾತ್ಮಜಃ ॥
ಸ್ವಮಾಶು ಮೋಚಯಂ ಸ್ತತೋ ।
ನ್ಯಪಾತಯು ದ್ಧರಾತಲೇ ॥೩೩॥

ಅರ್ಥ.—ಸಃ=ನಿಕುಂಭನ ಹೆಗಲಮೇಲಿದ್ದ, ಪ್ರಧಾನ ಮಾರುತಾತ್ಮಜಃ = ಪ್ರಧಾನ ಮಾರುತ = ಮುಖ್ಯ ವಾಯುವಿನ, ಆತ್ಮಜಃ = ಪುತ್ರನಾದ ಹನುಮಂತನು, ಅಸ್ಯ=ಈ ನಿಕುಂಭನ, ಕಂಠಂ=ಕುತ್ತಿಗೆಯನ್ನು, ಪ್ರಗೃಹ್ಯ-ಹಿಡಿದು, ತತಃ=ಆ ನಿಕುಂಭನಿಂದ, ಸ್ವಂ=ತನ್ನನ್ನು. ಆಶು=ಜಾಗ್ರತೆಯಾಗಿ, ಮೋಚಯನ್=ಬಿಡಿಸಿಕೊಂಡನು, ಅತಃ=ಅನಂತರ, ಧರಾತಲೇ=ಭೂಮಿಯಮೇಲೆ, ನ್ಯಪಾತಯುತ್=ಅವನನ್ನು ಕೆಡಪಿದನು.

ತಾತ್ಪರ್ಯ.—ನಿಕುಂಭನು ಹನುಮಂತನನ್ನು ತನ್ನ ಹೆಗಲ ಮೇಲೆ ಹೊತ್ತುಕೊಂಡು ಲಂಕಾಪಟ್ಟಣಕ್ಕೆ ಹೋಗುತ್ತಿರಲು ಪ್ರಧಾನ ವಾಯುಪುತ್ರನಾದ ಹನುಮಂತನು ಆ ನಿಕುಂಭನ ಕುತ್ತಿಗೆಯನ್ನು ಹಿಡಿದು ಹಿಂಸಿಸಿ ಅವನಿಂದ ಬಿಡಿಸಿಕೊಂಡು ಭೂಮಿಯಮೇಲೆ ಅವನನ್ನು ಬೀಳಿಸಿದನು.

ಶ್ಲೋಕ ॥ ಚಕಾರ ತಂ ರಣಾತ್ಮಕೇ ।
ಮುಖೇ ರಮೇಶ ದೈವತೇ ॥
ಪಶುಂ ಪ್ರಭಂಜನಾತ್ಮಜೋ ।
ವಿನೇದುರತ್ರ ದೇವತಾಃ ॥೩೪॥

ಅರ್ಥ:—ಪ್ರಭಂಜನಾತ್ಮಜಃ = ವಾಯುಪುತ್ರನಾದ ಹನುಮಂತನು ತಂ=ಆ ನಿಕುಂಭನನ್ನು, ರಣಾತ್ಮಕೇ=ಯುದ್ಧರೂಪವಾದ, ರಮೇಶದೇವತೇ=ಲಕ್ಷ್ಮೀಪತಿಯಾದ ವಿಷ್ಣುದೇವತಾಕವಾದ, ಮುಖೇ=ಯಜ್ಞದಲ್ಲಿ, ಪಶುಂ=ಯಜ್ಞಪಶುವನ್ನಾಗಿ, ಚಕಾರ=ಮಾಡಿದನು, ದೇವತಾಃ=ಆಕಾಶದಲ್ಲಿ ನೋಡುತ್ತಿದ್ದ ದೇವತೆಗಳು, ಅತ್ರ=ಈ ರಣಯಜ್ಞದಲ್ಲಿ, ವಿನೇದುಃ=ವಿನೋದ ಮಾಡಿದರು ( ಅಶ್ರಾವಯೇತ್ಯಾದಿ ಯಜ್ಞದಲ್ಲಿ ಪ್ರಯೋಗಿಸುವ ಮಂತ್ರಧ್ವನಿಯನ್ನು ಮಾಡಿದರು. )

ವಿಶೇಷಾರ್ಥ.–ಇಲ್ಲಿ ಧ್ವನಿತಾರ್ಥವನ್ನು ಗ್ರಹಣಮಾಡಬೇಕು. ಹೇಗೆಂದರೆ:—ಹನುಮಂತನು ನಿಕುಂಭನನ್ನು ಯಜ್ಞಪಶುವನ್ನಾಗಿ ಮಾಡಿದನು. ಎಂದು ಉಕ್ತವಾಗಿದೆ. ಯಜ್ಞಪಶುವೆಂದರೆ ಯಜ್ಞಾದಿಗಳಲ್ಲಿ ಪಶುವಿನ "ವಪಾ" ( ಕರುಳು ) ತೆಗೆದು ಅದನ್ನು ಪ್ರಧಾನ ಹೋಮಮಾಡತಕ್ಕ ವಿಧಿ. ಅದೇ ಪ್ರಕಾರ ವಪೆಯನ್ನು ತೆಗಿಯ ಬೇಕಾದರೆ ಯಜ್ಞದಲ್ಲಿ ಪಶುವಿಗೆ ಸಂಸ್ಕಾರ ಮಾಡಿ, ಆ ಪಶು ಕೂಗದಂತೆ ತಕ್ಕ ನಿರ್ಬಂಧ ಕಲ್ಪಿಸಿ ಮುಷ್ಟಿಯಿಂದ ಗುದ್ದಿ ಅದರ ಹೊಟ್ಟೆಯೊಳಗಿನ ಕರುಳನ್ನು ತೆಗೆದುಕೊಳ್ಳಬೇಕು. ಆ ಕರುಳು ವಪಾ ಎಂದೆನಿಸಿಕೊಳ್ಳುವುದು. ಅದನ್ನು ಸಂಸ್ಕಾರಮಾಡಿ ನಂತರ ಹೋಮ ಮಾಡಬೇಕು. ಇದೇ ಯಜ್ಞದಲ್ಲಿನ ನಿಯಮ ಅದೇ ಪ್ರಕಾರ ನಿಕುಂಭನ ಹೆಗಲಮೇಲಿದ್ದ ಹನುಮಂತನು ಅವನಿಂದ ಬಿಡಿಸಿಕೊಂಡು, ಅವನ ಕುತ್ತಿಗೆಯನ್ನು ಹಿಸಿಕಿ ಕೊಂದು ನೆಲದಮೇಲೆ ಕೆಡಹಿದನೆಂದು ಧ್ವನಿತಾರ್ಥವು. ಆ ನಿಕುಂಭನನ್ನು ಹನುಮಂತನು ಈ ರೀತಿಯಾಗಿ ವಧೆಮಾಡಿದ್ದನ್ನು ನೋಡಿ ಅಂತರಿಕ್ಷದಲ್ಲಿದ್ದ ದೇವತೆಗಳು " ಅಶ್ರಾವಯ " ಎಂಬ ಯಜ್ಞದಲ್ಲಿ ಉಪಯೋಗಿಸುವ ಮಂತ್ರಗಳನ್ನು ಶ್ರೀರಾಮದೇವತಾ ಸಂಬಂಧವಾದ ರಣಯಜ್ಞದಲ್ಲಿ ಉಪಯೋಗಿಸಿ ಮಂತ್ರ ಧ್ವನಿಮಾಡಿ ವಿನೋದಮಾಡಿದರೆಂದು ತಾತ್ಪರ್ಯವು.

ಶ್ಲೋಕ || ಸುಪ್ತಘ್ನೋ ಯಜ್ಞಕೋಪಶ್ಚ ಶಕುನಿ ರ್ದೇವತಾಪನಿಃ |
ಯುದ್ಧೋನ್ಮತ್ತಶ್ಚ ಮತ್ತಶ್ಚ ದೇವಾಂತಕ ನರಾಂತಕೌ ||೩೫||

ವಿದ್ಯುಜ್ಜಿಹ್ವಃ ಪ್ರಮಾಥೀ ಚ ಶುಕಸಾರಣ ಸಂಯುತಾಃ |
ರಾವಣ ಪ್ರೇರಿತಾಃ ಸರ್ವೇ ಮುಥ್ಯಂತಃ ಕಪಿಕುಂಜರಾನ್ ||೩೬||

ಅವಧ್ಯಾ ಬ್ರಹ್ಮವರತೋ ನಿಹತಾ ರಾಮ ಸಾಯಕೈಃ |
ತ್ರಿಶಿರಾ ಅತಿಕಾಯಶ್ಚ ನಿರ್ಯಯೂ ರಾವಣಾಜ್ಞಯಾ ||೩೭||

ಅರ್ಥ.—ರಾವಣ ಪ್ರೇರಿತಾಃ=ರಾವಣನಿಂದ ಆಜ್ಞಪ್ತರಾದ, ಸುಪ್ತಘ್ನಃ=ಸುಪ್ತಘ್ನನು, ಯಜ್ಞಕೋಪ=ಯಜ್ಞಕೋಪನು, ದೇವತಾಪನಿಃ=ದೇವತೆಗಳಿಗೆ ತಾಪವನ್ನು ಕೊಡತಕ್ಕ, ಶಕುನಿಃ=ಶಕುನಿಯೆಂಬ ರಾಕ್ಷಸನು, ಮತ್ತಃ=ಮತ್ತನು. ಯುದ್ಧೋನ್ಮತ್ತಃ=ಯುದ್ಧೋನ್ಮತ್ತನು, ದೇವಾಂತಕನರಾಂ

ತಕೌ-ದೇವಾಂತಕನು ಮತ್ತು ನರಾಂತಕನು ವಿದ್ಯುಜ್ಜಿಹ್ವಃ-ವಿದ್ಯುಜಿಹ್ವನೆಂಬುವನು, ಶುಕಸಾರಣಸಂಯುತಾಃ-ಶುಕ, ಸಾರಣ ಇವರಿಂದ ಸಹಿತರಾದ ಸರ್ವೇ=ಸಮಸ್ತರಾಕ್ಷಸರೂ, ಕಪಿಕುಂಜರಾನ್=ಕಪಿಶ್ರೇಷ್ಠರಾದ ಸುಗ್ರೀವಾದಿಗಳನ್ನು, ಮಥ್ನಂತಃ-ಯುದ್ಧಕ್ಕೆ ಬಂದು ಘಾಸಿಪಡಿಸುತ್ತಿರುವ, ಬ್ರಹ್ಮವರತಃ=ಬ್ರಹ್ಮದೇವರ ವರ ಪ್ರಸಾದದ ದೆಸೆಯಿಂದ ಅವಧ್ಯರಾದ ಸರ್ವೇ=ಸರ್ವರೂ, ರಾಮಸಾಯಕೈಃ-ಶ್ರೀರಾಮನ ಬಾಣಗಳಿಂದ, ನಿಹತಾಃ-ಹತರಾದರು, ರಾವಣಾಜ್ಞಯಾ-ರಾವಣನ ಆಜ್ಞೆಯಿಂದ, ತ್ರಿಶಿರಾ=ತ್ರಿಶಿರನೆಂಬುವನೂ, ಅತಿಕಾಯಶ್ಚ-ಅತಿಕಾಯನೆಂಬುವನೂ ಕೂಡ, ನಿರ್ಯಯೌ-ಯುದ್ಧಕ್ಕೋಸ್ಕರ ಹೊರಟರು, (ಇವರೂ ರಾಮಬಾಣದಿಂದ ಹತರಾದರು.)

ತಾತ್ಪರ್ಯ.—ನಿಕುಂಭನ ವಧೆಯನಂತರ ರಾವಣನಿಂದ ಆಜ್ಞಪ್ತರಾಗಿ ಸುಪ್ತಘ್ನ, ಯಜ್ಞಕೋಪ, ದೇವತೆಗಳಿಗೆ ತಾಪಕೊಡತಕ್ಕ ಶಕುನಿ, ಮತ್ತನು, ಯುದ್ಧೋನ್ಮತ್ತನು, ದೇವಾಂತಕನು, ನರಾಂತಕನು ವಿದ್ಯುಜ್ಜಿಹ್ವನೂ ಪ್ರಮಾಥಿ ಎಂಬುವನೂ ಸಹ ಶುಕ ಮತ್ತು ಸಾರಣ ಇವರಿಂದ ಸಹಿತರಾಗಿ ಕಪಿಕುಂಜರರಾದ ವಾನರಶ್ರೇಷ್ಠರನ್ನು ಮಥನಮಾಡುತ್ತಿರಲಾಗಿ ಈ ಸಮಸ್ತರೂ ಬ್ರಹ್ಮದೇವರ ವರಪ್ರಸಾದದಿಂದ ಅವಧ್ಯರಾದಾಗ್ಯೂ ಶ್ರೀರಾಮಬಾಣದಿಂದ ಹತರಾದರು. ತ್ರಿಶಿರಾ ಮತ್ತು ಅತಿಕಾಯ ಇವರೂ ರಾವಣಾಜ್ಞೆಯಿಂದ ಯುದ್ಧಕ್ಕೆ ಹೊರಟರು. ಇವರೂ ಸಹ ರಾಮಬಾಣದಿಂದ ಹತರಾದರು ಎಂದು ತಾತ್ಪರ್ಯವು.

**ಶ್ಲೋಕ ॥ ನರಾಂತಕೋ ರಾವಣಜೋ ।**
**ಹಯವರ್ಯೋಪರಿ ಸ್ಥಿತಃ ॥**
**ಅಭೀಃ ಸಸಾರ ಸಮರೇ ।**
**ಪ್ರಾಸೋದ್ಯತ ಕರೋ ಹರೀನ್ ॥೩೮॥**

ಅರ್ಥ. ರಾವಣಜಃ=ರಾವಣಪುತ್ರನಾದ ನರಾಂತಕಃ=ನರಾಂತಕನೆಂಬ ರಾಕ್ಷಸನು ಹಯವರ್ಯೋಪರಿ=ಶ್ರೇಷ್ಠವಾದ ಕುದುರೆಯಮೇಲೆ ಸ್ಥಿತಃ=ಕೂತವನಾಗಿ ಸಮರೇ=ಯುದ್ಧದಲ್ಲಿ ಪ್ರಾಸ=ಪ್ರಾಸವೆಂಬ ಆಯುಧ

ದಿವ ಉದ್ಯತ-ಪ್ರಕಾಶಮಾನವಾದ ಕರಃ೯=ಹಸ್ತವುಳ್ಳವನಾಗಿ ಹರೀನ್ ಪ್ರತಿ=ಕಪಿವರರನ್ನು ಕುರಿತು, ಅಭೀಃ=ಭಯರಹಿತನಾಗಿ, ಸಸಾರ=ಅಭಿಮುಖವಾಗಿ ಹೊರಟನು.

ತಾತ್ಪರ್ಯ.—ರಾವಣನ ಪುತ್ರನಾದ ನರಾಂತಕನು ಶ್ರೇಷ್ಠವಾದ ಕುದುರೆಯ ಮೇಲೆ ಕುಳಿತು ಪ್ರಾಸಾಯುಧವನ್ನು ಹಿಡಿದು ಭಯವಿಲ್ಲದೆ ಯುದ್ಧದಲ್ಲಿ ಕಪಿಶ್ರೇಷ್ಠರಿಗೆ ಅಭಿಮುಖವಾಗಿ ಹೊರಟನು.

ಶ್ಲೋಕ || ತಂ ದಹಂತಮನೀಕಾನಿ ಯುವರಾಜೋಂಗದೋ ಬಲೀ |
ಉತ್ಪಪಾತ ನಿರೀಕ್ಷ್ಯಾಶು ಸಮದರ್ಶಯ ದಪ್ಯುರಃ ||೩೯||

ಅರ್ಥ.—ಅನೀಕಾನಿ=ಸೈನ್ಯಗಳನ್ನು, ದಹಂತಂ = ದಹಿಸುತ್ತಿರುವ, ತಂ-ಆ ನರಾಂತಕನನ್ನು, ನಿರೀಕ್ಷ್ಯ=ನೋಡಿ, ಬಲೀ=ಪರಾಕ್ರಮಶಾಲಿಯಾದ, ಯುವರಾಜಃ=ಯುವರಾಜನಾದ, ಅಂಗದಃ=ಅಂಗದನು, ಆಶು = ಜಾಗ್ರತೆಯಾಗಿ, ಉತ್ಪಪಾತ = ನರಾಂತಕನ ಮುಂಭಾಗಕ್ಕೆ ಹಾರಿದನು. ಅಪಿ=ಮತ್ತು, ಉರಃ-ತನ್ನ ವಕ್ಷಸ್ಥಳವನ್ನು, ಸಮದರ್ಶಯತ್ = ನರಾಂತಕನಿಗೆ ತೋರಿಸಿದನು.

ತಾತ್ಪರ್ಯ.-ನರಾಂತಕನು ಬಂದದ್ದನ್ನು ನೋಡಿ ಯುವರಾಜನಾದ ಅಂಗದನು ಇವನೆದುರಿಗೆ ಹಾರಿಬಂದು ತನ್ನ ವಕ್ಷಸ್ಥಳವನ್ನು ಅವನಿಗೆ ತೋರಿಸಿದನು.

ಶ್ಲೋಕ || ತಸ್ಯೋರಸಿ ಪ್ರಾಸವರಂ ಪ್ರಜಹಾರ ಸ ರಾಕ್ಷಸಃ |
ದ್ವಿಧಾ ಸಮಭವತ್ತತ್ತು ವಾಲಿಪುತ್ರಸ್ಯ ತೇಜಸಾ ||೪೦||

ಅರ್ಥ.- ಸರಾಕ್ಷಸಃ = ಆ ನರಾಂತಕನು, ತಸ್ಯ = ಈ ಅಂಗದನ, ಉರಸಿ - ವಕ್ಷಸ್ಥಳದಲ್ಲಿ, ಪ್ರಾಸವರಂ = ಶ್ರೇಷ್ಟವಾದ ಪ್ರಾಸಾಯುಧವನ್ನು ಪ್ರಜಹಾರ=ಹೊಡೆದನು. ತತ್ತು-ಆ ಪ್ರಾಸಾಯುಧವಾದರೋ, ವಾಲಿಪುತ್ರಸ್ಯ=ವಾಲಿಪುತ್ರನಾದ ಅಂಗದನ, ತೇಜಸಾ-ಸಾಮರ್ಥ್ಯದಿಂದ, ದ್ವಿಧಾ=ಎರಡಾಗಿ, ಸಮಭವತ್ = ಮುರಿಯಿತು.

ತಾತ್ಪರ್ಯ.—ನರಾಂತಕನು ಅಂಗದನ ವಕ್ಷಸ್ಥಳದಲ್ಲಿ ತನ್ನ ಪ್ರಬಲವಾದ ಪ್ರಾಸಾಯುಧವನ್ನು ಪ್ರಹಾರಮಾಡಿದನು- ಆ ಪ್ರಸಾಯುಧವು ಅಂಗದನ ಸಾಮರ್ಥ್ಯದಿಂದ ಅವನನ್ನು ಏನೂ ಮಾಡಲಾರದೆ ಎರಡು ಭಾಗವಾಗಿ ಮುರಿದುಹೋಯಿತು.

ಶ್ಲೋಕ || ಅಥಾಸ್ಯ ಹಯಮಾಶ್ವೇವ | ನಿಜಘಾನ ಮುಖೇಕಪಿಃ || ಪೇತ
ತುಶ್ಚಾಕ್ಷಿಣೀ ತಸ್ಯ | ಸಪಪಾತಮಮಾರಚ ||೪೧||

ಅರ್ಥ.—ಅಥ=ಅನಂತರ, ಕಪಿಃ-ಅಂಗದನು, ಆಶು=ಶೀಘ್ರವಾಗಿ, ಅಸ್ಯ=ಆ ನರಾಂತಕನ, ಹಯಂ=ಕುದುರೆಯ, ಮುಖೇ=ಮುಖದಲ್ಲಿ, ನಿಜಘಾನ=ಹೊಡೆದನು. ತಸ್ಯ=ಆ ಕುದುರೆಯ, ಅಕ್ಷಿಣೀಚ-ಎರಡು ಕಣ್ಣುಗಳೂ, ಪೇತತುಃ=ಬಿದ್ದುಹೋದವು. ಸಃ=ಆ ಕುದುರೆಯೂ, ಪಪಾತ=ಬಿದ್ದುಹೋಯಿತು, ಮತ್ತು ಮಾರಚ-ಮೃತವಾಯಿತು.

ತಾತ್ಪರ್ಯ.—ಅನಂತರ ಅಂಗದನು ನರಾಂತಕನು ಕೂತಿದ್ದ ಕುದುರೆಗೆ ಮುಖದಮೇಲೆ ಹೊಡೆದನು. ತಕ್ಷಣವೇ ಆ ಕುದುರೆಯ ಕಣ್ಣುಗಳೆರಡೂ ಬಿದ್ದುಹೋದವು. ಕುದುರೆಯೂ ಭೂಮಿಯ ಮೇಲೆ ಬಿದ್ದು ಮೃತವಾಯಿತು.

ಶ್ಲೋಕ || ಸಖಡ್ಗವರ ಮಾದಾಯ | ಪ್ರಸಸಾರರಣೇಕಪಿಂ || ಆಛ್ಛಿದ್ಯಚಾ
ಸ್ಯ ಖಡ್ಗಂತಂ | ನಿಹತೋವಾಲಿಸೂನುನಾ ||೪೨||

ಅರ್ಥ.—ಸಃ-ಆ ನರಾಂತಕನು, ಖಡ್ಗವರಂ-ಶ್ರೇಷ್ಟವಾದ ಖಡ್ಗಾಯುಧವನ್ನು, ಆದಾಯ=ತೆಗೆದುಕೊಂಡು, ರಣೇ-ಯುದ್ಧರಂಗದಲ್ಲಿ, ಕಪಿಂಪ್ರತಿ=ಅಂಗದನನ್ನು ಕುರಿತು, ಪ್ರಸಸಾರ = ಅಭಿಮುಖವಾಗಿ ಬಂದನು. (ಅವನು)ವಾಲಿಸೂನುನಾ=ವಾಲಿಯ ಪುತ್ರನಾದ ಅಂಗದನಿಂದ, ಅಸ್ಯ = ಈ ನರಾಂತಕನ, ತಂಖಡ್ಗಂ-ಆ ಖಡ್ಗಾಯುಧವು, ಆಛಿದ್ಯ - ಛೇದಿಸಲ್ಪಟ್ಟು, ನಿಹತಶ್ಚ=ಸಂಹೃತನಾದನು.

ತಾತ್ಪರ್ಯ.—ಕುದುರೆಯು ಬಿದ್ದು ಮೃತವಾದಮೇಲೆ ಆ ನರಾಂತ

ಕನು ಖಡ್ಗಾಯುಧವನ್ನು ತೆಗೆದುಕೊಂಡು ಯುದ್ಧರಂಗದಲ್ಲಿ ವಾಲಿಯ ಪುತ್ರನಾದ ಅಂಗದನ ಕಡೆಗೆ ಸರಿದನು, ಆ ಅಂಗದನು ಅವನ ಖಡ್ಗಾಯುಧವನ್ನು ಛೇದನಮಾಡಿ ಅವನನ್ನು ಸಂಹಾರ ಮಾಡಿದನು.

**ಶ್ಲೋಕ || ಗಂಧರ್ವಕನ್ಯಕಾ ಸೂತೇ | ನಿಹತೇ ರಾವಣಾತ್ಮಜೇ || ಆಜಗಾಮಾಗ್ರಜಸ್ತಸ್ಯ | ಸೋದರ್ಯೋ ದೇವತಾಂತಕಃ ||೪೩||**

ಅರ್ಥ.—ಗಂಧರ್ವಕನ್ಯಕಾ = ಗಂಧರ್ವ ಕನ್ಯೆಯಲ್ಲಿ, ಸೂತೇ – ಉತ್ಪನ್ನನಾದ, ರಾವಣಾತ್ಮಜೇ = ರಾವಣನ ಪುತ್ರನಾದ ನರಾಂತಕನು, ನಿಹತೇಸತಿ–ಸಂಹೃತನಾಗಲು, ತಸ್ಯ=ಆನರಾಂತಕನಿಗೆ, ಸೋದರ್ಯಃ= ಸಹೋದರನಾದ, ಅಗ್ರಜಃ–ಅಣ್ಣನಾದ, ದೇವತಾಂತಕಃ = ದೇವಾಂತಕ ನಾಮಕ ರಾಕ್ಷಸನು, ಆಜಗಾಮ=ಯುದ್ಧಕ್ಕೆ ಬಂದನು.

ತಾತ್ಪರ್ಯ.—ನರಾಂತಕನು ಗಂಧರ್ವಸ್ತ್ರೀಯಲ್ಲಿ ರಾವಣನಿಂದ ಹುಟ್ಟಿದವನು. ಇವನು ಮೃತನಾದಮೇಲೆ ಇವನಿಗೆ ಅಣ್ಣನಾದ ದೇವಾಂತಕನು ಯುದ್ಧಕ್ಕೆ ಬಂದನು.

**ಶ್ಲೋಕ || ತಸ್ಯಾಪತತ ಯೇಷಾಶು | ಶರವರ್ಷ ಪ್ರತಾಪಿತಾಃ || ಪ್ರದದ್ರುವುರ್ಭಯಾತ್ಸರ್ವೇ | ಕಪಯೋ ಜಾಂಬವನ್ಮುಖಾಃ ||೪೪||**

ಅರ್ಥ.—ಆಶು=ಜಾಗ್ರತೆಯಾಗಿ, ಅಪತತಏವ–ಯುದ್ಧಕ್ಕಾಗಿ ಬರುತ್ತಿರುವ, ತಸ್ಯ – ಆ ದೇವಾಂತಕನ, ಶರವರ್ಷ=ಬಾಣಗಳ ಮಳೆಯಿಂದ ಪ್ರತಾಪಿತಾಃ–ಅತ್ಯಂತ ಸಂತಾಪಿತರಾದ, ಜಾಂಬವನ್ಮುಖಾಃ=ಜಾಂಬವಂತನೇ ಮೊದಲಾದ, ಸರ್ವೇ=ಸಮಸ್ತರಾದ, ಕಪಯಃ = ವಾನರರೂ, ಭಯಾತ್ – ಭಯಪಟ್ಟು, ಪ್ರದದ್ರುವುಃ = ಓಡಿಹೋದರು.

ತಾತ್ಪರ್ಯ.—ನರಾಂತಕನ ಅಣ್ಣನಾದ ದೇವಾಂತಕನು ಈ ಕಪಿಗಳೊಡನೆ ಯುದ್ಧಕ್ಕೆ ಬಂದು ಅತಿ ಶೀಘ್ರವಾಗಿ ಕಪಿಗಳಮೇಲೆ ಬಾಣಗಳ ಮಳೆ ಸುರಿಸಿದನು. ಜಾಂಬವಂತನೇ ಮೊದಲಾದ ಸಮಸ್ತ ಕಪಿಗಳೂ ಅವನ ಬಾಣದಿಂದ ಸಂತಪ್ತರಾಗಿ ಭಯಪಟ್ಟು ಓಡಿಹೋದರು.

**ಶ್ಲೋಕ || ಸಶರಂ ತರಸಾದಾಯ | ರವಿಪುತ್ರಾಯುಧೋಪಮಂ || ಅಂಗದಂ ಪ್ರಜಹಾರೋರಸ್ಯಪತತ್ಸಮುಮೋಹಚ ||೪೫||**

ಅರ್ಥ.— ಸಃ- ಆ ದೇವಾಂತಕನು, ತರಸಾ=ಬಹು ಜಾಗ್ರತೆಯಾಗಿ, ರವಿಪುತ್ರಾಯುಧೋಪಮಂ=ರವಿಪುತ್ರ-ಸೂರ್ಯನ ಮಗನಾದ ಯಮನ, ಆಯುಧ-ದಂಡಾಯುಧಕ್ಕೆ, ಉಪಮಂ=ಸಮಾನವಾದ, ಶರಂ=ಬಾಣವನ್ನು, ಆದಾಯ=ತೆಗೆದುಕೊಂಡು, ಅಂಗದಂ = ಅಂಗದನನ್ನು, ಉರಸಿ= ವಕ್ಷಸ್ಥಳದಲ್ಲಿ, ಪ್ರಜಹಾರ-ಹೊಡೆದನು. ಸಃ-ಅಂಗದನು, ಅಪತತ್- ನೆಲಕ್ಕೆ ಬಿದ್ದನು, ಮುಮೋಹಚ = ಮೂರ್ಛೆಗೊಂಡನು.

ತಾತ್ಪರ್ಯ.—ಆ ದೇವಾಂತಕನು ಯುದ್ಧಕ್ಕೆ ಬರುತ್ತಲೇ ಯಮ ದಂಡಾಯುಧಕ್ಕೆ ಸಮಾನವಾದ ಬಾಣವನ್ನು ತೆಗೆದುಕೊಂಡು ಬಹು ಜಾಗ್ರತೆಯಾಗಿ ಅಂಗದನ ಎದೆಯ ಮೇಲೆ ಹೊಡೆದನು. ಆ ಪೆಟ್ಟಿನಿಂದ ಅಂಗದನು ನೆಲಕ್ಕೆ ಬಿದ್ದು ಮೂರ್ಛೆಹೋದನು.

**ಶ್ಲೋಕ || ಅಥತಿಗ್ಮಾಂಶು ತನಯಃ | ಶೈಲಂಪ್ರಚಲಪಾದಪಂ || ಅಭಿದುದ್ರಾವ ಸಂಗೃಹ್ಯ | ಚಿಕ್ಷೇಪಚ ನಿಶಾಚರೇ ||೪೬||**

ಅರ್ಥ:— ಅಥ = ಅನಂತರ, ತಿಗ್ಮಾಂಶುತನಯಃ = ತಿಗ್ಮಾಂಶು - ತೀಕ್ಷ್ಣವಾದ ಕಿರಣಗಳುಳ್ಳ ಸೂರ್ಯನ, ತನಯಃ - ಪುತ್ರನಾದ ಸುಗ್ರೀವನು, ಪ್ರಚಲಪಾದಪಂ = ಪ್ರಬಲಗಳಾದ ವೃಕ್ಷಗಳುಳ್ಳ, ಶೈಲಂ = ಪರ್ವತವನ್ನು, ಸಂಗೃಹ್ಯ - ತೆಗೆದುಕೊಂಡು, ಅಭಿದುದ್ರಾವ = ಈ ದೇವಾಂತಕನ ಅಭಿಮುಖವಾಗಿ ಓಡಿಬಂದನು. ಮತ್ತು ಆ ಪರ್ವತವನ್ನು, ನಿಶಾಚರೇ - ದೇವಾಂತಕನಮೇಲೆ ಚಿಕ್ಷೇಪ = ಇಟ್ಟನು ( ಹೊಡೆದನು. )

ತಾತ್ಪರ್ಯ.- ಅಂಗದನು ಮೂರ್ಛಿತನಾದನಂತರ ಸುಗ್ರಿವನು ವೃಕ್ಷಗಳಿಂದ ಸಹಿತವಾದ ಬೆಟ್ಟವನ್ನು ತೆಗೆದುಕೊಂಡು ದೇವಾಂತಕನ ಅಭಿಮುಖವಾಗಿ ಓಡಿಬಂದು ಆ ಪರ್ವತವನ್ನು ಅವನಮೇಲೆ ಪ್ರಯೋಗಿಸಿದನು.

**ಶ್ಲೋಕ || ತಮಾಪತಂತಮಾಲಕ್ಷ್ಯ | ದೂರಾತ್ಖುರ ವಿದಾರಿತಂ || ಸುರಾಂತಕಶ್ಚಕಾರಾಶು | ದಧಾರಚ ಪರಂಶರಂ ||೪೭||**

ಅರ್ಥ:- ಸುರಾಂತಕಃ=ದೇವಾಂತಕನು, ಆಪತಂತಂ-ತನ್ನನ್ನು ಕೊಲ್ಲುವುದಕ್ಕಾಗಿ ಒರುತ್ತಿರುವ, ತಂ = ಆ ಪರ್ವತವನ್ನು, ಆಲಕ್ಷ್ಯ =

ನೋಡಿ, ದೂರಾತ್ = ದೂರದಲ್ಲಿಯೇ, ಶರವಿದಾರಿತಂ = ( ಆ ಪರ್ವತವನ್ನು ) ತನ್ನ ಬಾಣದಿಂದ ಭೇದಿಸಲ್ಪಟ್ಟದನ್ನಾಗಿ, ಚಕಾರ = ಮಾಡಿದನು. ಆಶು=ತಕ್ಷಣದಲ್ಲಿಯೇ, ಪರಂಶರಂ=ಮತ್ತೊಂದು ಬಾಣವನ್ನು, ದಧಾರ ಚ=ಧಾರಣಮಾಡಿದನು.

ತಾತ್ಪರ್ಯ.– ಸುರಾಂತಕನು ಸುಗ್ರೀವನಿಂದ ಪ್ರಯೋಗಿಸಲ್ಪಟ್ಟ ಪರ್ವತವು ತನ್ನನ್ನು ಕೊಲ್ಲುವುದಕ್ಕೆ ಬರುತ್ತಿರುವುದನ್ನು ನೋಡಿ ಆ ಪರ್ವತವನ್ನು ತನ್ನ ಬಾಣದಿಂದ ದೂರದಲ್ಲಿಯೇ ಛೇದನಮಾಡಿದನು. ತಕ್ಷಣದಲ್ಲಿಯೇ ಮತ್ತೊಂದು ಬಾಣವನ್ನು ಧಾರಣ ಮಾಡಿದನು.

**ಶ್ಲೋಕ ॥ ಸತಮಾಕರ್ಣಮಾಕೃಷ್ಯ ಯಮದಂಡೋಪಮಂಶರಂ ಅವಿಧ್ಯದ್ಧೃದಯೇರಾಜ್ಞಃ । ಕಪೀನಾಂ ಸಪಪಾತಹ ॥೪೮॥**

ಅರ್ಥ:– ಸಃ = ಆ ಸುರಾಂತಕನು, ತಂ = ತಾನು ಧರಿಸಿದ್ದ, ಯಮದಂಡೋಪಮಂ=ಯಮಧರ್ಮನ ದಂಡಕ್ಕೆ ಸಮಾನವಾದ, ಶರಂ=ಬಾಣವನ್ನು, ಆಕರ್ಣಂ – ಕಿವಿಯ ಪರಿಯಂತರವಾಗಿ, ಆಕೃಷ್ಯ=ಎಳೆದು, ಕಪೀನಾಂ–ಕಪಿಗಳ, ರಾಜ್ಞಃ=ದೊರೆಯಾದ ಸುಗ್ರೀವನ, ಹೃದಯೇ = ವಕ್ಷಸ್ಥಳದಲ್ಲಿ, ಅವಿಧ್ಯತ್ – ಹೊಡೆದನು. ( ಅನಂತರ ) ಸಃ=ಆ ಸುಗ್ರೀವನು, ಪಪಾತಹ = ನೆಲಕ್ಕೆ ಬಿದ್ದನು.

**ಶ್ಲೋಕ ॥ ಬಲಮಪ್ರತಿಮಂ ವೀಕ್ಷ್ಯ । ಸುರಶತ್ರೋಸ್ತುಮಾರುತಿಃ ॥ ಆಹ್ವಯಾಮಾಸ ಯುದ್ಧಾಯ । ಕೇಶವಃ ಕೈಟಭಂ ಯಥಾ ॥೪೯॥**

ಅರ್ಥ:—ಮಾರುತಿಃ–ಹನುಮಂತನು, ಸುರ ಶತ್ರೋಃ=ದೇವಾಂತಕನ, ಅಪ್ರತಿಮಂ=ಅಸದೃಶವಾದ, ಬಲಂ=ಪರಾಕ್ರಮವನ್ನು, ವೀಕ್ಷ್ಯ=ನೋಡಿ, ಕೇಶವಃ=ಶ್ರೀಪರಮಾತ್ಮನು, ಕೈಟಭಂ ಯಥಾ–ಕೈಟಭ ನಾಮಕ ದೈತ್ಯನನ್ನು ಯಾವರೀತಿಯಿಂದ ಯುದ್ಧಕ್ಕೆ ಕರೆದನೋ ಅದೇರೀತಿಯಿಂದ ( ತಂ=ದೇವಾಂತಕನನ್ನು ) ಯುದ್ಧಾಯ–ಯುದ್ಧಕ್ಕೋಸ್ಕರ, ಆಹ್ವಯಾಮಾಸ=ಕರೆದನು.

ತಾತ್ಪರ್ಯ.—ಕಪಿರಾಜನು (ಸುಗ್ರೀವನು) ಬಿದ್ದನಂರ ತಹನುಮಂತನು ಈ ದೇವಾಂತಕನ ಅಸದೃಶವಾದ ಪರಾಕ್ರಮವನ್ನು ನೋಡಿ ಪೂರ್ವದ

ಲ್ಲಿ ಶ್ರೀಪರಮಾತ್ಮನು ಕೈಟಭ ನಾಮಕ ದೈತ್ಯನನ್ನು ಯಾವರೀತಿಯಲ್ಲಿ ಯುದ್ಧಕ್ಕೆ ಕರೆದರೋ ಆ ಪ್ರಕಾರ ಈ ಹನುಮಂತನು ದೇವಾಂತಕನನ್ನು ತನ್ನ ಸಂಗಡ ಯುದ್ಧಮಾಡುವುದಕ್ಕೋಸ್ಕರ ಕರೆದನು-

**ಶ್ಲೋಕ || ತಮಾಪತಂತ ಮಾಲೋಕ್ಯ | ರಥಂಸಹಯ ಸಾರಥಿಂ || ಚೂರ್ಣಯಿತ್ವಾ ಧನುಶ್ಚಾಸ್ಯ | ಸಮಾಚ್ಛಿದ್ಯಬಭಂಜಹ ||೫೦||**

ಅರ್ಥ.—ಮಾರುತಿಃ=ಹನುಮಂತನು, ಆಪತಂತಂ = ಯುದ್ಧಕ್ಕಾಗಿ ಬರುತ್ತಲಿರುವ, ತಂ=ದೇವಾಂತಕನನ್ನು, ಆಲೋಕ್ಯ-ನೋಡಿ, ಸಹಯಸಾರಥಿಂ=ಕುದುರೆ ಮತ್ತು ಸಾರಥಿಯಿಂದ ಸಹಿತವಾದ, ರಥಂ=ರಥವನ್ನು, ಚೂರ್ಣಯಿತ್ವಾ=ಚೂರ್ಣವಾಗಿ ಮಾಡಿ, ಅಸ್ಯ=ದೇವಾಂತಕನ, ಧನುಃ=ಧನುಸ್ಸನ್ನು, ಸಮಾಛಿದ್ಯ = ಛೇದನಮಾಡಿ, ಬಭಂಜಹ = ಮುರಿದು ಹಾಕಿದನು.

ತಾತ್ಪರ್ಯ.—ತನ್ನ ಮೇಲೆ ಯುದ್ಧಕ್ಕಾಗಿ ಬರುತ್ತಲಿರುವ ಆ ದೇವಾಂತಕನನ್ನು ಹನುಮಂತನು ಕುದುರೆ ಮತ್ತು ಸಾರಥಿಯಿಂದ ಸಹಿತವಾಗಿ ರಥವನ್ನು ಚೂರುಚೂರಾಗಿ ಮಾಡಿ ಅವನ ಧನುಸ್ಸನ್ನೂ ಛೇದನ ಮಾಡಿ ಮುರಿದುಹಾಕಿದನು.

**ಶ್ಲೋಕ || ಅಥಖಡ್ಗಂ ಸಮಾದಾಯ | ಪುರ ಆಪತತೋರಿಪೋಃ || ಹರಿಃ ಪ್ರಗೃಹ್ಯ ಕೇಶೇಷು | ಪಾತಯಿತ್ವೈ ನಮಾಹವೇ ||೫೧||**

**ಶ್ಲೋಕ | ಶಿರೋ ಮಮರ್ಧ ತರಸಾ | ಪವಮಾನಾತ್ಮಜಃ ಪದಾ || ತಮಿಶಾನಗಿರಾವಧ್ಯಂ ನಿಹತ್ಯ ಪವನಾತ್ಮಜಃ ಸಮಿಾಡಿತ ಸುರವರ್ಯೈಃ ಪ್ಲವಂಗೈರ್ವೀಕ್ಷಿತೋಮುದಾ ||೫೨||**

ಅರ್ಥ:—ಅಥ=ಅನಂತರ, ಪವಮಾನಾತ್ಮಜಃ = ವಾಯುಪುತ್ರನಾದ, ಹರಿಃ=ಹನುಮಂತನು, ಖಡ್ಗಂ=ಖಡ್ಗವನ್ನು, ಸಮಾದಾಯ=ತೆಗೆದುಕೊಂಡು, ಪುರಃ - ಎದುರಿನಲ್ಲಿ, ಪತತಃ = ಬರುತ್ತಿರುವ, ರಿಪೋಃ = ಶತೃವಾದ, ಏನಂ=ಈ ದೇವಾಂತಕನ, ಕೇಶೇಷು=ಕೂದಲನ್ನು, ಪ್ರಗೃಹ್ಯ=ಹಿಡಿದು, ಆಹವೇ-ಯುದ್ಧದಲ್ಲಿ, ಪಾತಯಿತ್ವಾ=ಬೀಳಿಸಿ, ತರಸಾ -

ವೇಗದಿಂದ, ಶಿರಃ = ಅವನ ತಲೆಯನ್ನು, ಪದಾ = ಪಾದದಿಂದ, ಮಮರ್ದ=ಮರ್ದನಮಾಡಿದರು. ಪವನಾತ್ಮಜಃ-ಹನುಮಂತನು, ಈಶಾನಗಿರಾ= ಈಶಾನ=ರುದ್ರದೇವರ, ಗಿರಾ-ವರಪ್ರದಾನವಾಕ್ಯದಿಂದ, ಅವಧ್ಯಂ=ವಧ ರಹಿತನಾದ, ತಂ=ದೇವಾಂತಕನನ್ನು, ನಿಹತ್ಯ=ಸಂಹಾರಮಾಡಿ, ಸುರವರ್ಯೈಃ=ಶ್ರೇಷ್ಟರಾದ ದೇವತೆಗಳಿಂದ ಸಮೀಡಿತಃ=ಚೆನ್ನಾಗಿ ಸ್ತುತಿಗೊಂಡವರಾಗಿ, ಪ್ರವಂಗೈಃ=ಜಾಂಬವ ಅಂಗದ ಸುಗ್ರೀವಾದಿ ಕಪಿಗಳಿಂದ, ಮುದಾ=ಸಂತೋಷದಿಂದ, ವೀಕ್ಷಿತಃ=ನೋಡಲ್ಪಟ್ಟವರಾದರು.

ತಾತ್ಪರ್ಯ:—ಹನುಮಂತನು ದೇವಾಂತಕನ ಹಯ ಸಾರಥಿಯಿಂದ ಸಹಿತವಾಗಿದ್ದ ರಥವನ್ನು ನಾಶಮಾಡಿದನಂತರ ಆ ದೇವಾಂತಕನು ಖಡ್ಗಾಯುಧವನ್ನು ತೆಗೆದುಕೊಂಡು ಯುದ್ಧಕ್ಕಾಗಿ ಮುಂದೆ ಬರುತ್ತಿರುವುದನ್ನು ನೋಡಿ ಅವನ ಜುಟ್ಟನ್ನು ಹಿಡಿದು ನೆಲಕ್ಕೆ ಕೆಡವಿದರು. ಅನಂತರ ಅವನ ತಲೆಯನ್ನು ಚೆನ್ನಾಗಿ ಮರ್ಧನಮಾಡಿದರು. ಆ ದೇವಾಂತಕನು ರುದ್ರದೇವರ ವರಪ್ರಸಾದ ವಾಕ್ಯದ ದೆಶೆಯಿಂದ ವಧ್ಯನಲ್ಲದೆ ಇದ್ದಾಗ್ಯೂ ಹನುಮಂತನು ಅವನನ್ನು ಸಂಹಾರಮಾಡಿದನು, ಇದನ್ನು ಅಂತರಿಕ್ಷದಲ್ಲಿ ನೋಡುತ್ತಲಿದ್ದ ದೇವತೆಗಳು ಹನುಮಂತನನ್ನು ಸ್ತೋತ್ರಮಾಡಿದರು, ಮತ್ತು ಅಲ್ಲಿದ್ದ ಜಾಂಬವಂತನೇ ಮೊದಲಾದ ಕಪಿಗಳು ಈ ಹನುಮಂತನನ್ನು ಸಂತೋಷಯುಕ್ತವಾದ ನೋಟದಿಂದ ನೋಡಿದರು.

**ಶ್ಲೋಕ ॥ ವಿದ್ರಾವಿತಾಖಿಲಕಪಿಂ । ವರಾತ್ರಿಶಿರ ಸಂವಿಭೋಃ ॥ ಭಜ್ಞ್ವಾರಥಂ ಧನುಃ ಖಡ್ಗಂ । ಆಛಿದ್ಯಾ ಶಿರಸಂವ್ಯಧಾತ್ ॥೫೩॥**

ಅರ್ಥ:—ಸಃ=ಹನುಮಂತನು, ವಿದ್ರಾವಿತಾಖಿಲ ಕಪಿಂ = ವಿದ್ರಾವಿತ - ಓಡಿಸಲ್ಪಟ್ಟ, ಅಖಿಲ - ಸಮಸ್ತರಾದ, ಕಪಿಂ = ವಾನರುಗಳುಳ್ಳ, ವಿಭೋಃ-ಬ್ರಹ್ಮದೇವರ, ವರಾತ್-ವರದಿಂದ, ತ್ರಿಶಿರಸಂ=ಮೂರು ತಲೆಗಳುಳ್ಳ ತ್ರಿಶಿರಾನಾಮಕ ರಾಕ್ಷಸನನ್ನು, ತಸ್ಯ=ಅವನ, ರಥಂ=ರಥವನ್ನೂ, ಧನುಃ=ಧನುಸ್ಸನ್ನೂ, ಭಜ್ತ್ವ = ಮುರಿದು, ಖಡ್ಗಂ-ಖಡ್ಗಾಯುಧವನ್ನೂ, ಆಛಿದ್ಯ=ಛೇದನಮಾಡಿ ತಂ=ತ್ರಿಶಿರನಾಮಕ ರಾಕ್ಷಸನನ್ನು, ಅಶಿರಸಂ-ತಲೆಯಿಲ್ಲದವನನ್ನಾಗಿ ಮಾಡಿದನು.

ತಾತ್ಪರ್ಯ:—ಲಂಕೆಯಲ್ಲಿ ಯುದ್ಧ ಮಾಡುತ್ತಿದ್ದ ಸಮಸ್ತ ಕಪಿಗಳನ್ನೂ ಓಡಿಸುತ್ತಿರುವ, ಬ್ರಹ್ಮದೇವರ ವರದ ಮಹಿಮೆಯಿಂದ ಮೂರು ತಲೆಗಳನ್ನು ಪಡೆದಿದ್ದ ತ್ರಿಶಿರಾ ಎಂಬ ರಾಕ್ಷಸನ ರಥವನ್ನೂ ಮತ್ತು ಧನುಃಸನ್ನೂ ಮುರಿದು ಅವನ ಖಡ್ಗವನ್ನ ಛೇದಿಸಿ ಅವನನ್ನು ತಲೆಯೇ ಇಲ್ಲದವನನ್ನಾಗಿ ಮಾಡಿದನು.

**ಶ್ಲೋಕ || ಯುದ್ಧೋನ್ಮತ್ತಶ್ಚ ಮತ್ತಶ್ಚ | ಪಾರ್ವತೀವರದರ್ಪಿತೌ || ಪ್ರಮಥ್ಯಂತೌ ಕಪೀನ್ ಸರ್ವಾನ್ | ಹತೌ ಮಾರುತಿಮುಷ್ಟಿನಾ ||೫೪||**

ಅರ್ಥ.—ಪಾರ್ವತೀವರ-ಉಮಾದೇವಿಯರ ವರದಿಂದ, ದರ್ಪಿತೌ-ಕೊಬ್ಬಿದ್ದ, ಸರ್ವಾನ್‌ಕಪೀನ್=ಸಮಸ್ತ ಕಪಿಗಳನ್ನೂ. ಪ್ರಮಥ್ಯಂತೌ=ವ್ಯಥೆ ಪಡಿಸುತ್ತಿರುವ, ಯುದ್ಧೋನ್ಮತ್ತಶ್ಚ=ಯುದ್ಧೋನ್ಮತ್ತನೆಂಬ ರಾಕ್ಷಸನೂ ಮತ್ತು ಮತ್ತನೆಂಬ ರಾಕ್ಷಸನೂ ಸಹ, ಮಾರುತಿಮುಷ್ಟಿನಾ-ಹನುಮಂತನ ಗುದ್ದಿನಿಂದ, ಹತೌ=ಹತರಾದರು.

ತಾತ್ಪರ್ಯ.—ಪಾರ್ವತೀದೇವಿಯರ ವರಪ್ರಸಾದದಿಂದ ಕೊಬ್ಬಿದವರಾಗಿ ಸಮಸ್ತ ಕಪಿಗಳನ್ನೂ ವ್ಯಥೆಪಡಿಸುತ್ತಿದ್ದ ಯುದ್ಧೋನ್ಮತ್ತ ಮತ್ತು ಮತ್ತ ಇವರಿಬ್ಬರೂ ಶ್ರೀಹನುಮಂತನ ಮುಷ್ಟಿ ಪ್ರಹಾರದಿಂದ ಹತರಾದರು.

**ಶ್ಲೋಕ || ತತೋತಿ ಕಾಯೋ ತಿರಥೋ ರಥೇನ | ಸ್ವಯಂಭು ದತ್ತೇನ ಹರೀನ್ ಪ್ರಮೃತ್ನನ್ | ಚಚಾರಕಾಲಾನಲ ಸನ್ನಿಕಾಶೋ | ಗಂಧರ್ವಿಕಾಯಾಂ ಜನಿತೋದಶಾಸ್ಯಾತ್ ||೫೫||**

ಅರ್ಥ:—ತತಃ - ಯುದ್ಧೋನ್ಮತ್ತ ಮತ್ತು ಮತ್ತರು ಹತರಾದ ಮೇಲೆ, ಗಂಧರ್ವಿಕಾಯಾಂ-ಗಂಧರ್ವಸ್ತ್ರೀಯಲ್ಲಿ, ದಶಾಸ್ಯಾತ್ = ರಾವಣನಿಂದ, ಜನಿತಃ - ಉತ್ಪನ್ನನಾದ, ಅತಿರಥಃ=ಅತಿರಥ = ಅತಿರಥಿಕನಾದ, ಅತಿಕಾಯಃ = ಅತಿಕಾಯನೆಂಬ ರಾಕ್ಷಸನು, ಸ್ವಯಂಭುದತ್ತೇನ - ಬ್ರಹ್ಮದೇವರಿಂದ ಕೊಡಲ್ಪಟ್ಟದ್ದು, ರಥೇನ = ರಥಾರೂಢನಾಗಿ, ಹರೀನ್=ಕಪಿಗಳನ್ನು, ಪ್ರಮೃತ್ನನ್=ಮರ್ಧನ ಮಾಡುತ್ತಾ, ಕಾಲಾನಲ ಸನ್ನಿಕಾಶಃಸನ್=ಕಾಲಾನಲ = ಕಾಲಾಗ್ನಿಗೆ ಸಮಾನವಾದ ತೇಜಸ್ಸುಳ್ಳವನಾಗಿ, ಚಚಾರ-ಯುದ್ಧರಂಗನಲ್ಲಿ ಸಂಚರಿಸಿದನು.

ತಾತ್ಪರ್ಯ.—ಯುದ್ಧೋನ್ಮತ್ತ ಮತ್ತು ಹನುಮಂತನ ಮುಷ್ಟಿಪ್ರಹಾರದಿಂದ ಹತರಾದನಂತರ ಗಂಧರ್ವ ಸ್ತ್ರೀಯಲ್ಲಿ ರಾವಣನಿಂದ ಉತ್ಪನ್ನನಾದ ಯುದ್ಧದಲ್ಲಿ ಅತಿರಥನಾದ ಅತಿಕಾಯನೆಂಬ ರಾಕ್ಷಸನು ಬ್ರಹ್ಮದೇವರು ಕೊಟ್ಟಿದ್ದ ರಥವನ್ನು ಏರಿ ಕಾಲಾಗ್ನಿಯಂತೆ ಯುದ್ಧರಂಗದಲ್ಲಿ ಕಪಿಗಳನ್ನು ಮರ್ಧನಮಾಡುತ್ತಾ ಸಂಚರಿಸಿದನು.

ಅವತಾರಿಕೆ:—ಇಲ್ಲಿ ಅತಿಕಾಯನು ಯುದ್ಧಕ್ಕೆ ಬಂದನೆಂದು ಹೇಳುತ್ತಾರೆ. ಗ್ರಂಥಾಂತರದಲ್ಲಿ (" ಲಕ್ಷ್ಮಣೇನ ಕುಂಭಕರ್ಣೋಹತಃ ) ಎಂದು ಹೇಳಲ್ಪಟ್ಟಿದೆ. ಈ ವಾಕ್ಯ ವಿರೋಧ ಶಂಕಾ ಪರಿಹಾರ ಹೇಗೆಂದರೆ:—ಈ ಅತಿಕಾಯನಿಗೇನೇ ಕುಂಭಕರ್ಣನೆಂದು ಅವನ ಆಕಾರ ಲಕ್ಷಣದಿಂದ ಎರಡನೆಯ ಹೆಸರೆಂದು ಶ್ರೀಮದಾಚಾರ್ಯರು ನಿರೂಪಣಮಾಡುತ್ತಾರೆ.—

**ಶ್ಲೋಕ॥ ಬೃಹತ್ತನುಃ ಕುಂಭವದೇವ ಕರ್ಣಾ । ವಸ್ಯೇತತೋ ನಾಮುಚಕುಂಭಕರ್ಣಃ ॥ ಇತ್ಯಸ್ಯ ಸೋರ್ಕಾತ್ಮಜ ಪೂರ್ವಕಾ ಕಪೀ । ಜಿಗಾಯರಾಮಂ ಸಹಸಾಭ್ಯಧಾವತ್** ॥56॥

ಅರ್ಥ:-ಅಸ್ಯ-ಈ ಅತಿಕಾಯನಿಗೆ, ಬೃಹತ್-ದೊಡ್ಡದಾದ, ತನುಃ=ಶರೀರವೂ, ಮತ್ತು ಕುಂಭವದೇವ-ಗಡಿಗೆಗಳೋಪಾದಿಯಲ್ಲಿ, ಕರ್ಣಾ-ಕಿವಿಗಳೂ ಇವೆ. ಇತ್ಯ = ಈ ಕಾರಣದಿಂದ, ಅಸ್ಯ = ಈ ಅತಿಕಾಯನಿಗೆ, ಕುಂಭಕರ್ಣಇತಿಚ-ಕುಂಭಕರ್ಣನೆಂತಲೂ, ನಾಮ-ಹೆಸರು, ಸಃ=ಇಂತಃ ಅತಿಕಾಯನು, ಅರ್ಕಾತ್ಮಜ = ಸೂರ್ಯ ಪುತ್ರನಾದ ಸುಗ್ರೀವನೇ ಮೊದಲಾದಕಪೀ = ವಾನರರನ್ನು, ಜಿಗಾಯ-ಗೆದ್ದು, ಸಏವ = ತಾನೇ, ಸಹಸಾ=ಪರಾಕ್ರಮದಿಂದ, ರಾಮಂಪ್ರತಿ-ಶ್ರೀರಾಮರ ಎದುರಿಗೆ, ಅಭ್ಯಧಾವತ್=ಯುದ್ಧಕ್ಕಾಗಿ ಓಡಿಬಂದನು.

ತಾತ್ಪರ್ಯ.—ಈ ಅತಿಕಾಯನಿಗೆ ಕುಂಭಕರ್ಣನ ಹಾಗೆಯೇ ಬಹು ದೊಡ್ಡ ಶರೀರ ಮತ್ತು ಕುಂಭದೋಪಾದಿಯಲ್ಲಿ ಕಿವಿಗಳೂ ಇದ್ದದ್ದರಿಂದ ಇವನಿಗೆ ಕುಂಭಕರ್ಣನೆಂಬೂ ಹೆಸರು ಪ್ರಸಿದ್ಧವಾಗಿದೆ. ಆದ್ದರಿಂದಲೇ ಗ್ರಂಥಾಂತರದಲ್ಲಿ ( ಲಕ್ಷ್ಮಣೇನ ಕುಂಭಕರ್ಣೋ ಹತಃ ) ಎಂದು ಹೇಳಲ್ಪಟ್ಟಿದೆ ಇಂತಹ ಅತಿಕಾಯನು ಯುದ್ಧಕ್ಕೆ ಬಂದು ಸುಗ್ರೀವಾದಿ ಸಮಸ್ತ ಕಪಿಗಳನ್ನು ಗೆದ್ದು ಅತ್ಯಂತ ಸಾಹಸದಿಂದ ಶ್ರೀರಾಮರ ಬಳಿಗೆ ಹೊರಟನು.

**ಶ್ಲೋಕ ॥ ತಮಾಪತಂತಂ ಶರವರ್ಷಧಾರಂ । ಮಹಾಘನಾಭಂ ಸ್ತನಯಿತ್ನುಘೋಷಂ ॥ ನಿವಾರಯಾಮಾಸ ಯಥಾ ಸಮೀರಃ । ಸೌಮಿತ್ರಿರಾತ್ತೇಷ್ವಸನಃ ಶರೌಘೈಃ ।೫೭॥**

ಅರ್ಥ:—ಆತ್ತೇಷ್ವಸನಃ=ಆತ್ತ=ಹೊಂದಲ್ಪಟ್ಟ, ಇಷ್ವಸನಃ=ಧನುಸ್ಸುಳ್ಳ, ಸೌಮಿತ್ರಿಃ=ಸುಮಿತ್ರಾ ತನಯನಾದ ಲಕ್ಷ್ಮಣನು, ಆಪತಂತಂ= ರಾಮರಿಗೆ ಅಭಿಮುಖವಾಗಿ ಬರುತ್ತಿರುವ, ಮಹಾಘನಾಭಂ=ಮಹಾಮೇಘದಹಾಗೆ ಕಪ್ಪುಕಾಂತಿಯುಳ್ಳ, ಸ್ತನಯಿತ್ನುಘೋಷಂ=ಸ್ತನಯಿತ್ನು = ಮೇಘದ ಶಬ್ದದೋಪಾದಿಯಲ್ಲಿ ಕೂಗುತ್ತಲಿರುವ, ಶರವರ್ಷಧಾರಂ = ಬಾಣಗಳ ಮಳೆಗರೆಯುತ್ತಿರುವ, ತಂ = ಆ ಅತಿಕಾಯ ( ಕುಂಭಕರ್ಣ)ನನ್ನು, ಸಮೀರಃ=ಗಾಳಿಯು, ಯಥಾ=ಹೇಗೆ ಮಹಾ ಮೇಘವನ್ನು ನಿವಾರಣ ಮಾಡುತ್ತದೆಯೋ, ತಥಾ=ಅದೇರೀತಿಯಲ್ಲಿ, ಅಸೌ=ಈ ಲಕ್ಷ್ಮಣನು, ಶರೌಘೈಃ=ಬಾಣಗಳ ಸಮೂಹದಿಂದ, ನಿವಾರಯಾಮಾಸ=ತಡೆದನು.

ತಾತ್ಪರ್ಯ.–ಅತಿಕಾಯನು ( ಕುಂಭಕರ್ಣನು ) ಮಹಾಮೇಘದೋಪಾದಿಯಲ್ಲಿ ಕಪ್ಪಗಿರುವ ಸ್ಥೂಲಶರೀರದವನು ಮತ್ತು ಮಹಾ ಮೇಘದ ಘರ್ಜನೆ ( ಕೂಗು) ವುಳ್ಳವನು. ಇಂತಹ ಅತಿಕಾಯನು ಬಾಣಗಳಿಂದ ಸಂತತವಾಗಿ ಮಳೆಗರೆಯುತ್ತಾ ಸಾಹಸದಿಂದ ಶ್ರೀ ರಾಮರಿಗೆ ಅಭಿಮುಖವಾಗಿ ಓಡಿಬರುತ್ತಿರುವುದನ್ನು ನೋಡಿ ಸುಮಿತ್ರಾ ಪುತ್ರನಾದ ಲಕ್ಷ್ಮಣನು ಧನುಸ್ಸನ್ನು ತೆಗೆದುಕೊಂಡು ಬಾಣಗಳ ಸಮೂಹಗಳಿಂದ ಅವನನ್ನು ತಡೆದನು.

**ಶ್ಲೋಕ** || **ವವರ್ಷತು ಸ್ತಾವತಿಮಾತ್ರ ವೀರ್ಯೌ | ಶರಾನ್ ಸುರೇಶಾ ಶ ತುಲ್ಯ ವೇಗಾನ್ || ತಮೋಮಯಂ ಚಕ್ರತುರಂತರಿಕ್ಷಂ | ಶಿಕ್ಷಯಾ ಕ್ಷಿಪ್ರತರಾಸ್ತ್ರ ಬಾಣೈಃ** ||೫೮

ಅರ್ಥ:—ಅತಿಮಾತ್ರ=ಅತ್ಯಂತವಾದ, ವೀರ್ಯೌ=ಪರಾಕ್ರಮವುಳ್ಳ ತೌ=ಆ ಲಕ್ಷ್ಮಣ ಮತ್ತು ಅತಿಕಾಯರು, ಸುರೇಶ=ಇಂದ್ರನ, ಅಶನಿ = ಜ್ರಾಯುಧಕ್ಕೆ, ತುಲ್ಯ-ಸಮಾನವಾದ, ವೇಗಾನ್=ಹರಿತವುಳ್ಳ, ಶರಾನ್ = ಬಾಣಗಳನ್ನು, ವವರ್ಷತುಃ=ಮಳೆಗರೆದರು. (ಮತ್ತು) ಸುಶಿಕ್ಷಯಾ= ಭ್ಯಾಸ ಸಾಮರ್ಥ್ಯದಿಂದ, ಅಂತರಿಕ್ಷಂ=ಆಕಾಶವನ್ನು, ಕ್ಷಿಪ್ರತರ=ಅತ್ಯಂ ವೇಗಗಳಾದ, ಅಸ್ತ್ರ=ಅಭಿಮಂತ್ರಿತವಾದ ಬಾಣಗಳೂ, ಬಾಣೈಃ = ಬರಿ ಬಾಣಗಳು, ಇವುಗಳಿಂದ, ತಮೋಮಯಂ=ಕತ್ತಲೆಮಯವನ್ನಾಗಿ, ಚಕ್ರ ತುಃ=ಮಾಡಿದರು.

ತಾತ್ಪರ್ಯ.—ಅತಿಕಾಯನು ಮತ್ತು ಲಕ್ಷ್ಮಣನೂ ಯುದ್ಧಕ್ಕೆ ಪ್ರಾ ರಂಭಿಸಿ ಇಂದ್ರನ ವಜ್ರಾಯುಧಕ್ಕೆ ಸಮಾನವಾದ ವೇಗವುಳ್ಳ ಬಾಣಗಳನ್ನು ಮಳೆಗರೆದರು. ಮತ್ತು ಅಭ್ಯಾಸ ಸಾಮರ್ಥ್ಯದಿಂದ ಅತಿವೇಗವಾದ ಅಸ್ತ್ರ ಮತ್ತು ಬಾಣಗಳಿಂದ ಆಕಾಶವನ್ನು ಮುಚ್ಚಿ ಕತ್ತಲು ಮಯವನ್ನಾಗಿ ಮಾಡಿದರು.

**ಶ್ಲೋಕ** || **ಶರೈಃ ಶರಾನಸ್ಯ ನಿವಾರ್ಯ ವೀರಃ | ಸೌಮಿತ್ರಿರಸ್ತ್ರಾಣಿ ಮಹಾಸ್ತ್ರಜಾಲೈಃ || ಚಿಚ್ಛೇದ ಬಾಹೂ ಶಿರಸಾಸಹೈವ | ಚತುರ್ಭುಜೋ ಭೂ ತ್ಸಪುನ ರ್ದ್ವಿಶೀರ್ಷಃ** ||೯||

ಅರ್ಥ:—ವೀರಃ=ಪರಾಕ್ರಮಿಯಾದ, ಸೌಮಿತ್ರಿಃ=ಲಕ್ಷ್ಮಣನು, ಶರೈಃ-ಬಾಣಗಳಿಂದ, ಅಸ್ಯ=ಈ ಅತಿಕಾಯನ, ಶರಾನ್ - ಬಾಣಗಳನ್ನೂ, ಮಹಾಸ್ತ್ರಜಾಲೈಃ-ಮಹಾಸ್ತ್ರ ಸಮೂಹಗಳಿಂದ, ಅಸ್ತ್ರಾಣಿ-ಅವನ ಅಸ್ತ್ರ ಗಳನ್ನೂ, ನಿವಾರ್ಯ-ತಡೆದು, ತಸ್ಯ-ಆ (ಅತಿಕಾಯನ) ಶಿರಸಾಸಹ- ತಲೆಯಿಂದ ಸಹಿತವಾಗಿ, ಬಾಹೂ-ಭುಜದ್ವಯಗಳನ್ನೂ, ಚಿಚ್ಛೇದ=ಕತ್ತ ರಿಸಿದನು. ಪುನರೇವ-ಕತ್ತರಿಸಿದ ನಂತರ, ಸಃ-ಆ ಅತಿಕಾಯನು, ಚತು ರ್ಭುಜಃ=ನಾಲ್ಕು ಭುಜಗಳೂ, ದ್ವಿಶೀರ್ಷಃ=ಎರಡು ತಲೆಗಳೂ ಉಳ್ಳವನಾ ಗಿ, ಅಭೂತ್=ಆದನು.

ಮಹಾಪರಾಕ್ರಮಿಯಾದ ಲಕ್ಷ್ಮಣನು ತನ್ನ ಬಾಣಗಳಿಂದ ಮಹಾಕಾಯನು ಪ್ರಯೋಗಿಸಿದ ಬಾಣಗಳನ್ನೂ ತನ್ನ ಅಸ್ತ್ರಗಳಿಂದ ಅವನ ಅಸ್ತ್ರಗಳನ್ನೂ ನಿವಾರಣೆಮಾಡಿ ಅತಿಕಾಯನ ತಲೆಯನ್ನೂ ಭುಜಗಳನ್ನೂ ಕತ್ತರಿಸಿದನು. ತಕ್ಷಣವೇ ಅತಿಕಾಯನು ದ್ವಿಗುಣವಾಗಿ ಎರಡು ತಲೆಗಳೂ ನಾಲ್ಕು ಭುಜಗಳೂ ಉಳ್ಳವನಾದನು.

**ಶ್ಲೋಕ ॥ ಛಿನ್ನೇಷು ತೇಷು ದ್ವಿಗುಣಾಸ್ಯ ಬಾಹುಃ। ಪುನಃ ಪುನಃ ಸೋಽಥ ಬಭೂವ ವೀರಃ॥ ಉವಾಚ ಸೌಮಿತ್ರಿ ಮಥಾಂತರಾತ್ಮಾ ।ಸಮಸ್ತ ಲೋಕಸ್ಯ ಮರುದ್ವಿಷಣ್ಣಂ ॥೬೦॥**

ಅರ್ಥ.—ವೀರಃ=ಪರಾಕ್ರಮಶಾಲಿಯಾದ ಲಕ್ಷ್ಮಣನು, ತೇಷು= ಛೇದನಮಾಡಿದ ಶಿರೋಬಾಹುಗಳನ್ನೇ, ಪುನಃಪುನಃ = ತಿರಿಗಿತಿರಿಗಿ, ಛಿನ್ನೇಷುಸತ್ಸು = ಛೇದನಮಾಡುತ್ತಿರಲಾಗಿ, ಅಸ್ಯ = ಆ ಅತಿಕಾಯನ, ಬಾಹುಃ = ಭುಜವು ಮತ್ತು ಶಿರಸ್ಸೂ ಸಹ, ದ್ವಿಗುಣಾಃ = ಒಂದಕ್ಕೆ ಎರಡರಷ್ಟಾಗಿ, ಬಭೂವುಃ = ಆದವು. ಅಥ – ಅನಂತರ, ಸಮಸ್ತಲೋಕಸ್ಯ = ಸಮಸ್ತ ಪ್ರಪಂಚಕ್ಕೂ, ಅಂತರಾತ್ಮಾ = ಅಂತರ್ಯಾಮಿಯಾದ, ಅಸೌ=ಆ ಮರುತ್ = ವಾಯುದೇವರು, ವಿಷಣ್ಣಂ = ವಿಷಾದಯುಕ್ತರಾದ, ಸೌಮಿತ್ರಿಂಪ್ರತಿ = ಲಕ್ಷ್ಮಣನನ್ನು ಕುರಿತು, ಉವಾಚ = ಮಾತನಾಡಿದರು.

ತಾತ್ಪರ್ಯ.—ಮಹಾಪರಾಕ್ರಮಶಾಲಿಯಾದ ಲಕ್ಷ್ಮಣನು ಅತಿಕಾಯನ ಶಿರಃಸನ್ನೂ ಭುಜಗಳನ್ನೂ ಛೇದನಮಾಡಿದಹಾಗೆಲ್ಲಾ ಅವು ಪುನಃ ಒಂದಕ್ಕೆರಡಾಗಿ ಹುಟ್ಟುತ್ತಾ ಬಂದವು- ಹೀಗೆ ಅತಿಕಾಯನು ದ್ವಿಗುಣವಾಗಿ ಬಲಿಷ್ಟನಾಗುತ್ತಿರಲು ಲಕ್ಷ್ಮಣನು ನೋಡಿ ವಿಷಾದವನ್ನು ಹೊಂದಿದನು. ಇವನನ್ನು ನೋಡಿ ಸಮಸ್ತ ಪ್ರಪಂಚಕ್ಕೂ ಅಂತರ್ಯಾಮಿಯಾದ ವಾಯುದೇವರು (ವಕ್ಷ್ಯಮಾಣ ಪ್ರಕಾರ ಮಾತನಾಡಿದರು.)

**ಶ್ಲೋಕ ॥ ಬ್ರಹ್ಮಾಸ್ತ್ರತೋಽನ್ಯೇನ ನವಧ್ಯಏಷೋ । ವರಾದ್ವಿಧಾತುಃ ಸುಮುಖೇತ್ಯ ದೃಶಃ॥ ರಕ್ಷಃ ಸುತಾಸ್ಯಾ ಶ್ರವಣೀಯಮಿತ್ಥ । ಮುಕ್ತ್ವಾ ಸಮೀರೋಽರುಹದಂತರಿಕ್ಷಂ ॥೬೧॥**

ಅರ್ಥ:—ಅದೃಶ್ಯಃ-ದೃಷ್ಟಿಗೆ ಗೋಚರವಿಲ್ಲದೆ ಇರುವ, ಸಮೀರಃ-ವಾಯುದೇವರು, ಅದೃಶ್ಯಃ=ಲಕ್ಷ್ಮಣನ ವಿನಹಾ ಇತರರಿಗೆ ಗೋಚರವಾಗದೇಲೇ, ತಂ-ಲಕ್ಷ್ಮಣನನ್ನು ಕುರಿತು, ಹೇ ಸಮುಖ - ಸುಂದರ ಮುಖ ಉಳ್ಳ ಲಕ್ಷ್ಮಣನೇ, ಏಷಃ-ಈ ಅತಿಕಾಯನು, ವಿಧಾತುಃ=ಬ್ರಹ್ಮದೇವರ ವರಾತ್=ವರ ಪ್ರಸಾದದಿಂದ, ಬ್ರಹ್ಮಾಸ್ತ್ರತಃ=ಬ್ರಹ್ಮಾಸ್ತ್ರ ವಿನಃ, ಅನ್ಯೇನ=ಬೇರೆ ಯಾವ ಅಸ್ತ್ರದಿಂದಲೂ, ನವಧ್ಯಃ-ಹತನಾಗುವುದಿಲ್ಲ, ಇತ್ಥಂ-ಈ ಪ್ರಕಾರವಾಗಿ, ರಕ್ಷಃಸುತಸ್ಯ-ರಾಕ್ಷಸನ ಪುತ್ರನಾದ ಅತಿಕಾಯನಿಗೆ, ಅಶ್ರವಣೀಯಃ (ಯಥಾ ಭವತಿ ತಥಾ) = ಕೇಳಿಸದ ಹಾಗೆ, ಉಕ್ತ್ವಾ=ಹೇಳಿ, ಅಂತರಿಕ್ಷಂ=ಆಕಾಶವನ್ನು ಕುರಿತು, ರುಹತ್=ಏರಿಹೋದರು.

ತಾತ್ಪರ್ಯ.—ಲಕ್ಷ್ಮಣನು ಅತಿಕಾಯನ ಬಾಹು ಶಿರಸ್ಸುಗಳನ್ನು ಕತ್ತರಿಸಿದಸಾಗೆಲ್ಲ ಅವು ದ್ವಿಗುಣವಾಗಿ ಉದ್ಭವವಾಗುತ್ತಿರುವದನ್ನು ನೋಡಿ ಮುಂದೋರದೆ ವಿಷಾದ ಪಡುತ್ತಿರುವಲ್ಲಿ ವಾಯುದೇವರು ಲಕ್ಷ್ಮಣನ ವಿನಹಾ ಇತರರ ದೃಷ್ಟಿಗೆ ಕಾಣಿಸದೆ ಲಕ್ಷ್ಮಣನನ್ನು ಕುರಿತು ಈ ಅತಿಕಾಯನು ಬ್ರಹ್ಮದೇವರ ವರಪ್ರಸಾದದಿಂದ ಬ್ರಹ್ಮಾಸ್ತ್ರವಿನಹಾ ಇನ್ಯಾವ ಅಸ್ತ್ರಶಸ್ತ್ರಗಳಿಂದಲೂ ವಧ್ಯನಲ್ಲವು ಎಂದು ಹೇಳಿ ಅಂತರಿಕ್ಷದಲ್ಲಿ ಹೋದರು.

ಶ್ಲೋಕ || ಅಥಾನುಜೋ ದೇವತಮಸ್ಯ ಸೋಽಸ್ತ್ರಂ | ಬ್ರಾಹ್ಮಂ ತನೂಜೇ ದಶಕಂಧರಸ್ಯ || ಮುಮೋಚದಗ್ಧಃ ಸರಥಾಶ್ವ ಸೂತ ಸ್ತೇನಾತಿಕಾಯಃ ಪ್ರವರೋ ಸ್ತ್ರವಿತ್ಸು ||೬೨||

ಅರ್ಥ:—ಅಥ-ವಾಯುದೇವರು ಈ ರೀತಿಯಾಗಿ ಹೇಳಿದನಂತರ, ದೇವತಮಸ್ಯ = ದೇವೋತ್ತಮನಾದ ಶ್ರೀರಾಮನ, ಅನುಜಃ=ತಮ್ಮನಾದ, ಸಃ=ಲಕ್ಷ್ಮಣನು, ದಶಕಂಧರಸ್ಯ=ದಶಕಂಠನಾದ ರಾವಣನ, ತನೂಜೇ=ಪುತ್ರನಾದ ಅತಿಕಾಯನಲ್ಲಿ, ಬ್ರಾಹ್ಮಂ=ಬ್ರಹ್ಮದೇವರ ಸಂಬಂಧವಾದ, ಅಸ್ತ್ರಂ=ಅಸ್ತ್ರವನ್ನು, ಮುಮೋಚ=ಪ್ರಯೋಗಮಾಡಿದನು. ತೇನ-ಆ ಬ್ರಹ್ಮಾಸ್ತ್ರದಿಂದ, ಅಸ್ತ್ರವಿತ್ಸು=ಅಸ್ತ್ರಶಾಸ್ತ್ರವನ್ನು ಬಲ್ಲವರಲ್ಲಿ, ಪ್ರವರಃ=ಶ್ರೇಷ್ಠನಾದ, ಅತಿಕಾಯಃ=ಅತಿಕಾಯನು, ಸ ರಥಾಶ್ವಸೂತಃ-ರಥ, ಅಶ್ವ, ಸಾರಥಿಯಿಂದ ಸಹಿತನಾಗಿ, ದಗ್ಧಶ್ಚ=ಸುಟ್ಟುಹೋದನು.

ತಾತ್ಪರ್ಯ:— ವಾಯುದೇವರು ಯಾರ ಕಣ್ಣಿಗೂ ಕಾಣಿಸದೆ ಅತಿಕಾಯನ ಕಿವಿಗೆ ಬೀಳದಹಾಗೆ ಲಕ್ಷ್ಮಣನಿಗೆ ಹೇಳಿದ ಪ್ರಕಾರ ಲಕ್ಷ್ಮಣನು ಅತಿಕಾಯನ ಮೇಲೆ ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿದನು. ಒಡನೆಯೇ ಅಸ್ತ್ರಶಾಸ್ತ್ರದಲ್ಲಿ ನಿಪುಣನಾದ ಅತಿಕಾಯನು ರಥಾಶ್ವಸಾರಥಿಯಿಂದ ಸಹಿತನಾಗಿ ಸುಟ್ಟುಹೋದನು.

**ಶ್ಲೋಕ ॥ ಹತೇಷು ಪುತ್ರೇಷು ಸರಾಕ್ಷಸೇಶಃ । ಸ್ವಯಂಪ್ರಯಾಣಂ ಸಮರಾರ್ಥಮೈಚ್ಛತ್ । ಸಜ್ಜೀಭವತ್ಯೇವ ನಿಶಾಚರೇಶೇ । ಖರಾತ್ಮಜಃ ಪ್ರಾಹ ಧನುರ್ಧರೋತ್ತಮಃ ॥೬೩॥**

ಅರ್ಥ:— ರಾಕ್ಷಸೇಶಃ= ರಾಕ್ಷಸರಿಗೆ ಅಧಿಪತಿಯಾದ, ಸಃ= ಆ ರಾವಣನು, ಪುತ್ರೇಷು= ತನ್ನ ಮಕ್ಕಳು, ಹತೇಷುಸತ್ಸು= ಹತರಾಗುತ್ತಿರಲಾಗಿ, ಸ್ವಯಮೇವ- ತಾನೇವೇ, ಸಮರಾರ್ಥಂ- ಯುದ್ಧಕ್ಕೆ, ಪ್ರಯಾಣಂ = ಹೊರಡಲು, ಐಚ್ಛತ್= ಮನಸ್ಸು ಮಾಡಿದನು. ನಿಶಾಚರೇಶೇ = ರಾಕ್ಷಸೇಶ್ವರನಾದ ರಾವಣನು, ಸಜ್ಜೀಭವತಿಸತಿ= ಸಿದ್ಧನಾಗುತ್ತಿರುವಲ್ಲಿ, ಖರಾತ್ಮಜಃ= ಖರನೆಂಬ ರಾಕ್ಷಸನ ಪುತ್ರನಾದ, ಧನುರ್ಧರೋತ್ತಮಃ= ಧನುರ್ಧಾರಣ ಮಾಡಿದವರಲ್ಲಿ ಶ್ರೇಷ್ಟನಾದ " ಮಕರಾಕ್ಷ " ನೆಂಬ ರಾಕ್ಷಸನು, ತಂ= ರಾವಣನನ್ನು ಕುರಿತು, ಪ್ರಾಹ- ಹೇಳಿದನು. ( ಹೇಳುತ್ತಾನೆ)

ತಾತ್ಪರ್ಯ:— ಅತಿಕಾಯನು ಲಕ್ಷ್ಮಣನ ಬ್ರಹ್ಮಾಸ್ತ್ರದಿಂದ ಹತನಾದಮೇಲೆ ತನ್ನ ಮಕ್ಕಳೆಲ್ಲರೂ ನಾಶವಾದದ್ದನ್ನು ರಾವಣನು ನೋಡಿ ತಾನೇ ಯುದ್ಧ ಮಾಡಲಪೇಕ್ಷಿಸಿ, ಪ್ರಯಾಣಸಿದ್ಧನಾಗುತ್ತಿರುವಷ್ಟರಲ್ಲಿ ಖರನಾಮಕ ರಾಕ್ಷಸನ ಪುತ್ರನಾದ ಧನುರ್ಧಾರಿಗಳಲ್ಲಿ ಶ್ರೇಷ್ಟನಾದ ಮಕರಾಕ್ಷನೆಂಬ ರಾಕ್ಷಸನು ರಾಕ್ಷಸೇಶ್ವರನಾದ ರಾವಣನನ್ನು ಕುರಿತು ಹೇಳುತ್ತಾನೆ.

**ಶ್ಲೋಕ॥ ನಿಯುಂಕ್ಷ್ವ ಮಾಂ ಮೇ ಪಿತುರಂತಕಸ್ಯ । ವಧಾಯ ರಾಜನ್ ಸಹ ಲಕ್ಷ್ಮಣಂತಂ ॥ ಕಪಿಪ್ರವೀರಾಂಶ್ಚ ನಿಹತ್ಯ ಸರ್ವಾನ್ । ಪ್ರತೋಷಯೇ ತ್ವಾ ಮಹಮದ್ಯ ಸುಷ್ಠು ॥೬೪॥**

ಅರ್ಥ:— ಸಃ- ಮಕರಾಕ್ಷನು, ತಂ= ರಾವಣನನ್ನು ಕುರಿತು, ಹೇ ರಾಜನ್- ಎಲೋ ಪ್ರಭುವೇ, ಮೇ= ನನ್ನ, ಪಿತುಃ= ತಂದೆಯಾದ ಖರನಿಗೆ,

ಅಂತಕಸ್ಯ-ಮೃತ್ಯುವಾದ ಶ್ರೀರಾಮನ, ವಧಾಯ=ಕೊಲ್ಲಲು, ಮಾಂ=ನನ್ನನ್ನು, ನಿಯುಂಕ್ಷ್ವ=ನೇಮಿಸು, ಅಹಂ=ನಾನು, ಸಲಕ್ಷ್ಮಣಂ=ಲಕ್ಷ್ಮಣನಿಂದ ಸಹಿತನಾದ, ತಂ-ಆ ರಾಮನನ್ನೂ, ಸರ್ವಾನ್=ಸಮಸ್ತರಾದ, ಕಪಿವರಾಂಶ್ಚ-ವಾನರ ಶ್ರೇಷ್ಟರನ್ನೂ ಸಹ, ನಿಹತ್ಯ=ಕೊಂದು, ತ್ವಾಂ=ನಿನ್ನನ್ನು, ಅದ್ಯ-ಈಗಲೇ, ಸುಷ್ಟು=ಚೆನ್ನಾಗಿ, ಪ್ರತೋಷಯೇ = ಸಂತೋಷಪಡಿಸುತ್ತೇನೆ.

ತಾತ್ಪರ್ಯ:— ರಾವಣನು ತಾನೇ ಯುದ್ಧಕ್ಕಾಗಿ ಹೊರಡಲಿಚ್ಛಿಸಿ ಪ್ರಯಾಣ ಸನ್ನದ್ಧನಾಗಿರುತ್ತಿರಲು ಖರನ ಪುತ್ರನಾದ ಮಕರಾಕ್ಷನು ಅವನನ್ನು ಕುರಿತು, ಹೇ ಪ್ರಭುವೇ, ನನ್ನ ತಂದೆಗೆ ಮೃತ್ಯುವಾದ ಲಕ್ಷ್ಮಣನಿಂದ ಸಹಿತನಾದ ರಾಮನನ್ನು ಯುದ್ಧಮಾಡಿ ಸಂಹರಿಸುವುದಕ್ಕೆ ನನಗೆ ಅಪ್ಪಣೆಕೊಡು, ನಾನು ಯುದ್ಧಮಾಡಿ ಲಕ್ಷ್ಮಣನಿಂದ ಸಹಿತನಾದ ರಾಮನನ್ನೂ ಮತ್ತು ಸಮಸ್ತರಾದ ಕಪಿವೀರರನ್ನೂ ಕೊಂದು ಈಗಲೇ ನಿನಗೆ ಸಂತೋಷವನ್ನುಂಟು ಮಾಡುತ್ತೇನೆಂದು ಹೇಳಿದನು.

ಶ್ಲೋಕ || ಇತೀರಿತೇತೇನ ನಿಯೋಜಿತಃ ಸಃ | ಜಗಾಮವೀರೋ ಮಕರಾಕ್ಷನಾಮಾ ॥ ವಿಧೂಯ ಸರ್ವಾಂಶ್ಚ ಹರಿಪ್ರವೀರಾನ್ | ಸಹಾಂಗದಾನ್ ಸೂರ್ಯಸುತೇನಸಾಕಂ ||೬೫||

ಅಚಿಂತಯನ್ ಲಕ್ಷ್ಮಣಬಾಣಸಂಘಾ | ನವಜ್ಞಯಾ ರಾಮ ಮಥಾಹ್ವಯದ್ರಣೇ ||೬೬||

ಅರ್ಥ:— ಇತಿ=ಈ ರೀತಿಯಾಗಿ, ತೇನ-ಆ ಮಕರಾಕ್ಷನಿಂದ, ಈರಿತೇಸತಿ=ಹೇಳಲ್ಪಡುತ್ತಿರಲಾಗಿ, ಸಃ=ಆ ಮಕರಾಕ್ಷಸನು, ( ರಾವಣನಿಂದ) ನಿಯೋಜಿತಃ=ನಿಯಮಿಸಲ್ಪಟ್ಟನು. ವೀರಃ=ಪರಾಕ್ರಮಶಾಲಿಯಾದ, ಮಕರಾಕ್ಷನಾಮಾ=ಮಕರಾಕ್ಷನು, ಜಗಾಮ=ಯುದ್ಧಕ್ಕಾಗಿ ಹೊರಟನು, (ಅವನು) ಸಹಾಂಗದಾನ್=ಅಂಗದನಿಂದ ಸಹಿತರಾದ, ಸೂರ್ಯಸುತೇನ-ಸುಗ್ರೀವನಿಂದ, ಸಾಕಂ=ಕೂಡಿದ, ಹರಿಪ್ರವೀರಾನ್ = ವಾನರ ಶ್ರೇಷ್ಟರಾದ, ಸರ್ವಾನ್ಚ=ಸಮಸ್ತರನ್ನೂ, ವಿಧೂಯ=ಓಡಿಸಿ, ಅಥ=ಅನಂತರ, ಲಕ್ಷ್ಮಣಬಾಣ ಸಂಘಾನ್ - ಲಕ್ಷ್ಮಣನ ಬಾಣಸಮೂಹವನ್ನು, ಅವಜ್ಞಯಾ=ಗ

ರ್ವದಿಂದ, ಅಚಿಂತಯನ್-ಲಕ್ಷೀಕರಿಸದೇ, ರಾಮಂ - ಶ್ರೀರಾಮನನ್ನು, ರಣೇ=ಯುದ್ಧಕ್ಕಾಗಿ, ಆಹ್ವಯತ್=ಕರೆದನು.

ತಾತ್ಪರ್ಯ:—ಈ ಪ್ರಕಾರವಾಗಿ ಮಕರಾಕ್ಷನು ಹೇಳಿದನಂತರ ರಾವಣನು ಇವನನ್ನು ರಾಮರ ಸಂಗಡ ಯುದ್ಧಕ್ಕಾಗಿ ಕಳುಹಿಸಿಕೊಟ್ಟನು-ಈ ವೀರನು ಅಂಗದನಿಂದ ಸಹಿತರಾದ ಸಮಸ್ತ ಕಪಿವೀರರನ್ನೂ ಸುಗ್ರೀವ ಸಮೇತವಾಗಿ ಓಡಿಸಿ, ಲಕ್ಷ್ಮಣನು ಬಾಣ ಸಮೂಹಗಳಿಂದ ತನ್ನನ್ನು ನಿವಾರಣೆ ಮಾಡುತ್ತಾ ಇದ್ದಾಗ್ಯೂ ಗರ್ವದಿಂದ ಆ ಬಾಣಗಳನ್ನು ಲಕ್ಷೀಕರಿಸದೆ ಶ್ರೀರಾಮರನ್ನು ಯುದ್ಧಕ್ಕಾಗಿ ಕರೆದನು.

**ಶ್ಲೋಕ॥ ಉವಾಚರಾಮಂ ರಜನೀಚರೋಸೌ । ಹತೋಜನಸ್ಥಾನಗತಃ ಪಿತಾತ್ವಯಾ । ಕೇನಾಪ್ಯುಪಾಯೇನ ಧನುರ್ಧರಾಣಾಂ । ವರಃ ಫಲಂ ತಸ್ಯ ದದಾಮಿತೇದ್ಯ ॥ ಇತಿ ಬ್ರುವಾಣಃ ಸಸರೋಜಯೋನೇರ್ವರಾದವಧ್ಯೋ ಮುಚದಸ್ತ್ರಸಂಘಾನ್ ॥೬೭॥**

ಅರ್ಥ:—ಅಸೌ ರಜನೀಚರಃ=ಈ ಮಕರಾಕ್ಷನು, ರಾಮಂಪ್ರತಿ=ರಾಮನನ್ನು ಕುರಿತು, ಧನುರ್ಧರಾಣಾಂ-ಧನುರ್ಧಾರಿಗಳಲ್ಲಿ, ವರಃ=ಶ್ರೇಷ್ಟನಾದ, ಜನಸ್ಥಾನಗತಃ=ದಂಡಕಾರಣ್ಯದಲ್ಲಿದ್ದ, (ಮೇ) ಪಿತಾ-ನನ್ನ ತಂದೆಯಾದ ಖರನು, ತ್ವಯಾ=ನಿನ್ನಿಂದ, ಕೇನಾಪ್ಯುಪಾಯೇನ=ಮಾಯಾಮಂತ್ರಾದಿ ಯಾವ ಉಪಾಯದಿಂದಲೋ, ಹತಃ=ಹತನಾದನು. (ತೇ) ನಿನಗೆ, ತಸ್ಯ=ಅದರ, ಫಲಂ=ಫಲವನ್ನು, ಅದ್ಯ=ಈಗ, ದದಾಮಿ=ಕೊಡುತ್ತೇನೆಂದು, ಉವಾಚ=ಹೇಳಿದನು. ಸರೋಜಯೋನೇಃ-ಬ್ರಹ್ಮದೇವರ, ವರಾತ್=ವರದಿಂದ, ಅವಧ್ಯಃ=ವಧಾರಹಿತನಾದ, ಸಃ=ಆ ಮಕರಾಕ್ಷನು, ಇತಿ-ಈ ಪ್ರಕಾರವಾಗಿ, ಬ್ರುವಾಣಃಸನ್-ಹೇಳಿದವನಾಗಿ, ಅಸ್ತ್ರಸಂಘಾನ್-ಅಸ್ತ್ರಗಳ ಸಮೂಹವನ್ನು, ಅಮುಚತ್ - ಶ್ರೀರಾಮರಮೇಲೆ ಪ್ರಯೋಗಮಾಡಿದನು.

ತಾತ್ಪರ್ಯ:—ಆ ಮಕರಾಕ್ಷನು ಶ್ರೀರಾಮನನ್ನು ಯುದ್ಧಕ್ಕೆ ಆಹ್ವಾನಮಾಡಿ ಅವನನ್ನು ಕುರಿತು ಹೇಳುತ್ತಾನೆ. ಹೇಗೆಂದರೆ:—ಧನುರ್ಧಾರಿಗಳಲ್ಲಿ ಶ್ರೇಷ್ಟನಾದ ನನ್ನ ತಂದೆಯಾದ ಖರನು ದಂಡಕಾರಣ್ಯದಲ್ಲಿ ನಿನ್ನಿಂದ

ಯಾವುದೋ ಮಾಯಾಮಂತ್ರಗಳಿಂದ ಹತನಾದನು. ಅದರ ಫಲವನ್ನು ಈಗ ನಿನಗೆ ಕೊಡುತ್ತೇನೆಂದು ಹೇಳಿ ಬ್ರಹ್ಮದೇವರ ವರಬಲದಿಂದ ಅವಧ್ಯನಾದ ಮಕರಾಕ್ಷಸನು ಶ್ರೀರಾಮನ ಮೇಲೆ ಅಸ್ತ್ರಗಳ ಸಮೂಹಗಳನ್ನೇ ಪ್ರಯೋಗಮಾಡಿದನು.

**ಶ್ಲೋಕ ॥ ಪ್ರಹಸ್ಯ ರಾಮೋಽಸ್ಯ ನಿವಾರ್ಯ ಚಾಸ್ತ್ರೈ । ರಸ್ತ್ರಾಣ್ಯಮೇಯೋಽಶನಿಸನ್ನಿಭೇನ ॥ ಶಿರಃ ಶರೇಣೋತ್ತಮ ಕುಂಡಲೋಜ್ಜ್ವಲಂ । ಖರಾತ್ಮಜಸ್ಯಾಥ ಸಮುನ್ಮಮಾಥ ॥೬೮॥**

ಅರ್ಥ.—ಅಮೇಯಃ=ಸರ್ವ ಪ್ರಕಾರದಿಂದಲೂ ತಿಳಿಯಲಸಾಧ್ಯನಾದ, ರಾಮಃ-ಶ್ರೀರಾಮನು, ಪ್ರಹಸ್ಯ=ನಕ್ಕು, ಅಸ್ಯ=ಈ ಮಕರಾಕ್ಷನ, ಅಸ್ತ್ರಾಣಿ=ಅಸ್ತ್ರಗಳನ್ನು, ಅಸ್ತ್ರೈಶ್ಚ-ತನ್ನಸ್ತ್ರಗಳಿಂದಲೇ, ನಿವಾರ್ಯ=ನಾಶಮಾಡಿ, ಅಥ=ಅನಂತರ, ಖರಾತ್ಮಜಸ್ಯ=ಖರನ ಪುತ್ರನಾದ ಮಕರಾಕ್ಷನ, ಉತ್ತಮ=ಶ್ರೇಷ್ಟವಾದ, ಕುಂಡಲ=ಕರ್ಣಾಭರಣದಿಂದ, ಉಜ್ವಲಂ=ಪ್ರಕಾಶಮಾನವಾದ, ಶಿರಃ=ಶಿರಸ್ಸನ್ನು, ಅಶಿನಿಸನ್ನಿಭೇನ=ವಜ್ರಾಯುಧಕ್ಕೆ ಸಮಾನವಾದ, ಶರೇಣ-ಬಾಣದಿಂದ, ಸಮುನ್ಮಮಾಥ=ಭೇದಿಸಿದನು.

ತಾತ್ಪರ್ಯ:—ಅಪರಿಮಿತ ಶಕ್ತಿಯುಳ್ಳ ಶ್ರೀರಾಮನು ಈ ಮಕರಾಕ್ಷನ ಮಾತನ್ನು ಕೇಳಿ ನಕ್ಕು ಅವನಿಂದ ಪ್ರಯೋಗಿಸಲ್ಪಟ್ಟ ಸಮಸ್ತವಾದ ಅಸ್ತ್ರ ಸಮೂಹಗಳನ್ನೂ ತನ್ನ ಅಸ್ತ್ರಗಳಿಂದ ನಾಶಮಾಡಿ ನಂತರ ಇಂದ್ರನ ವಜ್ರಾಯುಧಕ್ಕೆ ಸಮಾನವಾದ ಬಾಣದಿಂದ ಈ ಮಕರಾಕ್ಷನ ಉತ್ತಮವಾದ ಕರ್ಣಾಭರಣಗಳಿಂದ ಪ್ರಜ್ವಲಿಸುತ್ತಿರುವ ಶಿರಸ್ಸನ್ನು ಭೇದನಮಾಡಿದನು.

ಶ್ಲೋಕ॥ ವಿದುದ್ರುವುಸ್ತಸ್ಯತು ಯೇಽನುಯಾಯಿನಃ । ಕಪಿಪ್ರವೀರೈರ್ನಿಹತಾವಶೇಷಿತಾಃ । ಯಥೈವ ಧೂಮ್ರಾಕ್ಷಮುಖೇಷು ಪೂರ್ವಂ । ಹತೇಷು ಪೃಥ್ವೀರುಹಶೈಲಧಾರಿಭಿಃ ॥೬೯॥

ಅರ್ಥ:—ಪೃಥ್ವೀರುಹ ಶೈಲಧಾರಿಭಿಃ=ಪೃಥ್ವೀರುಹ – ವೃಕ್ಷಗಳು, ಇವುಗಳನ್ನು, ಆಯುಧವಾಗಿ, ಧಾರಿಭಿಃ-ಧರಿಸಿದ್ದ, ಕಪಿವರ್ಯೈಃ = ವಾನರ

ಶ್ರೇಷ್ಠರಿಂದ, ನಿಹತಾವಶೇಷಿತಾಃ = ನಿಹತ = ಕೊಲ್ಲಲ್ಪಟ್ಟು, ಅವಶೇಷಿತಾಃ = ಬಾಕಿ ಉಳಿದ, ತಸ್ಯ=ಆ ಮಕರಾಕ್ಷನನ್ನು, ಯೇ ಅನುಯಾಯಿನಸ್ತು=ಅನುಸರಿಸಿ ಯುದ್ಧಕ್ಕೆ ಬಂದಿದ್ದ ರಾಕ್ಷಸರು, ಪೂರ್ವಂ-ಪೂರ್ವದಲ್ಲಿ, ಧೂಮ್ರಾಕ್ಷಮುಖೇಷು = ಧೂಮ್ರಾಕ್ಷನೇ ಮೊದಲಾದವರು, ಹತೇಷು ಸತ್ಸು=ಹತರಾಗುತ್ತಿರಲಾಗಿ, ಯಥಾ-ಯಾವರೀತಿಯಾಗಿ, ವಿದುದ್ರುಹುಃ= ಓಡಿಹೋದರೋ, ತಥೈವ = ಅದೇ ರೀತಿಯಾಗಿ, ವಿದುದ್ರುವುಃ – ಓಡಿಹೋದರು.

ತಾತ್ಪರ್ಯ:—ಮಕರಾಕ್ಷನು ಹತನಾದನಂತರ ಗಿಡ ಪರ್ವತಗಳೇ ಆಯುಧಗಳನ್ನಾಗಿ ಮಾಡಿಕೊಂಡು ಯುದ್ಧಮಾಡುತ್ತಿದ್ದ ಕಪಿಶ್ರೇಷ್ಠರು ಮಕರಾಕ್ಷನನ್ನು ಅನುಸರಿಸಿ ಬಂದಿದ್ದ ರಾಕ್ಷಸರನ್ನು ನಾಶಮಾಡಿದರು. ಮಿಕ್ಕ ರಾಕ್ಷಸರೆಲ್ಲರೂ ಧೂಮ್ರಾಕ್ಷನ ವಧಾನಂತರ ಓಡಿಹೋದ ರಾಕ್ಷಸರಹಾಗೆ ತಾವೂ ಓಡಿಹೋದರು.

ಶ್ಲೋ॥ ತತಃ ಸಸಜ್ಜೀಕೃತ ಆತ್ತಧನ್ವಾ ರಥಂ ಸಮಾಸ್ಥಾಯ ನಿಶಾಚರೇಶ್ವರಃ॥ ವೃತಃ ಸಹಸ್ರಾಯುತ ಕೋಟ್ಯನೀಕಪೈಃ । ನಿಶಾಚರೈ ರಾಶುಯಯೌ ರಣಾಯ ॥೭೦॥

ಅರ್ಥ:—ತತಃ=ಅನಂತರದಲ್ಲಿ, ಸಜ್ಜೀಕೃತಃ – ಸಿದ್ಧಮಾಡಲ್ಪಟ್ಟ ಯುದ್ಧ ಸಾಮಗ್ರಿಯುಳ್ಳ, ಆತ್ತಧನ್ವಾ=ಆತ್ತಾ=ಹೊಂದಲ್ಪಟ್ಟ ಧನ್ವಾ=ಧನುಃಸುಳ್ಳ, ಸಃ–ಆ, ನಿಶಾಚರೇಶ್ವರಃ=ರಾಕ್ಷಸಾಧಿಪತಿಯಾದ ರಾವಣನು, ಸಹಸ್ರಾಯುತ=ಒಂದು ಸಹಸ್ರವಾದ ಹತ್ತು ಸಾವಿರ ಸೈನಿಕರುಳ್ಳ, ಕೋಟ್ಯನೀಕಪೈಃ = ಒಂದು ಕೋಟಿ ಸೇನಾಪತಿಗಳುಳ್ಳ, ನಿಶಾಚರೈಃ – ರಾಕ್ಷಸರಿಂದ, ವೃತಃ=ಕೂಡಿಕೊಂಡವನಾಗಿ, ರಥಂ-ರಥದಲ್ಲಿ ಕುಳಿತುಕೊಂಡು, ಆಶು – ಜಾಗ್ರತೆಯಾಗಿ, ರಣಾಯ = ಯುದ್ಧಕ್ಕೋಸ್ಕರ, ಯಯೌ = ಹೊರಟನು.

ತಾತ್ಪರ್ಯ.—ಮಕರಾಕ್ಷನು ಹತನಾದನಂತರ ರಾಕ್ಷಸೇಶ್ವರನಾದ ರಾವಣನು ಸಮಸ್ತವಾದ ಯುದ್ಧ ಸಾಮಗ್ರಿಗಳನ್ನೂ ಸಿದ್ಧಪಡಿಸಿಕೊಂಡು ಧನುಃಸ್ಸನ್ನು ಧಾರಣಮಾಡಿ ಸಹಸ್ರ ಸಂಖ್ಯೆಯಾದ ಹತ್ತು ಸಹಸ್ರ ರಾಕ್ಷಸರುಳ್ಳ ಒಂದುಕೋಟಿ ಸೇನಾಪತಿಗಳುಳ್ಳ ರಾಕ್ಷಸರಿಂದ ಯುಕ್ತನಾಗಿ

ರಥದಲ್ಲಿ ಕುಳಿತುಕೊಂಡು ಯುದ್ಧಕ್ಕೋಸ್ಕರ ಬಹು ಜಾಗ್ರತೆಯಾಗಿ ಹೊರಟನೆಂದು ತಾತ್ಪರ್ಯವು. ಇಲ್ಲಿ ರಾಕ್ಷಸರ ಸಂಖ್ಯೆಯ ವಿವರಃ—೧೦೦೦೦×೧೦೦೦=೧೦೦೦೦೦೦೦ ಒಂದು ಕೋಟಿ ರಾಕ್ಷಸರಿಗೆ ಒಬ್ಬ ಸೇನಾಧಿಪ. ಇಂಥಾ ಒಂದುಕೋಟಿ ಸೇನಾಧಿಪರುಳ್ಳ ರಾಕ್ಷಸರಿಂದ ಸಹಿತನಾಗಿ ಯುದ್ಧಕ್ಕೆ ಹೊರಟನೆಂಬುದಾಗಿ ಹೇಳಲ್ಪಟ್ಟಿದೆ.

**ಶ್ಲೋಕ॥ ಬಲೈಸ್ತು ತಸ್ಯಾಥ ಬಲಂ ಕಪೀನಾಂ । ನೈಕಪ್ರಕಾರಾಯುಧಪೂಗಭಗ್ನಂ॥ ದಿಶಃಪ್ರದುದ್ರಾವಹರೀಂದ್ರಮುಖ್ಯಾಃ । ಸಮರ್ದಯನ್ನಾಶುನಿಶಾಚರಾಂಸ್ತದಾ ॥೭೧॥**

ಅರ್ಥ:—ಅಥ=ರಾವಣನು ಯುದ್ಧಕ್ಕೆ ಹೊರಟನಂತರ, ತಸ್ಯ=ಆ ರಾವಣನ, ಬಲೈಃ = ರಾಕ್ಷಸರ ಸೇನೆಯಿಂದ, ನೈಕಪ್ರಕಾರಾಯುಧಪೂಗಭಗ್ನಂ–ನೈಕಪ್ರಕಾರ=ಒಂದೇ ವಿಧವಲ್ಲದ ( ಅನೇಕ ಪ್ರಕಾರವಾದ ) ಆಯುಧ=ಆಯುಧಗಳಿಂದ, ಭಗ್ನಂ = ನಷ್ಟವಾದ, ಕಪೀನಾಂ=ವಾನರರ ಬಲಂ=ಸೇನೆಯು, ದಿಶಃ – ದಿಕ್ಕು ದಿಕ್ಕಾಗಿ, ಪ್ರದುದ್ರಾವ = ಓಡಿಸಲ್ಪಟ್ಟಿತು. ತದಾ–ಆಗ, ಹರೀಂದ್ರಮುಖ್ಯಾಃ = ವಾನರ ಶ್ರೇಷ್ಠರು, ಆಶು=ಜಾಗ್ರತೆಯಾಗಿ, ನಿಶಾಚರಾನ್=ರಾಕ್ಷಸರನ್ನು, ಸಮರ್ದಯನ್ – ಮರ್ದನ ಮಾಡಿದರು.

ತಾತ್ಪರ್ಯ:—ರಾವಣನು ರಾಮರೊಡನೆ ಯುದ್ಧಕ್ಕೆ ಹೊರಟನಂತರ ಆ ರಾವಣನ ಸೈನ್ಯವು ವಾನರ ಸೈನ್ಯವನ್ನು ಅನೇಕ ಪ್ರಕಾರವಾದ ಆಯುಧಗಳನ್ನೂ ವ್ಯರ್ಥವುಳ್ಳವರನ್ನಾಗಿಮಾಡಿ ದಿಕ್ಕುದಿಕ್ಕಿಗೂ ಓಡಿಸಿದರು. ಆ ಕಾಲದಲ್ಲಿ ವಾನರ ಪ್ರಮುಖರು ರಾಕ್ಷಸ ಬಲವನ್ನು ಮರ್ಧನಮಾಡಿದರು.

**ಶ್ಲೋಕ॥ ಗಜೋಗವಾಕ್ಷೋ ಗವಯೋ ವೃಷಶ್ಚ । ಸಗಂಧಮಾದಾ ಧನದೇನಜಾತಾಃ ॥ ಪ್ರಾಣಾದಯಃ ಪಂಚ ಮರುತ್ಪ್ರವೀರಾಃ । ಸಕಥ್ನೋವಿತ್ತಪತಿಶ್ಚ ಜಘ್ನುಃ ॥೭೨॥**

ಅರ್ಥ:—ಅಥ=ಅನಂತರದಲ್ಲಿ, ಧನದೇನಜಾತಾಃ=ಧನದೇನ=ಕುಬೇರನಿಂದ, ಜಾತಾಃ=ಉತ್ಪನ್ನರಾದ, ಮರುತ್ಪ್ರವಿರಾಃ = ಪಂಚಾಶನ್ಮರುತ್ತುಗಳಲ್ಲಿ ಶ್ರೇಷ್ಠರಾದ, ಪ್ರಾಣಾದಯಃ = ಪ್ರಾಣ ಮೊದಲಾದ, ಪಂಚ=

ಐದು ಅವತಾರಭೂತರಾದ ಗಜ, ಗವಾಕ್ಷ, ಗವಯ, ವೃಷ, ಗಂಧ ಮಾದನ ಎಂದು ಹೆಸರುಳ್ಳ ವಾನರ ಪ್ರಮುಖರು, ವಿತ್ತಪತೇಃ – ಧನ ಪತಿಯ ಅವತಾರ ಭೂತನಾದ, ಸಕಥ್ನನಶ್ಚ=ಕಥ್ನನ ನಾಮಕ ಕಪಿಶ್ರೇಷ್ಠ ನೂ ಕೂಡ (ರಾವಣಂ=ರಾವಣನನ್ನು, ಜಘ್ನುಃ=ತಾಡನ ಮಾಡಿದರು.

ತಾತ್ಪರ್ಯ:—ರಾವಣನು ಯುದ್ಧಕ್ಕೆ ಬಂದ ವಡನೆಯೇ ಅವನನ್ನು ಗಜ, ಗವಾಕ್ಷ, ಗವಯ ವೃಷ, ಗಂಧಮಾಧನ ಎಂಬ ಹೆಸರಿನಿಂದ ಕುಭೇರನ ದೆಶೆಯಿಂದ ಉತ್ಪನ್ನರಾಗಿದ್ದ ಪ್ರಾಣ ಅಪಾನ, ವ್ಯಾನ, ಉ ದಾನ, ಸಮಾನರೆಂಬ ಪಂಚಪ್ರಾಣರು ಮತ್ತು ಕುಭೇರನ ಅವತಾರಭೂತ ನಾದ ಕಥ್ನನನಾಮಕ ಕಪಿಶ್ರೇಷ್ಟನೂ ಕೂಡಿ ಆರುಮಂದಿ ವಾನರ ಪ್ರಮು ಖರೂ ಆ ರಾವಣನನ್ನು ಪ್ರಹಾರ ಮಾಡಿದರು.

**ಶ್ಲೋಕ || ಶರೈಸ್ತು ತಾನ್ ಷಡ್ಭಿರಮೋಘ ವೇಗೈ । ನಿಪಾತಯಾಮಾಸ ದ ಶಾನನೋದ್ರಾಕ್ || ಅಥಾಶ್ವಿ ಪುತ್ರೌ ಚ ಸಜಾಂಬವಂತೌ । ಪ್ರಜ ಹ್ರತುಃ ಶೈಲ ವರ್ಯೈಸ್ತ್ರಿಭಿಸ್ತಂ ||೭೩||**

ಅರ್ಥ:—ದಶಾನನಃ=ರಾವಣನು, ದ್ರಾಕ್–ತಕ್ಷಣವೇ, ತಾನ್= ಗವಾದಿ ಆರುಮಂದಿ ಕಪಿ ಪ್ರಮುಖರನ್ನು, ಷಡ್ಭಿಃ–ಆರು ಸಂಖ್ಯೆಯುಳ್ಳ, ಅಮೋಘವೇಗೈಃ=ಅಪರಿಮಿತವಾದ ವೇಗವುಳ್ಳ, ಶರೈಸ್ತು = ಬಾಣಗಳಿಂ ದ, ನಿಪಾತಯಾಮಾಸ=ಬೀಳಿಸಿದನು. ಅಥ–ಅನಂತರ, ತಂ=ಆ ರಾವ ಣನನ್ನು, ಸಜಾಂಬವಂತೌ=ಜಾಂಬವಂತನಿಂದ ಸಹಿತರಾದ, ಅಶ್ವಿಪುತ್ರೌ= ಅಶ್ವಿನೀದೇವತೆಗಳ ಪುತ್ರರಾದ ನೀಲ ಮೈಂದರು, ತ್ರಿಭಿಃ=ಮೂರು ಸಂ ಖ್ಯೆಯುಳ್ಳ ವಾನರರು, ಶೈಲವರ್ಯೈಃ=ಶ್ರೇಷ್ಠವಾದ ಪರ್ವತಗಳಿಂದ, ಪ್ರ ಜಹ್ರತುಃ–ಪ್ರಹಾರಮಾಡಿದರು.

ತಾತ್ಪರ್ಯ:—ವಾನರ ರೂಪರಾದ ಪ್ರಾಣಾದಿಗಳೂ ಕುಬೇರರೂಪಿ ನೂಆದ ಆರುಮಂದಿ ಕಪಿವೀರರನ್ನೂ ಆ ರಾವಣನು ಅತಿ ತೀಕ್ಷ್ಣವಾದ ಬಾಣಗಳಿಂದ ತಕ್ಷಣವೇ ನೆಲಕ್ಕೆ ಕೆಡವಿದನು. ಈ ಗವಾದಿ ಆರು ಜನ ಗಳೂ ಬಿದ್ದನಂತರ ಜಾಂಬವಂತನೂ ಮತ್ತು ಅಶ್ವಿನೀ ಪುತ್ರರಿಬ್ಬರೂ ಮೂರು ಪರ್ವತ ಶ್ರೇಷ್ಟಗಳಿಂದ ಆ ರಾವಣನನ್ನು ಪ್ರಹಾರ ಮಾಡಿದರು.

**ಶ್ಲೋಕ ||** **ಗಿರೀನ್ವಿದಾರ್ಯಾಶು ಶರೈರಥಾನ್ಯಾನ್ | ಶರಾನ್ದಶಾಸ್ಯೋ ಮು ಚದಾಶು ತೇಷು || ಏಕೈಕಮೇಭಿರ್ವಿನಿಪಾತಿತಾಸ್ತೇ | ಸಸಾರ ತಂ ಶ ಕ್ರಸುತಾತ್ಮಜೋಽಥ** ||೭೪||

ಅರ್ಥ.—ದಶಾಸ್ಯಃ = ರಾವಣನು, ಆಶು=ಜಾಗ್ರತೆಯೇ, ಗಿರೀನ್– ಪರ್ವತಗಳನ್ನು, ಶರೈಃ=ಬಾಣಗಳಿಂದ, ವಿದಾರ್ಯ = ಭೇದನಮಾಡಿ, ತೇಷು–ಅವರುಗಳಲ್ಲಿ, ಅನ್ಯಾನ್ ಶರಾನ್ = ಬೇರೆ ಬಾಣಗಳನ್ನು, ಅಮುಚ ತ್–ಪ್ರಯೋಗ ಮಾಡಿದನು. ಏಭಿಃ=ಆ ಬಾಣಗಳಿಂದ, ತೇ–ಆ ಅಶ್ವಿನೀ ಪುತ್ರರಾದ, ನೀಲಮೈಂದರಿಬ್ಬರೂ ಜಾಂಬವಂತನೂ ಸಹ, ಏಕೈಕಂ= ಒಬ್ಬೊಬ್ಬರಾಗಿ, ವಿನಿಪಾತಿತಾಃ=ನಿಪಾತ ಮಾಡಲ್ಪಟ್ಟರು. ಅಥ–ಈ ಮೂರು ಕಪಿಗಳೂ ಬಿದ್ದನಂತರ, ಶಕ್ರಸುತಾತ್ಮಜಃ=ಅಂಗದನು, ತಂ= ರಾವಣನನ್ನು ಕುರಿತು, ಸಸಾರ=ಮುಂದೆ ಸರಿದನು.

ತಾತ್ಪರ್ಯ.—ರಾವಣನು ಅಶ್ವಿನೀ ಪುತ್ರಾದಿಗಳಿಂದ ಪ್ರಯೋಗಿಸ ಲ್ಪಟ್ಟ ಮೂರು ಪರ್ವತಗಳನ್ನೂ ತೀಕ್ಷ್ಣಗಳಾದ ಬಾಣಗಳಿಂದ ಭೇದನ ಮಾಡಿದನು. ಅನಂತರ ಆ ಮೂವರನ್ನೂ ಬೇರೆ ಮೂರು ಬಾಣಗಳಿಂದ ಹೊಡಿದನು. ಆ ಬಾಣಗಳಿಂದ ಪ್ರತಿಯೊಬ್ಬರೂ ಪರಾಜಿತರಾದರು. ಆ ಮೇಲೆ ಅಂಗದನು ರಾವಣನನ್ನು ಕುರಿತು ಯುದ್ಧಕ್ಕೆ ಮುಂದೆ ಸರಿದನು.

**ಶ್ಲೋಕ ||** **ಶಿಲಾಂ ಸಮಾದಾಯ ತಮಾಪತಂತಂ | ಬಿಭೇದ ರಕ್ಷೋ ಹೃದ ಯೇ ಶರೇಣ | ದೃಢಾಹತಃ ಸೋಽಪ್ಯಗಮದ್ಧರಾತಲಂ | ರವೇಃಸು ತೋಽಥೈನಮಭಿಪ್ರಜಗ್ಮಿವಾನ್** ||೭೫||

ಅರ್ಥ:—ಶಿಲಾಂ–ಪರ್ವತವನ್ನು, ಸಮಾದಾಯ=ತೆಗೆದುಕೊಂಡು, ಆಪತಂತಂ=ಓಡಿ ಬರುತ್ತಲಿರುವ, ತಂ–ಅಂಗದನನ್ನು, ರಕ್ಷಃ = ರಾಕ್ಷಸ ನು, ಶರೇಣ–ಬಾಣದಿಂದ, ಹೃದಯೇ=ಹೃದಯದಲ್ಲಿ, ಬಿಭೇದ=ಹೊಡೆ ದನು, ಸೋಽಪಿ–ಅವನೂ (ಅಂಗದ) ಕೂಡ. ದೃಢಾಹತಃ – ಬಲವಾದ ಪೆಟ್ಟಿನ ದೆಶೆಯಿಂದ, ಧರಾತಲಂ=ಭೂಮಿಯನ್ನು, ಅಗಮತ್=ಹೊಂದಿ ದನು, ಅಥ=ಅನಂತರ, ಏನಂ=ಈ ರಾವಣನನ್ನು ಕುರಿತು, ರವೇಃಸುತಃ– ಸುಗ್ರೀವನು, ಅಭಿಜಗ್ಮಿವಾನ್=ಅಭಿಮುಖವಾಗಿ ಹೊರಟನು.

ತಾತ್ಪರ್ಯ.—ಪರ್ವತವನ್ನು ತೆಗೆದುಕೊಂಡು ಬರುತ್ತಿರುವ ಅಂಗದನನ್ನು ಕಂಡು ರಾವಣನು ತನ್ನ ಬಾಣದಿಂದ ಅಂಗದನ ವಕ್ಷಸ್ಥಳದಲ್ಲಿ ಹೊಡೆದನು. ಅಂಗದನು ಬಲವಾದ ಪೆಟ್ಟಿನಿಂದವನಾಗಿ ನೆಲಕ್ಕೆ ಬಿದ್ದನು ಅನಂತರ ಸೂರ್ಯಪುತ್ರನಾದ ಸುಗ್ರೀವನು ರಾವಣನ ಸಂಗಡ ಯುದ್ಧಕ್ಕೋಸ್ಕರ ರಾವಣನ ಅಭಿಮುಖನಾಗಿ ಬಂದನು.

**ಶ್ಲೋಕ ॥ ತದ್ಧಸ್ತಗಂ ಭೂರುಹಮಾಶು ಬಾಣೈಃ। ದಶಾನನಃ ಖಂಡಶ ಏವ ಕೃತ್ವಾ ॥ ಗ್ರೀವಾಪ್ರದೇಶಸ್ಯಮುಮೋಚ ಬಾಣಂ। ಭೃಶಾಹತಃ ಸೋಽಪಿ ಪಪಾತಭೂಮೌ ॥೭೬॥**

ಅರ್ಥ:—ದಶಾನನಃ=ರಾವಣನು, ತದ್ಧಸ್ತಗಂ=ಸುಗ್ರೀವನ ಕೈಯ್ಯಲ್ಲಿದ್ದ, ಭೂರುಹಂ-ವೃಕ್ಷವನ್ನು, ಆಶು=ಜಾಗ್ರತೆಯಾಗಿ, ಬಾಣೈಃ=ಬಾಣಗಳಿಂದ, ಖಂಡಶಯೇವ=ತುಂಡುತುಂಡಾಗಿ, ಕೃತ್ವಾ=ಮಾಡಿ, ಗ್ರೀವಾಪ್ರದೇಶಸ್ಯ=ಸುಗ್ರೀವನ ಕಂಠ ಪ್ರದೇಶಕ್ಕೆ, ಬಾಣಂ-ಬಾಣವನ್ನು, ಮುಮೋಚ=ಪ್ರಯೋಗಮಾಡಿದನು. ಸೋಽಪಿ=ಆ ಸುಗ್ರೀವನು, ಭೃಶಾಹತಃ ಸನ್-ಅತ್ಯಂತ ಪೆಟ್ಟುಬಿದ್ದವನಾಗಿ, ಭೂಮೌ=ಭೂಮಿಯಲ್ಲಿ, ಪಪಾತ=ಬಿದ್ದನು.

ತಾತ್ಪರ್ಯ:—ಸುಗ್ರೀವನು ವೃಕ್ಷವನ್ನು ತೆಗೆದುಕೊಂಡು ತನ್ನ ಅಭಿಮುಖನಾಗಿ ಯುದ್ಧಕೆ ಬರುತ್ತಿರುವುದನ್ನು ಕಂಡು ರಾವಣನು ತಕ್ಷಣವೇ ಅವನ ಕೈಯ್ಯಲ್ಲಿದ್ದ ವೃಕ್ಷವನ್ನು ಬಾಣಗಳಿಂದ ತುಂಡುತುಂಡಾಗಿ ಕತ್ತರಿಸಿ, ಅವನ ಕಂಠಕ್ಕೆ ಬಾಣವನ್ನು ಪ್ರಯೋಗಿಸಿದನು. ಅದರಿಂದ ಆ ಸುಗ್ರೀವನು ಬಲವಾದ ಪೆಟ್ಟು ಬಿದ್ದವನಾಗಿ ಭೂಮಿಯ ಮೇಲೆ ಬಿದ್ದನು.

**ಶ್ಲೋಕ ॥ ಅಥೋ ಹನೂಮಾನುರಗೇಂದ್ರ ಭೋಗ ಸಮಂ ಸ್ವಬಾಹುಂ ಭೃಶಮುನ್ನಮಯ್ಯ ॥ ತತಾಡವಕ್ಷಸ್ಯಧಿಪಂತು ರಕ್ಷಸಾಂ। ಮುಖೈಃ ಸರಕ್ತಂ ಪ್ರವಮನ್ ಪಪಾತ ॥೭೭॥**

ಅರ್ಥ:—ಅಥ=ಅನಂತರದಲ್ಲಿ, ಹನೂಮಾನ್-ಹನುಮಂತನು, ಉರಗೇಂದ್ರಭೋಗಸಮಂ=ಉರಗೇಂದ್ರ=ಸರ್ಪಗಳಿಗೆ ಅಧಿಪತಿಯಾದ ಶೇಷದೇವರ, ಭೋಗ=ಶರೀರಕ್ಕೆ, ಸಮಂ=ಸದೃಶವಾದ, ಸ್ವಭಾಹುಂ = ತನ್ನ ಭುಜವನ್ನು, ಉನ್ನಮಯ್ಯ=ಮೇಲಕ್ಕೆತ್ತಿ, ರಕ್ಷಸಾಂ=ರಾಕ್ಷಸರ, ಅಧಿಪಂ

ತು=ಅಧಿಪತಿಯೊದ ರಾವಣನನ್ನು, ವಕ್ಷಸಿ-ಹೃದಯದಲ್ಲಿ, ಭೃಶಂ=ಅತ್ಯಂತವಾಗಿ, ತತಾಡ=ಹೊಡೆದನು, ಸಃ=ಆ ರಾವಣನು, ಮುಖೈಃ=ದಶಮುಖಗಳಿಂದಲೂ, ರಕ್ತಂ=ರಕ್ತವನ್ನು, ಪ್ರವರ್ಷನ್-ಕಾರುತ್ತಾ, ಪಪಾತ=ಕೆಳಗೆ ಬಿದ್ದನು.

ತಾತ್ಪರ್ಯ:—ಸುಗ್ರೀವನು ಬಿದ್ದನಂತರ ಹನುಮಂತನು ಶೇಷ ದೇವರ ದೇಹ ಸದೃಶವಾದ ತನ್ನ ಭುಜವನ್ನು ಮೇಲಕ್ಕೆತ್ತಿ ರಾಕ್ಷಸಾಧಿಪತಿಯಾದ ರಾವಣನ ಹೃದಯದಲ್ಲಿ ಚೆನ್ನಾಗಿ (ಬಲವಾಗಿ) ಹೊಡೆದನು. ರಾವಣನು ಆ ಪೆಟ್ಟಿನಿಂದ ಹತ್ತು ಮುಖಗಳಿಂದಲೂ ರಕ್ತ ಕಾರುತ್ತಾ ಕೆಳಗೆ ಬಿದ್ದನು.

**ಶ್ಲೋಕ॥ ಸಲಬ್ಧಸಂಜ್ಞಃ ಪ್ರಶಶಂಸ ಮಾರುತಿಂ। ತ್ವಯಾ ಸಮೋನಾಸ್ತಿ ಪುಮಾನ್ಕಶ್ಚಿತ್ ॥ ಕಃಪ್ರಾಪಯೇ ದನ್ಯ ಇಮಾಂ ದಶಾಂಮಾ। ಮಿತೀರಿತೋಮಾರುತಿರಾಹತಂಪುನಃ ॥೭೮॥**

ಅರ್ಥ:—ಲಬ್ಧಸಂಜ್ಞಃ=ಮೂರ್ಛೆಯಿಂದ ಎಚ್ಚರಗೊಂಡ, ಸಃ=ಆ ರಾವಣನು, ಮಾರುತಿಂ-ಹನುಮಂತನನ್ನು ಕುರಿತು, ಪ್ರಶಶಂಸ=ಸ್ತೋತ್ರ ಮಾಡಿದನು. ತ್ವಯಾ=ನಿನಗೆ, ಸಮಃ-ಸಮಾನನಾದ, ಪುಮಾನ್-ಪುರುಷನು, ಕಶ್ಚಿತ್=ನಿನ್ನ ಹೊರತು ಬೇರೆ ಯಾವನೂ, ನಾಸ್ತಿ-ಇಲ್ಲ, ಮಾಂ=ನನ್ನನ್ನು, ಇಮಾಂದಶಾಂ=ಇಂತಹ ಅವಸ್ಥೆಯನ್ನು, ಅನ್ಯಃ - ಇತರರು ಯಾರು, ಪ್ರಾಪಯೇತ್=ಹೊಂದಿಸಿಯಾರು, ಇತಿ = ಈ ಪ್ರಕಾರವಾಗಿ, ಈರಿತಃ=ಹೇಳಿಸಿಕೊಳ್ಳಲ್ಪಟ್ಟ, ಮಾರುತಿಃ=ಹನುಮಂತನು, ತಂ=ಆ ರಾವಣನನ್ನು ಕುರಿತು, ಪುನಃ=ಮತ್ತೆ, ಆಹ=ಹೇಳಿದನು.

ತಾತ್ಪರ್ಯ:—ರಾವಣನು ಹನುಮಂತನಿಂದ ಪೆಟ್ಟು ತಿಂದು ಮೂರ್ಛಿತನಾಗಿದ್ದವನು ಎಚ್ಚತ್ತು ಹನುಮಂತನನ್ನು ನೋಡಿ ಮುಂದೆ ಹೇಳುವ ರೀತಿ ಹೊಗಳಿದನು. ಹೇಗೆಂದರೆ:—ನಿನಗೆ ಸಮಾನವಾದ ಪರಾಕ್ರಮ ಉಳ್ಳ ಪುರುಷನು ಯಾರೂ ಇಲ್ಲ, ನಿನ್ನ ವಿನಹ ಮತ್ಯಾರು ನನಗೆ ಈ ಮೂರ್ಛಾವಸ್ಥೆಯನ್ನು ಹೊಂದಿಸಿಯಾರು ? ಎಂದು ಹೊಗಳುತ್ತಿರುವಲ್ಲಿ, ಹನುಮಂತನು ಪುನಃ ರಾವಣನನ್ನು ಕುರಿತು ಮುಂದೆ ಹೇಳುವ ಪ್ರಕಾರ ಹೇಳುತ್ತಾನೆ.

**ಶ್ಲೋಕ॥ ಅತ್ಯಲ್ಪಮೇತದ್ಯದಃ ಪಾತ್ತ ಜೀವಿತಃ । ಪುನಸ್ತ್ವಮಿತ್ಯುಕ್ತ ಉವಾಚ ರಾವಣಃ ॥ ಗೃಹಾಣ ಮತ್ತೋಽಪಿ ಸಮುದ್ಯತಂ ತ್ವಂ ಮುಷ್ಟಿ ಪ್ರಹಾರಂತ್ವಿತಿತಂ ಪ್ರಪೋಥ ॥೭೯॥**

ಅರ್ಥ:—(ಎಲೋ ರಾವಣನೇ) ಏತತ್=ಈಗ ನಿನ್ನಲ್ಲಿ ನನ್ನಿಂದ ಉಪಯೋಗಿಸಲ್ಪಟ್ಟ ಬಲವು, ತ್ವಂ—ನೀನು, ಉಪಾತ್ತಜೀವಿತಃ—ಉಪಾತ್ತ=ಹೊಂದಲ್ಪಟ್ಟ, ಜೀವಿತಃ=ಜೀವವುಳ್ಳವನಾಗಿದ್ದೀಯೋ, ಆದ್ದರಿಂದ, ಅತ್ಯಲ್ಪಂ=ಬಹಳ ಕಡಿಮೆಯಾದದ್ದು, ಇತಿ=ಈ ರೀತಿಯಾಗಿ, ಉಕ್ತಃ=ಹನುಮಂತನಿಂದ ಹೇಳಲ್ಪಟ್ಟ, ರಾವಣಃ=ರಾವಣನು (ತಂಪ್ರತಿ – ಹನುಮಂತನನ್ನು ಕುರಿತು) ಪುನಃ=ಮತ್ತೆ, ಉವಾಚ=ಹೇಳಿದನು, ಮತ್ತೋಽಪಿ=ನನ್ನಿಂದಲೂ, ಸಮುದ್ಯತಂ=ಚೆನ್ನಾಗಿ ಪ್ರಕಾಶಮಾನವಾದ, ಮುಷ್ಟಿಪ್ರಹಾರಂ=ಮುಷ್ಟಿಯ ಪೆಟ್ಟನ್ನು, ತ್ವಂ=ನೀನು, ಗೃಹಾಣ—ಗ್ರಹಣಮಾಡು, ಇತಿ—ಹೀಗೆಂದು ಹೇಳಿ, ತಂ=ಹನುಮಂತನನ್ನು, ಪ್ರಪೋಥ=ಗುದ್ದಿದನು.

ತಾತ್ಪರ್ಯ:— ಹನುಮಂತನು ಹೇಳುತ್ತಾನೆ. ಹೇ ! ರಾವಣಾ, ನನ್ನಿಂದ ಪೆಟ್ಟುತಿಂದು ಇನ್ನೂ ಬದುಕಿದ್ದೀಯೋ, ಆದ್ದರಿಂದ ಈಗ ನಾನು ನಿನ್ನಲ್ಲಿ ಉಪಯೋಗಿಸಿದ ಬಲವು ಅತ್ಯಲ್ಪವಾದದ್ದು ಎಂದು ಹೇಳುತ್ತಿರಲಾಗಿ ಆ ರಾವಣನು ಪುನಃ ಹನುಮಂತನನ್ನು ಕುರಿತು ಹೇಳುತ್ತಾನೆ. ಹೇ ! ಹನುಮಂತಾ ನಾನು ನಿನಗೋಸ್ಕರ ಉದ್ದೇಶಮಾಡಿ ಪ್ರಯೋಗಿಸುತ್ತಿರುವ ಪ್ರಹಾರವನ್ನು ಸ್ವೀಕಾರಮಾಡೆಂದು ಹೇಳಿ ಹನುಮಂತನನ್ನು ಮುಷ್ಟಿಯಿಂದ ಪ್ರಹಾರಮಾಡಿದನು.

**ಶ್ಲೋಕ॥ ಕಿಂಚಿತ್ಪ್ರಹಾರೇಣ ವಿಹ್ವಲಾಂಗವತ್ । ಸ್ಥಿತೇಹಿ ತಸ್ಮಿನ್ನಿದಮಂತರಂ ಮಮ ॥ ಇತ್ಯಗ್ನಿಸೂನುಂ ಪ್ರಯಯೌ ಸರಾವಣೋ । ನಿವಾರಿತೋ ಮಾರುತಿನಾಪಿವಾಚಾ ॥೮೦॥**

ಅರ್ಥ:— ತಸ್ಮಿನ್=ಆ ಹನುಮಂತನು, ಪ್ರಹಾರೇಣ—ರಾವಣನ ಮುಷ್ಟಿ ಪ್ರಹಾರದಿಂದ, ವಿಹ್ವಲಾಂಗವತ್ = ಭ್ರಾಂತನಾದವನೋಪಾದಿಯಲ್ಲಿ ಸ್ಥಿತೇಸತಿ=ಇರುತ್ತಿರಲಾಗಿ, ಸಃ=ರಾವಣನು, ಮಮ=ನನಗೆ, ಇದಮಂತರಂಹಿ=ಇದೇ ಸಮಯವು, ಇತಿ—ಹೀಗೆಂದು ಭಾವಿಸಿ, ಮಾರುತಿನಾ=ಹನುಮಂತನಿಂದ, ವಾಚಾ=ಬಾಯಿಮಾತಿನಿಂದ, ನಿವಾರಿತೋಽಪಿ – ತಡೆಯಲ್ಪ

ಟ್ವಾಗ್ನ್ಯೋ, ಅಗ್ನಿಸೂನುಂಪ್ರತಿ-ಅಗ್ನಿ ಕುಮಾರನಾದ ನೀಲನೆಂಬ ವಾನರನನ್ನು ಕುರಿತು, ಪ್ರಯಯೌ-ಹೊರಟುಹೋದನು.

ತಾತ್ಪರ್ಯ:—ಹನುಮಂತನು ರಾವಣನ ಮುಷ್ಟಿ ಘಾತದಿಂದ ಭ್ರಾಂತನಾದವನ ಹಾಗೆ ಇರುತ್ತಿರಲು ರಾವಣನು ತನಗೆ ಇದೇ ಸಮಯವೆಂದು ತಿಳಿದು ಹನುಮಂತನು ಯುದ್ಧಕ್ಕೆ ಬರುವುದಾಗಿ ಹೇಳಿತಡೆಯುತ್ತಿದ್ದಾಗ್ಯೂ ಅಗ್ನಿ ಪುತ್ರನಾದ ನೀಲ ನಾಮಕ ವಾನರ ಶ್ರೇಷ್ಠನನ್ನು ಕುರಿತು ಹೊರಟನು.

**ಶ್ಲೋಕ॥ ತಮಾಪತಂತಂ ಪ್ರಸಮೀಕ್ಷ್ಯ ನೀಲೋ। ಧನುರ್ಧ್ವಜಾಗ್ರಾಶ್ವರಥೇಷು ತಸ್ಯ ॥ ಚಚಾರಮೂರ್ಧಸ್ವಪಿ ಚಂಚಲೋಲಂ। ಜಡೀಕೃತಸ್ತೇನ ಸರಾವಣೋಽಪಿ ॥೮೧॥**

ಅರ್ಥ:—ಆಪತಂತಂ=ತನಗೆ ಅಭಿಮುಖನಾಗಿ ಬರುತ್ತಿರುವ, ತಂ=ಆ ರಾವಣನನ್ನು, ಪ್ರಸಮೀಕ್ಷ್ಯ-ನೋಡಿ, ನೀಲಃ=ನೀಲನು, ಚಂಚಲಃ ಸನ್=ಚಂಚಲಯುಕ್ತನಾಗಿ, ತಸ್ಯ=ಆ ರಾವಣನ, ಧನುಃ-ಧನುಸ್ಸು, ಧ್ವಜಾಗ್ರ-ಧ್ವಜದ ಕೊನೆ, ಅಶ್ವ=ಕುದುರೆ ಮತ್ತು ಮೂರ್ಧಸ್ವಪಿ-ರಾವಣನ ಶಿರಸ್ಸು ಇವುಗಳಲ್ಲಿ, ಚಚಾರ - ಸಂಚಾರ ಮಾಡಿದನು. ತೇನ=ಈ ಸಂಚಾರ ಮಾಡೋಣದರಿಂದ ಸಃ-ಆ, ರಾವಣೋಽಪಿ=ರಾವಣನೂಕೂಡ ಜಡೀಕೃತಃ=ಭ್ರಾಂತನಾಗಿ ಬುದ್ಧಿಶೂನ್ಯನಾದನು.

ತಾತ್ಪರ್ಯ:—ತನಗೆ ಅಭಿಮುಖನಾಗಿ ಬರುತ್ತಿರುವ ರಾವಣನನು ನೋಡಿ ನೀಲನು ಭ್ರಾಂತನಾದವನಾಗಿ ರಾವಣನ ಧನುಸ್ಸು, ಧ್ವಜ, ಅಶ್ವ ರಥ ಇವುಗಳ ಕೊನೆಯೂ ಮತ್ತು ರಾವಣನ ತಲೆಯಮೇಲೆಯೂ ಸಹ ಇಲ್ಲಿಂದಲ್ಲಿ ಅಲ್ಲಿಂದಇಲ್ಲಿ ಹೀಗೆ ಹಾರಾಡಿ ಸಂಚಾರ ಮಾಡಿದನು. ಒಂದು ಕ್ಷಣವಾದರೂ ಒಂದುಕಡೆ ನಿಲ್ಲಲಿಲ್ಲ. ನೀಲನ ಈ ರೀತಿಯಾದ ಓಡಾಟದಿಂದ ರಾವಣನು ದಿಗ್ಭ್ರಮೆಹಿಡಿದವನಾಗಿ ಮುಂದೆ ಏನು ಮಾಡಬೇಕೆಂಬ ಯೋಚನೆ ತೋಚದೆ ವಿವೇಕ ಶೂನ್ಯನಾದನು.

**ಶ್ಲೋಕ॥ ಸಕ್ಷಿಪ್ರಮಾದಾಯ ಹುತಾಶನಾಸ್ತ್ರಂ। ಮುಮೋಚ ನೀಲೇ ರಜನೀಚರೇಶಃ ॥ ಸತೇನ ಭೂಮೌ ಪತಿತೋ ನಚೈನಂ। ದದಾಹವಹ್ನಿಃ ಸ್ವತನುರ್ಯತೋಽಸೌ ॥೮೨॥**

ಅರ್ಥ:—ಸಃ=ಭ್ರಾಂತನಾದ, ರಜನೀಚರೇಶಃ=ರಾವಣನು, ಕ್ಷಿಪ್ರಂ-ಜಾಗ್ರತೆಯಲ್ಲಿ, ಹುತಾಶನಾಸ್ತ್ರಂ=ಅಗ್ನ್ಯಸ್ತ್ರವನ್ನು, ಆದಾಯ=ತೆಗೆದುಕೊಂಡು, ನೀಲೇ=ನೀಲನ ಮೇಲೆ, ಮುಮೋಚ=ಪ್ರಯೋಗಮಾಡಿದನು. ತೇನ=ಅದರಿಂದ, ಸಃ=ಆ ನೀಲನು, ಭೂಮೌ=ನೆಲದ ಮೇಲೆ, ಪತಿತಃ-ಬಿದ್ದನು, ಅಸೌ=ಈ ನೀಲನು, ಸ್ವತನುರ್ಯತಃ=ಅಗ್ನ್ಯಸ್ತ್ರದಲ್ಲಿ ಸನ್ನಿಹಿತನಾದ ಸ್ವಂತ ಅಗ್ನಿಯ ಅಂಶ ಭೂತನಾಗಿದ್ದುದರಿಂದ, ವಹ್ನಿಃ - ಅಗ್ನ್ಯಸ್ತ್ರಗತನಾದ ಅಗ್ನಿಯು, ಏನಂ=ಈ ಅಗ್ನಿಪುತ್ರನಾದ ನೀಲನನ್ನು, ನದದಾಹಚ-ಸುಡಲಿಲ್ಲ.

ತಾತ್ಪರ್ಯ:—ಆ ನೀಲನು ಚಂಚಲವಾದ ಸಂಚಾರದಿಂದ ಒಂದು ಕಡೆಯಾದರೂ ನಿಲ್ಲದೆ ರಾವಣನ ಕೈಗೆ ಸಿಕ್ಕದೆ ಇದ್ದನು. ಹೀಗಿದ್ದುದರಿಂದ ಏನುಮಾಡುವದಕ್ಕೂ ತೋಚದೆ ರಾವಣನು ಜಡೀಕೃತನಾದನು (ಚೇತರಿಸಿ) ತಕ್ಷಣದಲ್ಲಿಯೇ ಅಗ್ನ್ಯಸ್ತ್ರವನ್ನು ನೀಲನಮೇಲೆ ಪ್ರಯೋಗ ಮಾಡಿದನು, ನೀಲನು ಆ ಅಗ್ನ್ಯಸ್ತ್ರಘಾತದಿಂದ ಭೂಮಿಯಮೇಲೆ ಬಿದ್ದನು. ಅಷ್ಟೇ ಹೊರತು ಆ ಅಗ್ನ್ಯಸ್ತ್ರದಲ್ಲಿ ಸನ್ನಿಹಿತನಾಗಿದ್ದ ಅಗ್ನಿಯು ಇವನನ್ನು ದಹಿಸಲಿಲ್ಲ. ಏಕೆಂದರೆ ಈ ನೀಲನು ಅಗ್ನ್ಯಂಶದಿಂದ ಅವತಾರ ಮಾಡಿರುವದರಿಂದ. (ನೀಲನು ಅಗ್ನ್ಯಂಶದಿಂದ ಅಗ್ನಿ ಪುತ್ರನಾಗಿ ಅವತಾರಮಾಡಿದವನು.)

**ಶ್ಲೋಕ|| ತತೋಽಯಯೌ ರಾಘವಮೇವ ರಾವಣೋ | ನಿವಾರಯಾಮಾಸ<br>ತಮಾಶು ಲಕ್ಷ್ಮಣಃ || ತತಕ್ಷತು ಸ್ತಾವಧಿಕೌ ಧನುರ್ಭೃತಾಂ |<br>ಶರೈಃ ಶರೀರಾವರಣಾವದಾರಣೈಃ ||೩೩||**

ಅರ್ಥ:—ತತಃ=ಅನಂತರದಲ್ಲಿ, ರಾವಣಃ-ರಾವಣನೂ, ರಾಘವಮೇವ=ಶ್ರೀರಾಮರನ್ನೇ ಉದ್ದೇಶಮಾಡಿ ಹೊರಟನು, ತಂ=ಆ ರಾವಣನನ್ನು, ಆಶು-ತಕ್ಷಣದಲ್ಲಿಯೇ, ಲಕ್ಷ್ಮಣಃ=ಲಕ್ಷ್ಮಣನು ತಡೆದನು. ಧನುರ್ಭೃತಾ=ಧನುರ್ಧಾರಿಗಳಲ್ಲಿ, ಅಧಿಕೌ=ಶ್ರೇಷ್ಠರಾದ, ತೌ=ಆ ಲಕ್ಷ್ಮಣ ರಾವಣರು, ಶರೀರಾವರಣಾವದಾರಣೈಃ=ಶರೀರ-ಶರೀರದ, ಆವರಣ=ಕವಚವನ್ನು, ಅವದಾರಣೈಃ=ಚೆನ್ನಾಗಿ ಭೇದಿಸುವಂತಹ, ಶರೈಃ=ಬಾಣಗಳಿಂದ, ತತಕ್ಷತುಃ=ಪರಸ್ಪರವಾಗಿ ಹೊಡೆದಾಡಿದರು.

ತಾತ್ಪರ್ಯ:—ನೀಲನು ಬಿದ್ದನಂತರ ರಾವಣನು ಶ್ರೀರಾಮರನ್ನೇ ಉದ್ದೇಶಮಾಡಿ ಅವರ ಸಂಗಡ ಯುದ್ಧಕ್ಕೆ ಹೊರಟನು, ಆಗ ಲಕ್ಷ್ಮಣನು ಅವನನ್ನು ತಡೆದನು. ಅನಂತರ ಧನುರ್ಧಾರಿಗಳಲ್ಲಿ ಶ್ರೇಷ್ಠರಾದ ಈ ರಾವಣ ಲಕ್ಷ್ಮಣರಿಬ್ಬರೂ ಶರೀರದ ಕವಚವನ್ನು ಭೇದಿಸುವಂತಹ ತೀಕ್ಷ್ಣವಾದ ಬಾಣಗಳಿಂದ ಪರಸ್ಪರವಾಗಿ ಹೊಡೆದಾಡಿದರು.

ಶ್ಲೋಕ|| ನಿವಾರಿತಸ್ತೇನದಶಾನನೋ ಭೃಶಂ | ರುಷಾನ್ವಿತೋ ಬಾಣಮ ಮೋಘಮುಗ್ರಂ || ಸ್ವಯಂಭು ದತ್ತಂಪರಿಕೃಷ್ಯಚಾಶು | ಲಲಾಟ ಮಧ್ಯೇ ಪ್ರಮುಮೋಚತಸ್ಯ ||೪೪||

ಅರ್ಥ:—ತೇನ=ಆ ಲಕ್ಷ್ಮಣನಿಂದ, ನಿವಾರಿತಃ=ತಡೆಯಲ್ಪಟ್ಟ, ದಶಾನನಃ-ರಾವಣನು, ಭೃಶಂ-ಅತ್ಯಂತವಾಗಿ, ರುಷಾ = ರೋಷದಿಂದ, ಅನ್ವಿತಃಸ್ಸ-ಯುಕ್ತನಾದವನಾಗಿ, ಆಶು=ಜಾಗ್ರತೆಯಾಗಿ, ಸ್ವಯಂಭುದತ್ತಂ=ಬ್ರಹ್ಮದೇವರಿಂದ ಕೊಡಲ್ಪಟ್ಟದ್ದ, ಅಮೋಘಂ-ಪ್ರಬಲವಾದ (ಸಹಸಮಾಡಲಶಕ್ಯವಾದ್ದರಿಂದಲೇನೇ) ಉಗ್ರಂ=ತೀಕ್ಷ್ಣವಾದ, ಬಾಣಂ=ಬಾಣವನ್ನು, ಪರಿಕೃಷ್ಯ=ಚೆನ್ನಾಗಿ ಎಳೆದು, ತಸ್ಯ=ಆ ಲಕ್ಷ್ಮಣನ, ಲಲಾಟಮಧ್ಯೇ=ಹುಬ್ಬುಗಳ ಮಧ್ಯದಲ್ಲಿ, ಮುಮೋಚ=ಪ್ರಯೋಗ ಮಾಡಿದನು.

ತಾತ್ಪರ್ಯ:—ಲಕ್ಷ್ಮಣನಿಂದ ತಡೆಯಲ್ಪಟ್ಟ ರಾವಣನು ಅತ್ಯಂತ ರೋಷಯುಕ್ತನಾಗಿ ತನಗೆ ಬ್ರಹ್ಮದೇವರಿಂದ ಕೊಡಲ್ಪಟ್ಟದ್ದ ಸಹಿಸಲಸಾಧ್ಯವಾದ ಅತಿ ತೀಕ್ಷ್ಣವಾದ ಬಾಣವನ್ನು ಲಕ್ಷ್ಮಣನ ಹುಬ್ಬುಗಳ ಮಧ್ಯಕ್ಕೆ ಪ್ರಯೋಗ ಮಾಡಿದನು.

ಶ್ಲೋಕ|| ಭೃಶಾಹತಸ್ತೇನ ಮುಮೋಹ ಲಕ್ಷ್ಮಣೋ | ರಥಾದವಪ್ಲುತ್ಯ ದಶಾನನೋಽಪಿ ||ಕ್ಷಣಾದಭಿದ್ರುತ್ಯ ಬಲಾತ್ಪ್ರಗೃಹ್ಯ | ಸ್ವಬಾಹುಭಿರ್ನೇತು ಮಿಮಂ ಸಮೈಚ್ಛತ್ ||೪೫||

ಅರ್ಥ:—ತೇನ=ಆ ರಾವಣನಿಂದ, ಭೃಶಾಹತಃ=ಅತ್ಯಂತ ಪೆಟ್ಟು ಬಿದ್ದವನಾದ, ಲಕ್ಷ್ಮಣಃ=ಲಕ್ಷ್ಮಣನು, ಮುಮೋಹ=ಮೂರ್ಛಿತನಾದನು. ದಶಾನನೋಽಪಿ=ಆಗ ರಾವಣನು ಏನು ಮಾಡಿದನೆಂದರೆ, ರಥಾತ್ = ರಥದಿಂದ, ಕ್ಷಣಾತ್=ಕ್ಷಣದಲ್ಲಿ, ಅವಪ್ಲುತ್ಯ=ದುಮುಕಿ, ಅಭಿದ್ರುತ್ಯ=ಓಡಿ

ಬಂದು, ಇಮಂ=ಈ ಲಕ್ಷ್ಮಣನನ್ನು, ಸ್ವಬಾಹುಭಿಃ-ತನ್ನ ಸಮಸ್ತ ಭುಜಗಳಿಂದಲೂ, ಬಲಾತ್-ಬಲವಾಗಿ, ಪ್ರಗೃಹ್ಯ-ಹಿಡಿದುಕೊಂಡು, ನೇತುಂ = ತನ್ನ ಮನೆಗೆ ತೆಗೆದುಕೊಂಡು ಹೋಗುವದಕ್ಕಾಗಿ ಸಮೈಚ್ಛತ್= ಇಚ್ಛಿಸಿದನು.

ತಾತ್ಪರ್ಯ:—ರಾವಣನು ಪ್ರಯೋಗಿಸಿದ ಬಾಣದಿಂದ ಲಕ್ಷ್ಮಣನು ಮೂರ್ಛಿತನಾದನು. ತಕ್ಷಣವೇ ರಾವಣನು ತನ್ನ ರಥದಿಂದ ನೆಲಕ್ಕೆ ಧುಮುಕಿ ಲಕ್ಷ್ಮಣನ ಬಳಿಗೆ ಓಡಿಬಂದು ತನ್ನ ಇಪ್ಪತ್ತು ಬಾಹುಗಳಿಂದಲೂ ಅವನನ್ನು ಬಿಗಿಯಾಗಿ ಹಿಡಿದು ತನ್ನ ಮನೆಗೆ ತೆಗೆದುಕೊಂಡು ಹೋಗಬೇಕೆಂದು ಅಪೇಕ್ಷಿಸಿದನು.

**ಶ್ಲೋಕ॥ ಸಂಪ್ರಾಪ್ಯ ಸಂಜ್ಞಾಂ ಸಸುವಿಹ್ವಲೋಽಪಿ । ಸಸ್ಮಾರರೂಪಂ ನಿಜಮೇವಲಕ್ಷ್ಮಣಃ । ಶೇಷಂ ಹರೇರಂಶಯುತಂನಚಾಸ್ಯ । ಸಂಚಾಲನಾಯಾಪಿ ಶಶಾಕರಾವಣಃ ॥೮೬॥**

ಅರ್ಥ:—ಸಃ-ಆ, ಲಕ್ಷ್ಮಣಃ-ಲಕ್ಷ್ಮಣನು, ಸುವಿಹ್ವಲೋಽಪಿ=ಅತ್ಯಂತ ಮೂರ್ಛಾಗತನಾಗಿದ್ದಾಗ್ಯೂ, ಸಂಜ್ಞಾಂ-ಜ್ಞಾನವನ್ನು, ಸಂಪ್ರಾಪ್ಯ-ಹೊಂದಿ, ಹರೇಃ-ಶ್ರೀಪರಮಾತ್ಮನ ಸಂಕರ್ಷಣ ರೂಪ, ಅಂಶ=ಅಂಶದಿಂದ, ಯುತಂ=ಯುಕ್ತನಾದ, ನಿಜಂ=ತನ್ನ ಮೂಲ ರೂಪವಾದ, ಶೇಷಂ= ಶೇಷದೇವರ, ರೂಪಂಮೇವ=ರೂಪವನ್ನು, ಸಸ್ಮಾರ-ಸ್ಮರಣೆಮಾಡಿದನು. ಆಗ, ರಾವಣಃ-ರಾವಣನು, ಅಸ್ಯ=ಲಕ್ಷ್ಮಣನನ್ನು, ಸಂಚಾಲನಾಯಾಪಿ-ಅಲ್ಲಾಡಿಸುವುದಕ್ಕೂ ಸಹ, ನಶಶಾಕಚ=ಶಕ್ತನಾಗಲಿಲ್ಲ.

ತಾತ್ಪರ್ಯ:—ಲಕ್ಷ್ಮಣನು ಬಲವಾಗಿ ಮೂರ್ಛಾಗತನಾಗಿದ್ದಾಗ್ಯೂ ಎಚ್ಚರಗೊಂಡು ತನ್ನ ಮೂಲ ರೂಪವಾದ ಶೇಷಾಂತರ್ಯಾಮಿ ಶ್ರೀಸಂಕರ್ಷಣದೇವರ ಅಂಶಯುಕ್ತವಾದ ಶೇಷ ರೂಪವನ್ನು ಸ್ಮರಣ ಮಾಡಿದನು. ಮೂಲ ರೂಪಯುಕ್ತನಾದ ಲಕ್ಷ್ಮಣನನ್ನು ಅಲ್ಲಾಡಿಸುವುದಕ್ಕೂ ಸಹ ಈ ರಾವಣನು ಶಕ್ತನಾಗಲಿಲ್ಲ.

**ಶ್ಲೋಕ॥ ಬಲಾತ್ಸ್ವದೋರ್ಭಿಃ ಪರಿಗೃಹ್ಯ ಚಾಖಿಲೈ । ರ್ಯದಾಸವೀರಂ ಪ್ರಚಕರ್ಷರಾವಣಃ ॥ ಚಚಾಲ ಪೃಥ್ವೀಸಹಮೇರುಮಂದರಾ । ಸಸಾಗರಾನ್ನೈವ ಚಚಾಲ ಲಕ್ಷ್ಮಣಃ ॥೮೭॥**

ಅರ್ಥ:— ರಾವಣಃ=ರಾವಣನು, ವೀರಂ = ಪರಾಕ್ರಮಶಾಲಿಯಾದ ಲಕ್ಷ್ಮಣನನ್ನು, ಅಖಿಲೈಃ=ಸಮಸ್ತವಾದ, ಸ್ವದೋರ್ಭಿಃ=ತನ್ನ ಇಪ್ಪತ್ತು ಭುಜಗಳಿಂದಲೂ, ಬಲಾತ್=ಬಲೋದ್ಬಂಧದಿಂದ, ಪರಿಗೃಹ್ಯ=ಗಟ್ಟಿಯಾಗಿ ಹಿಡಿದು, ಯದಾ=ಯಾವ ಕಾಲದಲ್ಲಿ, ಪ್ರಚಕರ್ಷ-ಅಲ್ಲಾಡಿಸಿದನೋ, ತದಾ-ಆ ಕಾಲದಲ್ಲಿ, ಸಸಾಗರಾ=ಸಮುದ್ರಗಳಿಂದ ಸಹಿತವಾದ, ಸಹ ಮೇರುಮಂದರಾ=ಮೇರು ಮತ್ತು ಮಂದರಾದಿ ಪರ್ವತಗಳಿಂದ ಸಹಿತವಾಗಿ, ಪೃಥ್ವೀ = ಭೂ ಮಂಡಲವು, ಚಚಾಲ = ಅಲ್ಲಾಡಿ ಹೋಯಿತು. ಲಕ್ಷ್ಮಣಶ್ಚ=ಲಕ್ಷ್ಮಣನು ಮಾತ್ರ, ನೈವಚಚಾಲ-ಅಲ್ಲಾಡಲೇ ಇಲ್ಲವು.

ತಾತ್ಪರ್ಯ:— ರಾವಣನು ಮೂರ್ಛಾಗತನಾಗಿದ್ದ ಲಕ್ಷ್ಮಣನನ್ನು ತನ್ನ ಮನೆಗೆ ಎತ್ತಿಕೊಂಡು ಹೋಗಬೇಕೆಂಬ ಇಚ್ಛೆಯಿಂದ ತನ್ನ ಇಪ್ಪತ್ತು ಬಾಹುಗಳಿಂದಲೂ ಗಟ್ಟಿಯಾಗಿ ಹಿಡಿದು ಎತ್ತಿದನು. ಆದರೆ ಲಕ್ಷ್ಮಣನು ಪರಮಾತ್ಮನ ಅಂಶ ಸಹಿತವಾದ ತನ್ನ ಆದಿಶೇಷ ರೂಪವನ್ನು ಸ್ಮರಣ ಮಾಡಿದ್ದರಿಂದ ಎತ್ತಲು ಸಾಧ್ಯವಾಗಲಿಲ್ಲ. ಆ ಶರೀರವನ್ನು ಅಲ್ಲಾಡಿಸುತ್ತಿರಲಾಗಿ ಚತುಃ ಸಮುದ್ರದಿಂದಲೂ, ಮೇರುಪರ್ವತ ಮತ್ತು ಮಂದರ ಪರ್ವತ ಮೊದಲಾದ ಮಹಾ ಪರ್ವತಗಳಿಂದ ಸಹಿತವಾದ ಭೂಮಂಡಲವೇ ಅಲ್ಲಾಡಿತು. ಲಕ್ಷ್ಮಣನು ಮಾತ್ರ ಸ್ವಲ್ಪವೂ ಚಲಿಸಲಿಲ್ಲ.

**ಶ್ಲೋಕ|| ಸಹಸ್ರ ಮೂರ್ಧ್ನೋಽಸ್ಯ ಬಲೈಕ ಮೂರ್ಧನಿ | ಸಸಪ್ತ ಪಾತಾಳ ಗಿರೀಂದ್ರ ಸಾಗರಾ | ಧರಾಖಿಲೇಯಂ ನನು ಸರ್ಷಪಾಯತೆ | ಪ್ರಸಹ್ಯ ಕೋನಾಮ ಹರೇತ್ತಮೇನಂ ||೮೮||**

ಅರ್ಥ:— ಸಹಸ್ರಮೂರ್ಧ್ನ = ಸಾವಿರ ತಲೆಗಳುಳ್ಳ, ಅಸ್ಯ=ಈ ಲಕ್ಷ್ಮಣನ ಮೂಲಭೂತನಾದ ಆದಿಶೇಷನ, ಏಕಮೂರ್ಧನಿ = ಒಂದೇ ತಲೆಯಲ್ಲಿ, ಸಸಪ್ತಪಾತಾಳ ಗಿರೀಂದ್ರಸಾಗರಾ=ಸಪ್ತಪಾತಾಳ-ಏಳು ಪಾತಾಳ ಲೋಕಗಳೂ, ಗಿರೀಂದ್ರ=ಸಮಸ್ತ ಪರ್ವತ ಶ್ರೇಷ್ಠಗಳೂ, ಸಾಗರ-ಚತುಃ ಸಮುದ್ರಗಳೂ, ಇವುಗಳಿಂದ ಸಹಿತವಾದ, ಇಯಂ=ಈ, ಅಖಿಲ=ಸಮಗ್ರವಾದ, ಧರಾ-ಭೂಮಿಯು, ಸರ್ಷಪಾಯತಿ=ಸಾಸುವೆ ಕಾಳಿನೋಪಾದಿಯಲ್ಲಿದೆಯೋ, ತಂ=ಅಂತಹ ಆದಿಶೇಷನ ಅಂಶಭೂತನಾದ, ಏನಂ=ಈ ಲಕ್ಷ್ಮಣನನ್ನು ಕೋನಾಮ=ಯಾರುತಾನೇ ಪ್ರಸಹ್ಯ=ಬಲಾತ್ಕಾರದಿಂದ ಹರೇತ್‌ನನು=ಅಪಹಾರ ಮಾಡಿಯಾರು ಬತ=ಆಶ್ಚರ್ಯವು.

ತಾತ್ಪರ್ಯ:—ಲಕ್ಷ್ಮಣನು ಮೂರ್ಛಾಗತನಾಗಿ ಬಿದ್ದಿರುವುದನ್ನು ಕಂಡು ಅವನನ್ನು ತನ್ನ ಮನೆಗೆ ಎತ್ತಿಕೊಂಡು ಹೋಗಲಪೇಕ್ಷಿಸಿ ತನ್ನ ಇಪ್ಪತ್ತು ತೋಳುಗಳಿಂದ ಬಿಗಿಯಾಗಿ ಹಿಡಿದು ಎತ್ತಲಾಗಿ ಆ ಲಕ್ಷ್ಮಣನ ಶರೀರವು ಅಲ್ಲಾಡಲೇ ಇಲ್ಲ. ಅದೇನು ಕಾರಣವೆಂದರೆ:—ಲಕ್ಷ್ಮಣನು ಸಾಕ್ಷಾತ್ ಶ್ರೀಸಂಕರ್ಷಣದೇವರ ಅಂಶಯುಕ್ತವಾದ ಆದಿಶೇಷಾವತಾರವಾಗಿರುವುದರಿಂದ ತನ್ನ ಮೂಲ ರೂಪವನ್ನು ಸ್ಮರಣೆಮಾಡಿದನು. ಆಗ ರಾವಣನು ಎತ್ತಬೇಕೆಂದು ತನ್ನ ಬಾಹುಗಳಿಂದ ಅಲ್ಲಾಡಿಸುವಲ್ಲಿ ವೃಕ್ಷ ಪರ್ವತ ಮಹಾ ಸಮುದ್ರಗಳಿಂದ ಸಹಿತವಾಗಿ ಈ ಭೂಮಿಯೇ ಅಲ್ಲಾಡಿತು ಆದಿಶೇಷನು ಸಹಸ್ರತಲೆಯುಳ್ಳವನು (ಸಹಸ್ರವದನಃ ಶೇಷಃ) ಈ ಸಹಸ್ರ ಶಿರಸ್ಸುಗಳ ಮಧ್ಯೆ ಒಂದು ತಲೆಯಲ್ಲಿಯೇ ಸಪ್ತ ಪಾತಾಳ ಲೋಕಗಳಿಂದಲೂ ಮೇರು ಮಂದರ ಮೊದಲಾದ ಪರ್ವತ ಬೆಟ್ಟ ಗುಟ್ಟಗಳಿಂದಲೂ ಮಹಾ ಚತುಃ ಸಮುದ್ರಗಳಿಂದಲೂ ಸಹಿತವಾದ ಭೂಲೋಕವು ಒಂದು ಸಣ್ಣ ಸಾಸುವೇ ಕಾಳಿನಷ್ಟು ಲಘುವಾಗಿ ತೋರುತ್ತಲಿದೆ. ಅಂತಹ ಮಹನೀಯ ಪರಾಕ್ರಮಶಾಲಿಯಾದ ಆದಿಶೇಷನ ಅಂಶನಾದ ಲಕ್ಷ್ಮಣನನ್ನು ಬಲಾತ್ಕಾರದಿಂದ ಅಪಹಾರಮಾಡಿಕೊಂಡು ಹೋಗಲು ಯಾರು ತಾನೇ ಶಕ್ತರಾದಾರು ? ಇಲ್ಲವೆಂದು ತಾತ್ಪರ್ಯ.

**ಶ್ಲೋಕ॥ ಪ್ರಕರ್ಷತಿತ್ವೇವ ನಿಶಾಚರೇಶ್ವರೇ । ತಥೈವ ರಾಮಾವರಜಂ ತ್ವರಾನ್ವಿತಃ ॥ ಸಮಸ್ತ ಜೀವಾಧಿಪತೇಃ ಪರಾತನುಃ ಸಮುತ್ಪಪಾತಾಸ್ಯ ಪುರೋಹನೂಮಾ್ ॥೮೯॥**

ಅರ್ಥ.—ನಿಶಾಚರೇಶ್ವರೇ=ರಾವಣನು, ರಾಮಾವರಜಂ=ಶ್ರೀರಾಮರ ತಮ್ಮನಾದ ಲಕ್ಷ್ಮಣನನ್ನು, ಪ್ರಕರ್ಷತಿತ್ವೇವ–ಎತ್ತುವ ಪ್ರಯತ್ನ ಮಾಡುತ್ತಿರುವಾಗ, ಸಮಸ್ತಜೀವಾಧಿಪತೇಃ=ಪ್ರಪಂಚದಲ್ಲಿನ ಸಮಸ್ತ ಜೀವನಿಯಾಮಕರಾದ, ಪರಾತನುಃ = ವಾಯುದೇವರ ಅವತಾರರಾದ, ಹನೂಮಾ್=ಹನುಮಂತದೇವರು, ತಥೈವ–ಪೂರ್ವದಂತೆಯೇ, ತ್ವರಾನ್ವಿತಃಸ=ಜಾಗ್ರತೆಯಿಂದ ಕೂಡಿದವರಾಗಿ, ಅಸ್ಯ=ಈ ರಾವಣನ, ಪುರಃ=ಮುಂಭಾಗಕ್ಕೆ, ಸಮುತ್ಪಪಾತ = ಹಾರಿಬಂದರು.

ತಾತ್ಪರ್ಯ:—ರಾವಣನು ಎತ್ತಿಕೊಂಡು ಹೋಗಬೇಕೆಂಬ ಉದ್ದೇಶದಿಂದ ಲಕ್ಷ್ಮಣನನ್ನು ಅಲ್ಲಾಡಿಸುತ್ತಿರಲು ಸಮಸ್ತಜೀವರಾಶಿಗಳಿಗೂ ನಿಯಾಮಕರಾದ ವಾಯುದೇವರ ಅವತಾರರಾದ ಹನುಮಂತರು ಹಿಂದಿನಂತೆ ರಾವಣನ ಎದುರಿಗೆ ಹಾರಿಬಂದು ನಿಂತರು.

ಶ್ಲೋಕ॥ ಸಮುಷ್ಟಿಮಾವೃತ್ಯಚ ವಜ್ರಕಲ್ಪಂ । ಜಘಾನ ತೇನೈವಚ ರಾವಣಂರುಷಾ ॥ ಪ್ರಸಾರ್ಯಬಾಹೂನಖಿಳೈರ್ಮುಖೈರ್ವಮನ್ । ಸ ರಕ್ತಮುಷ್ಣಂ ವ್ಯಸುವತ್ಪಪಾತ ॥೯೦॥

ಅರ್ಥ:—ಸಃ=ಹನುಮಂತರು, ವಜ್ರಕಲ್ಪಂ – ವಜ್ರಾಯುಧಕ್ಕೆ ಸಮಾನವಾದ ಮುಷ್ಟಿಯನ್ನು, ಆವೃತ್ಯಚ=ಚೆನ್ನಾಗಿ ತಿರಿಗಿಸಿ, ತೇನೈವಚ=ಅದೇ ಮುಷ್ಟಿಯಿಂದಲೇ, ರಾವಣಂ=ರಾವಣನನ್ನು, ರುಷಾ–ರೋಷದಿಂದ ಜಘಾನ=ಹೊಡೆದರು. ಸಚ=ಆ ರಾವಣನಾದರೋ, ಬಾಹೂನ್ = ತನ್ನ ಇಪ್ಪತ್ತು ತೋಳುಗಳನ್ನೂ, ಪ್ರಸಾರ್ಯ=ಚಾಚಿ, ಅಖಿಳೈಃ=ಸಮಸ್ತವಾದ ಹತ್ತು ಬಾಯಿಗಳಿಂದಲೂ, ಉಷ್ಣಂ= ಬಿಸಿಯಾದ, ರಕ್ತಂ = ರಕ್ತವನ್ನು, ವಮನ್=ಕಾರಿಕೊಂಡು, ವ್ಯಸುವತ್=ಗತಪ್ರಾಣವುಳ್ಳ ಶವದೋಪಾದಿಯಲ್ಲಿ ಪಪಾತ=ಬಿದ್ದನು.

ತಾತ್ಪರ್ಯ:—ಹನುಮಂತರು ರಾವಣನ ಎದುರಿಗೆ ಹಾರಿಬಂದು ವಜ್ರಾಯುಧಕ್ಕೆ ಸಮಾನವಾದ ತಮ್ಮ ಮುಷ್ಟಿಯನ್ನು ಚೆನ್ನಾಗಿ ತಿರುಗಿಸಿ ರಾವಣನನ್ನು ಗುದ್ದಿದರು. ರಾವಣನು ಆ ಪೆಟ್ಟಿನಿಂದು ತಕ್ಷಣವೇ ತನ್ನ ಇಪ್ಪತ್ತು ಕೈಗಳನ್ನೂ ಚಾಚಿ ಬಿಸಿ ರಕ್ತವನ್ನು ಕಾರಿ ಗತ ಪ್ರಾಣವಾದ ಶವದಹಾಗೆ ಬಿದ್ದನು.

ಶ್ಲೋಕ॥ ನಿಪಾತ್ಯ ರಕ್ಷೋಧಿಪತಿಂ ಸಮಾರುತಿಃ । ಪ್ರಗೃಹ್ಯ ಸೌಮಿತ್ರಿಮುರಂಗಶಾಯಿನಃ । ಜಗಾಮ ರಾಮಾಖ್ಯ ತನೋಃ ಸಮೀಪಂ । ಸೌಮಿತ್ರಿಮುದ್ಧರ್ತುಮಲಂಹ್ಯಸೌಪಿ ॥೯೧॥

ಅರ್ಥ:—ಸಃ=ಆ, ಮಾರುತಿಃ = ಹನುಮಂತರು, ರಕ್ಷೋಧಿಪತಿಂ–ರಾವಣನನ್ನು, ನಿಪಾತ್ಯ=ಬೀಳಿಸಿ, ಸೌಮಿತ್ರಿಂ–ಲಕ್ಷ್ಮಣನನ್ನು, ಪ್ರಗೃಹ್ಯ–ಎತ್ತಿಕೊಂಡು, ಉರಂಗಶಾಯಿನಃ–ಶೇಷಶಾಯಿಯಾದ, ರಾಮಾಖ್ಯ=ಶ್ರೀರಾಮನೆಂಬ ಹೆಸರಿನಿಂದ, ತನೋಃ=ಅವತರಿಸಿರುವ ಶ್ರೀರಾಮನ, ಸಮೀಪ

ಷಂ=ಸನ್ನಿಧಾನವನ್ನು ಕುರಿತು, ಜಾಗಮು–ದಯಮಾಡಿದರು. ಅಸೌಪಿ= ಈ ಹನುಮಂತರಾದರೋ, ಸೌಮಿತ್ರಿಂ=ಲಕ್ಷ್ಮಣನನ್ನು, ಉದ್ಧರ್ತುಂ= ಎತ್ತಲು, ಅಲಂ–ಚೆನ್ನಾಗಿ ಸಮರ್ಥರು.

ತಾತ್ಪರ್ಯ:—ಹನುಮಂತರು ರಾವಣನನ್ನು ಮುಷ್ಟಿ ಪ್ರಹಾರದಿಂದ ಹೊಡೆದು ಕೆಡವಿ ಮೂರ್ಛಾಗತನಾಗಿದ್ದ ಲಕ್ಷ್ಮಣನನ್ನು ಶೇಷಶಾಯಿಯಾದ ರಾಮರ ಸನ್ನಿಧಾನಕ್ಕೆ ಎತ್ತಿಕೊಂಡು ಹೋದರು. ( ಹನುಮಂತದೇವರು ತಾರತಮ್ಯದಲ್ಲಿ ವಾಯ್ವಾಂಶಭೂತರಾಗಿರುವುದರಿಂದ ಶೇಷ ಅಂಶನಾದ ಲಕ್ಷ್ಮಣನಿಗಿಂತಲೂ ಉತ್ತಮರು. ಆದ್ದರಿಂದ ಲಕ್ಷ್ಮಣನನನ್ನು ಎತ್ತಿಕೊಂಡು ಹೋಗಲು ಶಕ್ತರಾದರು. )

**ಶ್ಲೋಕ॥ ಸರಾಮಸಂಸ್ಪರ್ಶ ನಿವಾರಿತಕ್ಲಮಃ । ಸಮುತ್ಥಿತಸ್ತೇನ ಸಮುಧೃತೇಶರೇ ॥ ಬಭೌಯಥಾ ರಾಹುಮುಖಾತ್ಪ್ರಮುಕ್ತಃ । ಶಶೀಸುಪೂರ್ಣೋ ವಿಕಚತ್ಸ್ವರಶ್ಮಿಭಿಃ ॥೯೨॥**

ಅರ್ಥ:—ಸಃ=ಲಕ್ಷ್ಮಣನು, ರಾಮಸಂಸ್ಪರ್ಶ=ಶ್ರೀರಾಮರ ಸ್ಪರ್ಶಾನುಗ್ರಹದಿಂದ, ನಿವಾರಿತ=ಪರಿಹರಿಸಲ್ಪಟ್ಟ, ಕ್ಲಮಃಸ್ಸ= ಮೂರ್ಛೆಯುಳ್ಳವನಾಗಿ, ಸಮುತ್ಥಿತಃ=ಎಚ್ಚರಗೊಂಡನು. ತೇನ=ಆ ರಾಮರಿಂದ, ಶರೇ= ಲಕ್ಷ್ಮಣನ ಲಲಾಟದಲ್ಲಿ ನೆಟ್ಟಿದ್ದ ರಾವಣನ ಬಾಣವು, ಉದ್ಧೃತೇಸತಿ= ತೆಗೆದುಹಾಕಲ್ಪಡಲಾಗಿ, ರಾಹುಮುಖಾತ್–ರಾಹುಗ್ರಹದ ಮುಖದಿಂದ, ಪ್ರಮುಕ್ತಃ=ಬಿಡಲ್ಪಟ್ಟ, ಶಶೀ=ಚಂದ್ರನು, ಯಥಾ–ಯಾವ ರೀತಿಯಲ್ಲಿ, ವಿಕಚತ್–ವಿಕಾಸವಾದ, ಸ್ವರಶ್ಮಿಭಿಃ=ತನ್ನ ಕಿರಣಗಳಿಂದ, ಸಂಪೂರ್ಣಃ= ಸಂಪೂರ್ಣ ಕಳಾಯುಕ್ತನಾಗುತ್ತಾನೆಯೋ, ತಥೈವ=ಅದೇ ಪ್ರಕಾರವಾಗಿ ( ಲಕ್ಷ್ಮಣನು ) ಬಭೌ=ಪ್ರಕಾಶಿಸಿದನು.

ತಾತ್ಪರ್ಯ:—ಮೂರ್ಛಾಗತನಾಗಿದ್ದ ಲಕ್ಷ್ಮಣನನ್ನು ಹನುಮಂತದೇವರು ಶ್ರೀರಾಮರ ಸನ್ನಿಧಾನಕ್ಕೆ ಎತ್ತಿಕೊಂಡು ಬಂದಕೂಡಲೇ ಶ್ರೀರಾಮರು ಲಕ್ಷ್ಮಣನನ್ನು ದಯಾಪೂರ್ವಕವಾಗಿ ಸ್ಪರ್ಶಮಾಡಿದರು. ಅವರ ಹಸ್ತದ ಸ್ಪರ್ಶಮಾತ್ರದಿಂದ ಲಕ್ಷ್ಮಣನು ಎಚ್ಚರಗೊಂಡನು. ಅನಂತರ ಲಕ್ಷ್ಮಣನ ಲಲಾಟದಲ್ಲಿ ರಾವಣನಿಂದ ಪ್ರಯೋಗಿಸಿ ನಟ್ಟಿದ್ದ ಬಾಣವನ್ನು ಶ್ರೀರಾಮರು ತೆಗೆದುಹಾಕಿದರು, ಒಡನೆಯೇ ಲಕ್ಷ್ಮಣನು ರಾಹುಗ್ರಸ್ತ

ನಾಗಿದ್ದು ಬಿಡುಗಡೆಯಾದ (ಗ್ರಹಣಮುಕ್ತನಾದ) ಚಂದ್ರನು ತನ್ನ ರಶ್ಮಿಗಳನ್ನು ಪ್ರಸರಿಸಿ ಷೋಡಶ ಕಳೆಯಿಂದ ಪೂರ್ಣನಾಗಿ ಪ್ರಕಾಶಿಸುವಹಾಗೆ ಪರಮ ತೇಜೋ ಪೂರ್ಣನಾಗಿ ಪ್ರಕಾಶಿಸಿದನು.

**ಶ್ಲೋಕ॥ ಸಶೇಷ ಭೋಗಾಭ ಮಥೋಜನಾರ್ದನಃ । ಪ್ರಗೃಹ್ಯ ಚಾಪಂ ಸ ಶರಂ ಪುನಶ್ಚ ॥ ಸುಲಬ್ಧ ಸಂಜ್ಞಂ ರಜನೀಚರೇಶಂ । ಜಗಾದ ಸಜ್ಜೀಭವ ರಾವಣೇತಿ ॥೯೩॥**

ಅರ್ಥ:—ಅಥ-ಅನಂತರದಲ್ಲಿ, ಸಃ-ಆ, ಜನಾರ್ದನಃ- (ದುರ್ಜನ ಶಿಕ್ಷಾರ್ಥವಾಗಿ ಅವತಾರಮಾಡಿರುವ) ಶ್ರೀರಾಮಚಂದ್ರದೇವರು, ಸಶರಂ ಬಾಣಗಳಿಂದ ಸಹಿತವಾದ, ಶೇಷಭೋಗ=ಆದಿಶೇಷನ ಶರೀರದೋಪಾದಿಯಲ್ಲಿ, ಅಭಂ-ಪ್ರಕಾಶಮಾನವಾದ, ಚಾಪಂ-ಧನುಃಸ್ಸನ್ನು, ಪ್ರಗೃಹ್ಯ= ತೆಗೆದುಕೊಂಡು, ಪುನಶ್ಚ-ತಿರುಗೀ, ಸುಲಬ್ಧಸಂಜ್ಞಂ – ಚೆನ್ನಾಗಿ ಪ್ರಜ್ಞೆ ಹೊಂದಿದ್ದ, ರಜನೀಚರೇಶಂ=ರಾವಣನನ್ನು ಕುರಿತು, ಹೇ! ರಾವಣ=ಎಲೌ ರಾವಣನೇ, ಸಜ್ಜೀಭವ=ಯುದ್ಧಕ್ಕೆ ಸಿದ್ಧನಾಗು, ಇತಿ-ಈ ಪ್ರಕಾರವಾಗಿ, ಜಗಾದ=ಹೇಳಿದರು.

ತಾತ್ಪರ್ಯ:—ಲಕ್ಷ್ಮಣನು ಮೂರ್ಛೆಯಿಂದ ಎಚ್ಚರಗೊಂಡನಂತರ ಶ್ರೀರಾಮರು ಬಾಣಗಳಿಂದ ಸಹಿತವಾದ ಆದಿಶೇಷನ ದೇಹಕ್ಕೆ ಸಮಾನವಾದ ಧನುಃಸ್ಸನ್ನು ತೆಗೆದುಕೊಂಡು ಮೂರ್ಛೆಯಿಂದ ಎಚ್ಚರವಾಗಿದ್ದ ರಾವಣನನ್ನು ಕುರಿತು ಪುನಃ ಯುದ್ಧಕ್ಕೆ ಸಿದ್ಧನಾಗೆಂದು ಹೇಳಿದರು.

**ಶ್ಲೋಕ॥ ರಥಂಸಮಾರುಹ್ಯ ಪುನಃಸಕಾರ್ಮುಕಃ । ಸಮಾರ್ಗಣೋ ರಾವಣ ಅಶುರಾಮಂ ॥ ಅಭ್ಯೇತ್ಯಸರ್ವಾಂಶ್ಚ ದಿಶಶ್ಚಕಾರ । ಶರಾಂಧಕಾರಾಃ ಪರಮಾಸ್ತ್ರವೇತ್ತಾ ॥೯೪॥**

ಅರ್ಥ:—ಸಕಾರ್ಮುಕಃ=ಧನುಸ್ಸಿನಿಂದಲೂ, ಸಮಾರ್ಗಣಃ=ಬಾಣಗಳಿಂದಲೂ ಸಹಿತನಾದ, ರಾವಣಃ-ರಾವಣನು, ಪುನಃ=ತಿರುಗೀ, ರಥಂ= ರಥವನ್ನು, ಸಮಾರುಹ್ಯ=ಏರಿ, ರಾಮಂ=ಶ್ರೀರಾಮರನ್ನು ಕುರಿತು, ಅಭ್ಯೇತ್ಯ-ಬಂದು, ಪರಮಾಸ್ತ್ರವೇತ್ತಾ=ಮಹಾಸ್ತ್ರಗಳನ್ನು ತಿಳಿದವನಾದ್ದರಿಂದ, ಸರ್ವಾ=ಸಮಸ್ತವಾದ, ದಿಶಶ್ಚ=ದಿಕ್ಕುಗಳನ್ನೂ, ಶರಾಂಧಕಾರಾಃ=ಬಾಣಗಳಿಂದ ಕತ್ತಲು ಕವಿಯುವಂತೆ, ಚಕಾರ=ಮಾಡಿದನು.

ತಾತ್ಪರ್ಯ:— ಶ್ರೀರಾಮರು ರಾವಣನನ್ನು ಯುದ್ಧಕ್ಕೆ ಸಿದ್ಧನಾಗೆಂದು ಹೇಳಿದ ಕೂಡಲೆ ಬಾಣಗಳಿಂದಲೂ ಧನುಃಸ್ಸಿನಿಂದಲೂ ಸಹಿತವಾದ ರಥಾರೂಢನಾಗಿ ಯುದ್ಧಕ್ಕೆ ಬಂದನು. ಮಹಾಸ್ತ್ರಜ್ಞನಾದ ರಾವಣನು ವಿಶೇಷವಾಗಿ ಬಾಣಪ್ರಯೋಗಮಾಡಿ ಸಮಸ್ತ ದಿಕ್ಕುಗಳನ್ನೂ ಬಾಣಮಯವಾಗಿ ಕತ್ತಲೆಯನ್ನಾಗಿಮಾಡಿದನು.

**ಶ್ಲೋಕ॥ ರಥೇ ಸ್ಥಿತೇಸ್ಮಿನ್ ರಜನೀಚರೇಶೇ। ನಮೇಽಪತಿ ರ್ಭೂವಿತಲೇ ಸ್ಥಿತಃಸ್ಯಾತ್ ॥ ಇತಿಸ್ಮ ಪುತ್ರಃ ಪವನಸ್ಯ ರಾಮಂ। ಸ್ಕಂಧಂಸಮಾರೋಪ್ಯ ಯಯೌಚರಾಕ್ಷಸಂ ॥೯೫॥**

ಅರ್ಥ:—ರಜನೀಚರೇಶೇ=ರಾಕ್ಷಸಾಧಿಪನಾದ, ಅಸ್ಮಿನ್=ಈ ರಾವಣನು, ರಥೇ=ರಥದಲ್ಲಿ, ಸ್ಥಿತೇಸತಿ=ಇರುತ್ತಿರಲಾಗಿ, ಮೇಽಪತಿಃ=ನನ್ನ ಸ್ವಾಮಿಯಾದ ಶ್ರೀರಾಮರು, ಭೂವಿತಲೇ–ನೆಲದಲ್ಲಿ, ಸ್ಥಿತಃ – ಇರತಕ್ಕದ್ದು, ನಸ್ಯಾತ್ = ಸರಿಯಲ್ಲ, ಇತಿ = ಹೀಗೆಂದು ಭಾವಿಸಿ, ಪವನಸ್ಯಪುತ್ರಃ= ಹನುಮಂತದೇವರು, ರಾಮಂ= ಶ್ರೀರಾಮನನ್ನು, ಸ್ಕಂಧಂ = ತನ್ನ ಹೆಗಲ ಮೇಲೆ, ಸಮಾರೋಪ್ಯ = ಕೂಡಿಸಿಕೊಂಡು, ರಾಕ್ಷಸಂಪ್ರತಿ = ರಾವಣನ ಎದುರಿಗೆ, ಯಯೌಸ್ಮ=ಹೊರಟನು.

ತಾತ್ಪರ್ಯ:—ರಾವಣನು ರಥವಲ್ಲಿ ಕುಳಿತು ಬಂದದ್ದನ್ನು ನೋಡಿ ಹನುಮಂತನು ತನ್ನ ಅಧಿಪತಿಯಾದ ಶ್ರೀರಾಮನು ನೆಲದಲ್ಲಿರತಕ್ಕದ್ದು ಸರಿಯಲ್ಲವೆಂದು ಭಾವಿಸಿ ತನ್ನ ಹೆಗಲಮೇಲೆ ಶ್ರೀರಾಮನನ್ನು ಕೂಡಿಸಿಕೊಂಡು ರಾವಣನ ಎದುರಿಗೆ ಹೋದನು.

**ಶ್ಲೋಕ॥ ಪ್ರಹಸ್ಯ ರಾಮೋಽಸ್ಯ ಹಯಾನ್ನಿಹತ್ಯ। ಸೂತಂಚ ಕೃತ್ವಾ ತಿಲಶೋ ಧ್ವಜಂ ರಥಂ ॥ ಧನೂಂಷಿ ಖಡ್ಗಾನ್ ಸಕಲಾಯುಧಾನಿ। ಛತ್ರಂಚ ಸಂಭಿದ್ಯ ಚಕರ್ತ ಮೌಳಿಂ ॥೯೬॥**

ಅರ್ಥ:—ರಾಮಃ=ಶ್ರೀರಾಮನು, ಪ್ರಹಸ್ಯ–ಮಂದಹಾಸಯುಕ್ತನಾಗಿ, ಅಸ್ಯ–ಈ ರಾವಣನ, ಹಯಾನ್ = ಕುದುರೆಗಳನ್ನೂ, ಸೂತಂಚ–ಸಾರಥಿಯನ್ನೂ ಕೂಡ, ನಿಹತ್ಯ–ಸಂಹಾರಮಾಡಿ, ರಥಂ = ರಥವನ್ನೂ, ಧ್ವಜಂ=ಪತಾಕೆಯನ್ನೂ, ಧನೂಂಷಿ=ಧನುಃಸ್ಸುಗಳನ್ನೂ, ಖಡ್ಗಾನ್ – ಖಡ್ಗಾಯುಧಗಳನ್ನೂ, ಸಕಲ=ಸಮಸ್ತವಾದ, ಆಯುಧಾನಿಚ=ಆಯುಧಗಳ

ನ್ನೂ ಸಹ, ತಿಲಶಃ = ತಿಲ ಸಮಾನವಾಗಿ ( ಚೂರುಚೂರಾಗಿ ) ಕೃತ್ವಾ= ಮಾಡಿ, ಛತ್ರಂ – ರಾವಣನ ಶ್ವೇತ ಛತ್ರವನ್ನು, ಸಂಭಿದ್ಯ – ಹರಿದು, ಮೌಳಿಂ- ಕಿರೀಟವನ್ನು. ಚಕರ್ತಚ-ಕತ್ತರಿಸಿಹಾಕಿದನು.

ತಾತ್ಪರ್ಯ:—ಶ್ರೀರಾಮನು ರಾವಣನ ಸಂಗಡ ಯುದ್ಧಕ್ಕಾಗಿ ಹನುಮಂತನ ಹೆಗಲೇರಿ ಮಂದಹಾಸದಿಂದ ನೋಡಿ ನಕ್ಕನು ರಾವಣನ ಕುದುರೆ ಸಾರಥಿಗಳನ್ನು ಸಂಹಾರಮಾಡಿ ಅವನ ರಥ ಧ್ವಜ ಧನುಸ್ಸುಗಳು ಖಡ್ಗಾಯುಧಗಳು ಮತ್ತು ಅವನ ಸಮಸ್ತ ಆಯುಧಗಳನ್ನೂ ತಿಲ ಸಮನಾಗಿ ಚೂರ್ಣವನ್ನಾಗಿ ಮಾಡಿ ಛತ್ರಿಯನ್ನು ಹರಿದು ಕಿರೀಟವನ್ನು ಸಹ ಛೇದನ ಮಾಡಿದನು.

**ಶ್ಲೋಕ|| ಕರ್ತವ್ಯಮೂಢಂ ತಮವೇಕ್ಷ್ಯ ರಾಮಃ | ಪುನರ್ಜಗಾದಾಶು ಗೃಹಂ ಪ್ರಯಾಹಿ || ಸಮಸ್ತ ಭೋಗಾನನುಭೂಯ ಶೀಘ್ರಂ | ಪ್ರತೋಷ್ಯ ಬಂಧೂನ್ ಪುನರೇಹಿ ಮರ್ತುಂ ||೯೭||**

ಅರ್ಥ:—ರಾಮಃ= ಶ್ರೀರಾಮನು, ಕರ್ತವ್ಯಮೂಢಂ–ಮುಂದೆ ಏನು ಮಾಡಬೇಕೆಂಬ ವಿವೇಕವಿಲ್ಲದೆ ಇರುವ, ತಂ=ಆ ರಾವಣನನ್ನು, ಅವೇಕ್ಷ್ಯ= ನೋಡಿ, ( ಹೇ ! ರಾವಣ= ರಾವಣನೇ, ತ್ವಂ–ನೀನು ) ಗೃಹಂ=ಮನೆಗೆ, ಪ್ರಯಾಹಿ=ಹೋಗಿ, ಸಮಸ್ತಭೋಗಾನ್=ಅನುಭವಿಸಲಪೇಕ್ಷೆಯುಳ್ಳ ಸಮಸ್ತ ಸುಖಗಳನ್ನೂ, ಅನುಭೂಯ–ಅನುಭವಿಸಿ, ಬಂಧೂನ್=ನಿನ್ನ ಇಷ್ಟಮಿತ್ರರನ್ನು, ಪ್ರತೋಷ್ಯ=ಸಂತೋಷಪಡಿಸಿ, ಮರ್ತುಂ=ಮರಣವನ್ನು ಹೊಂದುವದಕ್ಕೆ, ಪುನಃ–ತಿರುಗಿ, ಆಶು=ಜಾಗ್ರತೆಯಾಗಿ, ಏಹಿ=ಹೊರಟು ಬಾ ಇತಿ=ಹೀಗೆಂದು, ಜಗಾದ=ಹೇಳಿದನು.

ತಾತ್ಪರ್ಯ:—ಸಾರಥಿ ಸಹಿತವಾಗಿ ರಥಾದಿಗಳನ್ನು ಕಳೆದುಕೊಂಡು ಖಿನ್ನನಾಗಿ ಏನೂ ತೋಚದೆ ಇರತಕ್ಕ ರಾವಣನನ್ನು ಕುರಿತು ಶ್ರೀರಾಮನು ಹೇಳುತ್ತಾನೆ:— ಎಲೌ ! ರಾವಣ, ನೀನು ಮನೆಗೆ ಹೋಗಿ ನಿನಗೆ ಅಪೇಕ್ಷಿತವಾದ ಭೋಗಾದಿಗಳನ್ನು ಅನುಭವಿಸಿ ನಿನ್ನ ಬಂಧು ಮಿತ್ರರನ್ನು ಸಂತೋಷಪಡಿಸಿ ನನ್ನಿಂದ ಮರಣವನ್ನು ಹೊಂದುವುದಕ್ಕಾಗಿ ಜಾಗ್ರತೆಯಾಗಿ ಬಾ.

**ಶ್ಲೋಕ|| ಇತೀರಿತೋಽ ವಾಗ್ವದನೋಽಯಯೌ ಗೃಹಂ | ವಿಚಾರ್ಯ ಕಾರ್ಯಂ ಸಹಮಂತ್ರಿಭಿಃ ಸ್ವಕೈಃ || ಹತಾವಶೇಷೈ ರಥ ಕುಂಭಕರ್ಣ ಪ್ರಬೋಧನಂ ರಾಕ್ಷಸಮುಖ್ಯಶ್ಚಕಾರ ||೯೮||**

ಅರ್ಥ:— ಇತಿ=ಈ ರೀತಿಯಾಗಿ, ಈರಿತಃ = ಹೇಳಿಸಿಕೊಳ್ಳಲ್ಪಟ್ಟ ರಾವಣನು, ಅವಾಗ್ವದನಃಶ್ಚ= ಕೆಳಗೆ ಬೊಗ್ಗಿಸಿದ ಮುಖವುಳ್ಳವನಾಗಿ, ಗೃಹಂ=ಮನೆಯನ್ನು ಕುರಿತು, ಯಯೌ = ಹೊರಟುಹೋದನು. ಅಥ= ಅನಂತರ, ಹತಾವಶೇಷೈಃ-ಹತ=ನಾಶವಾದವರು ಹೋಗಲು, ಅವಶೇಷೈಃ =ಉಳಿದ, ಸ್ವಕೈಃ=ತನ್ನ, ಮಂತ್ರಿಭಿಃ=ಮಂತ್ರಿಗಳಿಂದ, ಸಹ – ಕೂಡಿ, ಕಾರ್ಯಂ-ಮುಂದೆಮಾಡಬೇಕಾದ ಕರ್ತವ್ಯವನ್ನು, ವಿಚಾರ್ಯ = ವಿಚಾರ ಮಾಡಿ, ಆಶು=ಜಾಗ್ರತೆಯಾಗಿ, ಕುಂಭಕರ್ಣಪ್ರಬೋಧನಾಯ=ಕುಂಭಕ ರ್ಣನನ್ನು ನಿದ್ದೆಯಿಂದ ಎಬ್ಬಿಸುವದಕ್ಕಾಗಿ, ಮತಿಂ = ಮನಸ್ಸನ್ನು, ಚಕಾರ=ಮಾಡಿದನು.

ತಾತ್ಪರ್ಯ:— ಈ ರೀತಿಯಾಗಿ ಶ್ರೀರಾಮನು ಹೇಳಿದೊಡನೆಯೇ ರಾವಣನು ತಗ್ಗಿಸಿದ ಮುಖವುಳ್ಳವನಾಗಿ ತನ್ನ ಮನೆಗೆ ಹೊರಟುಹೋದನು. ಅಲ್ಲಿ ಹತರಾದವರು ಹೋಗುತ ಉಳಿದಿದ್ದ ಮಂತ್ರಿಗಳಿಂದ ಸಹಿತನಾಗಿ ಮುಂದೆ ಮಾಡಬೇಕಾದ ಕಾರ್ಯಗಳನ್ನು ಯೋಚಿಸಿ, ನಿದ್ರೆ ಮಾಡುತ್ತಿದ್ದ ತನ್ನ ಸಹೋದರನಾದ ಕುಂಭಕರ್ಣನನ್ನು ಜಾಗ್ರತೆಯಾಗಿ ಎಚ್ಚರಗೊಳಿಸು ವುದಕ್ಕೆ ಮನಸ್ಸುಮಾಡಿದನು.

**ಶ್ಲೋಕ|| ಸಶೈಲ ಶೃಂಗಾಸಿ ಪರಶ್ವಧಾಯುಧೈಃ | ನಿಶಾಚರಾಣಾಮಯು**
**ತೈರನೇಕೈಃ || ತಛ್ವಾಸ ವೇಗಾಭಿಹತೈಃ ಕಥಂಚಿ | ಧ್ಗತೈಃ ಸಮೀ**
**ಪಂ ಕಥಮಪ್ಯಭೋದಯತ್ ||೯೯||**

ಅರ್ಥ:— ಶೈಲಶೃಂಗ=ಪರ್ವತ ಶಿಖರಗಳೂ, ಆಸಿ= ಖಡ್ಗಾಯುಧಗ ಳೂ, ಪರಶ್ವಧ=ಕುಠಾರಗಳು, ಈ ವಿಧವಾದ ಆಯುಧಗಳಿಂದ ಸಹಿತರಾದ ನಿಶಾಚರಾಣಾಂ=ರಾಕ್ಷಸರ, ಆಯುತೈಃ = ಹತ್ತು ಸಹಸ್ರ ಸಂಖ್ಯೆಗಳಿಂದ, ತಛ್ವಾಸವೇಗಾಭಿಹತೈಃ=ತಛ್ವಾಸ=ಆ ಕುಂಭಕರ್ಣನ ಉಸುರು ಬಿಡುವಿಕೆ ಯ, ವೇಗ=ರಭಸದಿಂದ, ಅಬಿಪತೈಃ-ತಾಡಿತರಾಗಿ, ಸಮೀಪಂ=ಕುಂಭ ಕರ್ಣನ ಸಮೀಪವನ್ನು, ಕಥಂಚಿತ್-ಮಹಾ ಪ್ರಯತ್ನದಿಂದ, ಗತೈಃ= ಹೊಂದಿರತಕ್ಕ, ಅನೇಕೈಃ=ಬಹು ಸಂಖ್ಯಾಕರಾದ ರಾಕ್ಷಸರಿಂದ, ಕಥಮಪಿ= ಬಹು ಕಷ್ಟದಿಂದ, ಅಭೋದಯತ್ = ಕುಂಭಕರ್ಣನು ಎಚ್ಚರಗೊಳಿಸ ಲ್ಪಟ್ಟನು.

ತಾತ್ಪರ್ಯ:—ಪರ್ವತ ಶಿಖರಗಳೂ ಕತ್ತಿಗಳೂ ಇವುಗಳಿಂದ ಸಹಿತರಾದ ಹತ್ತು ಸಹಸ್ರ ಸಂಖ್ಯಾಕರಾದ ರಾಕ್ಷಸರು ಕುಂಭಕರ್ಣನ ಶ್ವಾಸೋಛ್ವಾಸದ ರಭಸದಿಂದ ಹತರಾಗುತ್ತಿದ್ದಾಗ್ಯೂ ಮಹಾ ಕಷ್ಟದಿಂದ ಅವನ ಸಮೀಪಕ್ಕೆ ಹೋಗಿ ಅವನನ್ನು ಎಚ್ಚರಗೊಳಿಸಿದರು.

**ಶ್ಲೋಕ॥ ಶೈಲೋಪಮಾನಸ್ಯತುಮಾಂಸರಾಶೀ । ನ್ವಿಧಾಯ ಭಕ್ಷಾನಪಿಶೋಣಿತಹ್ರದಾ‌ನ್॥ ಸುತೃಪ್ತಮೇನಂ ಪರಮಾದರೇಣ । ಸಮಾಹ್ವಯಾಮಾಸ ಸಭಾತಲಾಯ ॥೧೦೦॥**

ಅರ್ಥ.—ಶೈಲೋಪಮಾನಸ್ಯತು-ಪರ್ವತಕ್ಕೆ ಸಮಾನವಾದ, ಮಾಂಸರಾಶೀ-ಮಾಂಸದ ರಾಶಿಗಳನ್ನೂ, ಭಕ್ಷಾನ್=ಭಕ್ಷ್ಯಗಳನ್ನೂ, ಶೋಣಿತಹ್ರದಾನಪಿ=ರಕ್ತದ ಮಡುಹುಗಳನ್ನೂ, ವಿಧಾಯ-ಸಿದ್ಧಮಾಡಿ, ಸುತೃಪ್ತಂ ಇವುಗಳನ್ನು ತಿಂದು ಚೆನ್ನಾಗಿ ತೃಪ್ತನಾದ, ಏನಂ=ಈ ಕುಂಭಕರ್ಣನನ್ನು ಪರಮಾದರೇಣ-ಅತ್ಯಂತ ಸನ್ಮಾನದಿಂದ, ಸಭಾತಲಾಯ=ರಾವಣನ ಸಭಾಸ್ಥಾನಕ್ಕೆ, ಸಮಾಹ್ವಯಾಮಾಸ-ಕರೆದುಕೊಂಡು ಹೋದರು.

ತಾತ್ಪರ್ಯ.—ಪರ್ವತಕ್ಕೆ ಸಮಾನವಾದ ಮಾಂಸದರಾಶಿಗಳನ್ನೂ ರಕ್ತದ ಮಡುಹುಗಳನ್ನೂ ಸಿದ್ಧಪಡಿಸಿದ್ದರು. ಅವುಗಳನ್ನು ತಿಂದು ಕುಡಿದು ತೃಪ್ತನಾದನಂತರ ಅವನನ್ನು ಪರಮ ಮರ್ಯಾದೆಯಿಂದ ರಾವಣನ ಸಭಾಸ್ಥಾನಕ್ಕೆ ಕರೆತಂದರು.

**ಶ್ಲೋಕ॥ ಉವಾಚಚೈನಂ ರಜನೀಚರೇಂದ್ರಃ। ಪರಾಜಿತೋಽಸ್ಮ್ಯದ್ಯಹಿ ಜೀವತಿತ್ವಯಿ ॥ ರಣೇ ನರೇಣೈವಹಿ ರಾಮನಾಮ್ನಾ । ಕುರುಷ್ವ ಮೇ ಪ್ರೀತಿ ಮಮುಂ ನಿಹತ್ಯ ॥೧೦೧॥**

ಅರ್ಥ:—ರಜನೀಚರೇಂದ್ರಃ=ರಾಕ್ಷಸೇಶ್ವರನಾದ ರಾವಣನು, ಏನಂ ಪ್ರತಿ-ಕುಂಭಕರ್ಣನನ್ನು ಕುರಿತು, ತ್ವಯಿ=ನೀನು, ಜೀವತಿಸತಿ=ಬದುಕಿರಲಾಗಿಯೇ, ಅದ್ಯ-ಈಗಲೇ, (ಅಹಂ=ನಾನು) ರಾಮನಾಮ್ನಾ-ರಾಮನಾಮಕನಾದ, ನರೇಣೈವಹಿ-ಮನುಷ್ಯ ಮಾತ್ರದವನಿಂದ, ರಣೇ=ಯುದ್ಧದಲ್ಲಿ, ಪರಾಜಿತೋಽಸ್ಮಿ=ಸೋತುಹೋದವನಾದೆನು, (ತ್ವ=ನೀನು)ಅಮುಂ=ಈ ಮನುಷ್ಯಮಾತ್ರದವನಾದ ರಾಮನನ್ನು, ನಿಹತ್ಯ - ಸಂಹಾರಮಾಡಿ, ಮೇ=ನನಗೆ, ಪ್ರೀತಿಂ=ಸಂತೋಷವನ್ನು, ಕುರುಷ್ವ = ಉಂಟುಮಾಡು, ಇತಿ=ಹೀಗೆಂದು, ಉವಾಚ=ಹೇಳಿದನು.

ತಾತ್ಪರ್ಯ:—ಕುಂಭಕರ್ಣನು ಸಭಾಸ್ಥಾನಕ್ಕೆ ಬಂದನಂತರ ರಾವಣನು ಅವನನ್ನು ಕುರಿತು ನೀನು ಬದುಕಿಸ್ಪ ಹಾಗೆಯೇ ನಾನು ಮನುಷ್ಯಮಾತ್ರದವನಾದ ರಾಮನಿಂದ ಈಗ ರಣದಲ್ಲಿ ಸೋತು ಹೋದೆನು. ನೀನು ಆ ರಾಮನನ್ನು ಸಂಹರಿಸಿ ನನಗೆ ಸಂತೋಷವನ್ನುಂಟುಮಾಡೆಂದು ರಾವಣನು ಕುಂಭಕರ್ಣನಿಗೆ ಹೇಳಿದನು.

**ಶ್ಲೋಕ॥ ಇತೀರಿತಃ ಕಾರಣಮಪ್ಯಶೇಷಂ । ಶ್ರುತ್ವಾ ಜಗರ್ಹಾಗ್ರಜಮೇನ ವೀರಃ ॥ ಅಮೋಘವೀರ್ಯೇಣ ರಘೂತ್ತಮೇನ । ತ್ವಯಾ ವಿರೋಧಶ್ಚರಿತೋ ಬತಾದ್ಯ ॥೧೦೩॥**

ಅರ್ಥ:—ಇತಿ=ಈ ಪ್ರಕಾರವಾಗಿ, ಈರಿತಃ=ಹೇಳಿಸಿಕೊಳ್ಳಲ್ಪಟ್ಟ, ವೀರಃ=ಪರಾಕ್ರಮಶಾಲಿಯಾದ ಕುಂಭಕರ್ಣನು, ಅಶೇಷಂ=ಸಮಸ್ತ ಆನುಪೂರ್ವಿಯಾದ, ಕಾರಣಂ=ಕಾರಣವನ್ನು, ಶ್ರುತ್ವಾ=ಕೇಳಿ, ಅಗ್ರಜಮೇನ=ತನ್ನ ಅಣ್ಣನಾದ ರಾವಣನನ್ನೇ, ಜಗರ್ಹ=ಜರಿದನು (ಗದರಿಸಿದನು) ಅದ್ಯ=ಈಗ, ಅಮೋಘವೀರ್ಯೇಣ=ಅಪರಿಮಿತ ವೀರರಾದ, ರಘೂತ್ತಮೇನ=ರಾಮರ ಸಂಗಡ, ತ್ವಯಾ=ನಿನ್ನಿಂದ, ವಿರೋಧಃ=ದ್ವೇಷವು, ಚರಿತಶ್ಚ=ಮಾಡಲ್ಪಟ್ಟಿತು. ಇತಿ = ಹೀಗೆಂದು, ಜಗರ್ಹ = ಗದರಿಸಿದನು, ಬತ – ಕಷ್ಟವು.

ತಾತ್ಪರ್ಯ:— ರಾವಣನು ಮಹಾ ಪ್ರಯತ್ನದಿಂದ ನಿದ್ರಿತನಾಗಿದ್ದ ತನ್ನ ತಮ್ಮನಾದ ಕುಂಭಕರ್ಣನನ್ನು ಎಚ್ಚರಗೊಳಿಸಿ ಮಹಾ ಗೌರವ ಪೂರ್ವಕವಾಗಿ ಆವನನ್ನು ಸಭೆಗೆ ಬರಮಾಡಿಕೊಂಡು ಅದುವರೆವಿಗೆ ನಡೆದಿದ್ದ ವೃತ್ತಾಂತವನ್ನು ತಿಳಿಸಿದನು. ಅದೆಲ್ಲವನ್ನೂ ಕೇಳಿ ಮಹಾಪರಾಕ್ರಮಶಾಲಿಯಾದ ಕುಂಭಕರ್ಣನು ರಾವಣನು ತನಗೆ ಹಿರಿಯಣ್ಣನಾದಾಗ್ಯೂ ಅವನನ್ನು ಕುರಿತು ನೀನು ಅಪರಿಮಿತ ಬಲಶಾಲಿಯಾದ ಶ್ರೀರಾಮನಲ್ಲಿ ಬಹು ವಿರೋಧವಾದ ಕಾರ್ಯಗಳನ್ನು ಮಾಡಿ ಅವರ ಸಂಗಡ ದ್ವೇಷ ಸಂಪಾದಿಸಿದೆ, ಇದರ ಪರಿಣಾಮವು ಬಹು ಕಷ್ಟತರವಾಗುವುದು ಎಂದು ಅಗ್ರಜನಾದ ರಾವಣನನ್ನೇ ಜರಿದನು.

**ಶ್ಲೋಕ॥ ಪ್ರಶಸ್ಯತೇನೋ ಬಲಿಭಿರ್ವಿರೋಧಃ । ಕಥಂಚಿ ದೇಷೋತಿಬಲೋ ಮತೋಮಮ॥ ಇತೀರಿತೋ ರಾವಣ ಆಹ ದುರ್ನಯೋ । ಪ್ಯಹಂ ತ್ವಯಾ ವ್ಯೋಹಿ ಕಿಮನ್ಯಥಾತ್ವಯಾ ॥೧೦೩॥**

ಅರ್ಥ:— ಏಷಃ= ಈ ರಾಮರು, ಕಥಂಚಿತ್=ಹ್ಯಾಗೂ, ಅತಿಬಲಃ =ಅತ್ಯಂತ ಬಲಿಷ್ಟರು, ಇತಿ=ಹೀಗೆಂದು,) ಮಮ=ನನ್ನ, ಮತಃ – ಅಭಿಪ್ರಾಯವು, ಬಲಿಭಿಃ=ಬಲಿಷ್ಟರ ಸಂಗಡ, ವಿರೋಧಃ=ಶತೃತ್ವವು, ಕಥಂಚಿತ್= ಯಾವ ರೀತಿಯಿಂದಲೂ, ನೋಪ್ರಶಸ್ಯತೇ=ಯೋಗ್ಯವಲ್ಲವು, ಇತಿ= ಈ ಪ್ರಕಾರ, ಈರಿತಃ=ಕುಂಭಕರ್ಣನಿಂದ ಹೇಳಿಸಿಕೊಳ್ಳಲ್ಪಟ್ಟ, ರಾವಣಃ= ರಾವಣನು (ಹೇಳುತ್ತಾನೆ) ಅಹಂ=ನಾನು, ದುರ್ನಯೋಪಿ=ದುರ್ನೀತಿಯುಳ್ಳವನೇ, ಹಿ= ಆದಾಗ್ಯೂ, ತ್ವಯಾ=ನಿನ್ನಿಂದ, ಅವ್ಯಃ=ರಕ್ಷಿಸಲ್ಪಡಬೇಕಾದ್ದೇ. ಅನ್ಯಥಾ=ಹಾಗಿಲ್ಲದಿದ್ದಲ್ಲಿ, ತ್ವಯಾ=ನಿನ್ನಿಂದ, ಕಿಂ=ಏನು ಪ್ರಯೋಜನವು ಎಂದು, ರಾವಣಃ=ರಾವಣನು, ಆಹ=ಕುಂಭಕರ್ಣನಿಗೆ ಹೇಳಿದನು.

ತಾತ್ಪರ್ಯ:— ಪುನಃ ಕುಂಭಕರ್ಣನು ಹೇಳುತ್ತಾನೆ:—ಶ್ರೀರಾಮರು ಮಹಾ ಬಲಿಷ್ಟರು ಎಂದು ನಾನು ಕೇಳಿದ್ದೇನೆ. ಬಲಿಷ್ಟರಲ್ಲಿ ವೈರವು ಯೋಗ್ಯವಲ್ಲವು. ಇವನ್ನು ಆ ರಾವಣನು ಕೇಳಿ ನಾನೇನೋ ದುರ್ನೀತನೇ ಹೌದು ಆದಾಗ್ಯೂ ನಾನು ನಿನ್ನಿಂದ ರಕ್ಷಿಸಲ್ಪಡತಕ್ಕದ್ದೇ. ಹಾಗಲ್ಲದಿದ್ದರೆ ನಿನ್ನಿಂದ ನನಗೇನು ಪ್ರಯೋಜನ.

**ಶ್ಲೋಕ॥ ಚರಂತಿ ರಾಜಾನ ಉತಾಕ್ರಮಂಕ್ವಚಿ । ತ್ವಯೋಪಮಾನ್ಬಂಧು ಜನಾನ್ಬಲಾಧಿಕಾನ್ ॥ ಸಮೀಕ್ಷ್ಯ ಹೀತ್ಥಂ ಗದಿತೋ ಗ್ರಜೇನ। ಸಕುಂಭಕರ್ಣಃ ಪ್ರಯಯೌ ರಣಾಯ ॥೧೦೪॥**

ಅರ್ಥ:— ರಾಜಾನಃ=ರಾಜರು, ತ್ವಯಾ = ನಿನಗೆ, ಉಪಮಾನ್= ಸಮಾನರಾದ, ಬಲಾಧಿಕಾನ್–ಅಧಿಕ ಪರಾಕ್ರಮಿಗಳಾದ, ಬಂಧುಜನಾನ್= ಬಂಧುಗಳನ್ನು, ಸಮೀಕ್ಷ್ಯ=ನೋಡಿ, ಆ ಧೈರ್ಯದಿಂದ, ಕ್ವಚಿತ್=ಒಂದೊಂದು ಕಾಲದಲ್ಲಿ, ಅಕ್ರಮಂ=ನೀತಿ ತಪ್ಪಿ, ಚರಂತಿ=ಆಚರಿಸುತ್ತಾರೆ ಹಿ–ಪ್ರಸಿದ್ಧಿಯು, ಇತ್ಥಂ=ಈ ಪ್ರಕಾರವಾಗಿ, ಅಗ್ರಜೇನ = ಅಣ್ಣನಿಂದ ಹೇಳಿಸಿಕೊಂಡ, ಸಃ–ಆ, ಕುಂಭಕರ್ಣಃ = ಕುಂಭಕರ್ಣನು, ರಣಾಯ= ಯುದ್ಧಕ್ಕೋಸ್ಕರ, ಪ್ರಯಯೌ=ಹೊರಟನು.

ತಾತ್ಪರ್ಯ:— ರಾವಣನು ಕುಂಭಕರ್ಣನನ್ನು ಕುರಿತು ಪುನಃ ಹೇಳು ತ್ತಾನೆ:—ಪ್ರಪಂಚದಲ್ಲಿ ರಾಜರುಗಳು ನಿನ್ನಂತಹ ಅತಿಬಲಿಷ್ಠರಾದ ಬಂಧು ಜನಗಳ ಸಹಾಯ ಇರುವ ಸಂಧರ್ಭದಲ್ಲಿ ಆ ಧೈರ್ಯದಿಂದ ಯಾವಾಗ ಲಾದರೂ ನೀತಿರಹಿತವಾದ ನಡವಳಿಕೆಗಳನ್ನು ನಡಿಸುವುದುಂಟು. ಇದು ಲೋಕರೂಢಿಯಾಗಿದೆ, ಎಂದು ಹೇಳಲು ಕುಂಭಕರ್ಣನು ಇದನ್ನು ಕೇಳಿ ಯುದ್ಧಕ್ಕಾಗಿ ಹೊರಟನು.

**ಶ್ಲೋಕ|| ಪ್ರಾಕಾರಮಾಲಂಘ್ಯಸಪಂಚ ಯೋಜನಂ | ಯದಾಯಯೌ ಶೂ ಲವರಾಯುಧೋರಣಂ || ಕಪಿಪ್ರವೀರಾ ಅಖಿಲಾ ಪ್ರದುದ್ರುವು | ರ್ಭಯಾದತೀತ್ಯೈವಚ ಸೇತುಮಾಶು ||೧೦೫||**

ಅರ್ಥ:—ಸಃ-ಆ ಕುಂಭಕರ್ಣನು, ಶೂಲವರಾಯುಧಃಸನ್=ಶ್ರೇಷ್ಠ ವಾದ ಶೂಲಾಯುಧವನ್ನು ತೆಗೆದುಕೊಂಡು, ಸಪಂಚಯೋಜನಂ-ಐದು ಯೋಜನ ವಿಸ್ತೀರ್ಣವಾದ, ಪ್ರಾಕಾರಂ-ಪ್ರಾಕಾರರೂಪವಾಗಿರುವ ತ್ರಿಕೂ ಟಪರ್ವತವನ್ನು, ಆಲಂಘ್ಯ-ದಾಟಿ, ರಣಂಪ್ರತಿ=ಯುದ್ಧರಂಗವನ್ನುಕುರಿತು ಯದಾ=ಯಾವಾಗ, ಯಯೌ=ಬಂದನೋ, ತದೇವ=ಅಗಲೇ, ಅಖಿಲಾಃ =ಸಮಸ್ತರಾದ, ಕಪಿಪ್ರವೀರಾಃ-ಕಪಿಶ್ರೇಷ್ಟರು, ಭಯಾತ್=ಭಯಪಟ್ಟು ಆಶು=ತಕ್ಷಣದಲ್ಲಿಯೇ, ಸೇತುಂ-ಸೇತುವೆಯನ್ನು, ಅತೀತ್ಯ=ದಾಟಿ, ಪ್ರದು ದ್ರುವುಶ್ಚ=ಹಿಂತಿರುಗಿ ಓಡಿಹೋದರು.

ತಾತ್ಪರ್ಯ:— ರಾವಣನಿಂದ ಈರೀತಿಯಾಗಿ ಹೇಳಿಸಿಕೊಂಡು ಕುಂ ಭಕರ್ಣನು ಶೂಲಾಯುಧವನ್ನು ತೆಗೆದುಕೊಂಡು ಲಂಕಾಪಟ್ಟಣಕ್ಕೆ ಪ್ರಾಕಾ ರರೂಪವಾಗಿ ಸುತ್ತಿಕೊಂಡಿರುವ ಪಂಚಯೋಜನ ವಿಸ್ತೀರ್ಣವುಳ್ಳ ತ್ರಿಕೂ ಟಪರ್ವತವನ್ನುದಾಟಿ ಯುದ್ಧಕಾಗಿ ಹೊರಟನು. ಅವನನ್ನು ನೋಡಿ ಸಮ ಸ್ತ ಕಪಿ ವೀರರೂ ಭಯಪಟ್ಟು ರಾಮಸೇತುವೆಯನ್ನು ದಾಟಿ ಹಿಂತಿರುಗಿ ಓಡಿದರು.

**ಶ್ಲೋಕ|| ಶತಬಲಿ ಪನಸಾಖ್ಯೌ ತತ್ರವಸ್ಥಂ ಶಭೂತೌ | ಪವನಗಣವರಾಂ ಶೌ ಶ್ವೇತಸಂಪಾತಿನೌಚ|| ನಿಖರ್ತಿತನುವ ಘೋಗ್ರಂ ದುರ್ಮು ಖಂ ಕೇಸರೀತಿ | ಪ್ರವರಮಥಮರುತ್ಸ್ವಾಸ್ಯದೇತಾ ಮುಖೇಸಃ ||೧೦೬||**

ಅರ್ಥ:—ಸಃ=ಕುಂಭಕರ್ಣನು, ಮಖೇ-ಯುದ್ಧರಂಗದಲ್ಲಿ, ತತ್ರ-ವಾನರ ವೀರರ ಮಧ್ಯದಲ್ಲಿ, ವಸ್ವಂಶಭೂತೌ=ಅಷ್ಟವಸುಗಳ ಅಂಶರಾದ, ಶತಬಲಿಪನಸಾಖ್ಯೌ=ಶತಬಲಿಯೆಂದೂ, ಪನಸಾ=ಪನಸಾ ಎಂದೂ, ಆಖ್ಯೆ ಹೆಸರುಳ್ಳ ವಾನರಶ್ರೇಷ್ಟರನ್ನೂ, ಪವನಗಣವರಾಂಶೌ-ಮರುದ್ಗಣ ಶ್ರೇಷ್ಠರ ಅಂಶೌ-ಅಂಶರಾದ, ಶ್ವೇತಸಂಪಾತಿನೌಚ-ಶ್ವೇತ, ಸಂಪಾತಿ, ನಾಮಕ ವಾನರ ಶ್ರೇಷ್ಟರನ್ನೂ, ಅಥ=ಮತ್ತು, ನಿಋರ್ತಿತನುಂ=ನೈಋತ್ಯ ಕೋಣಾಧಿಪನ, ಅಂಶಭೂತನಾದ ಉಗ್ರಂ=ಕ್ರೂರನಾದ, ದುರ್ಮುಖಂ = ದುರ್ಮುಖನನ್ನೂ, ಅಥ-ಇನ್ನೂ, ಮರುತ್ಸು=ಮರುತ್ತುಗಳಲ್ಲಿ, ಪ್ರವರಂ=ಶ್ರೇಷ್ಟರ ಅಂಶನಾದ, ಕೇಸರೀ ಇತಿ=ಕೇಸರಿ ಎಂಬ ಕಪಿಶ್ರೇಷ್ಟನು, ಏತಾನ್ ಈ ಶತಬಲ್ಯಾದಿ ಆರು ಸಂಖ್ಯಾಕರಾದ ವಾನರಶ್ರೇಷ್ಠರನ್ನು ಪ್ರಾಸ್ಯತ್=ಶೂಲಾಯುಧದಿಂದ ಪ್ರಹಾರ ಮಾಡಿದನು.

ತಾತ್ಪರ್ಯ:—ಆ ಶೂಲಾಯುಧದಿಂದ ಕುಂಭಕರ್ಣನು ಅಲ್ಲಿದ್ದ ವಾನರಶ್ರೇಷ್ಠರ ಮಧ್ಯದಲ್ಲಿ ಅಷ್ಟವಸುಗಳ ಅಂಶರಾದ ಶತಬಲಿ, ಪನಸ ಎಂಬ ವಾನರಶ್ರೇಷ್ಠರು, (ಮರುದ್ಗಣ) ಶ್ರೇಷ್ಠರ ಅಂಶರಾದ ಶ್ವೇತ, ಸಂಪಾತಿ, ಎಂಬ ವಾನರರು ನೈಋತ್ಯ ಕೋಣಾಧಿಪನಅಂಶನಾದ ಸಹಿಸಲಸಾಧ್ಯನಾದ ದುರ್ಮುಖನಾಮಕ ಕಪಿಶ್ರೇಷ್ಟನು, ಮರುದ್ಗಣದಲ್ಲಿ ಶ್ರೇಷ್ಟರ ಅಂಶನಾದ ಕಪಿಗಳಲ್ಲಿ ಪ್ರಸಿದ್ಧನಾದ ಕೇಸರಿನಾಮಕ ಕಪಿವರನು, ಈ ಆರು ಜನ ಕಪಿವೀರರನ್ನು ಕುಂಭಕರ್ಣನು ಶೂಲಾಯುಧದಿಂದ ಪ್ರಹಾರಮಾಡಿದನು.

ಶ್ಲೋಕ॥ ರಜನಿಚರ ವರೋಽಸೌ ಕುಂಭಕರ್ಣಃ ಪ್ರತಾಪೀ। ಕುಮುದ
ಮಪಿ ಜಯಂತಂ ಪಾಣಿನಾಸಂಪಿಪೇಷ॥ ನಲಮಥಗಜಾದೀನ್
ಪಂಚನೀಲಂ ಸತಾರಂ। ಗಿರಿವರ ತರುಹಸ್ತಾನ್ಮುಷ್ಟಿನಾ ಪಾತ
ಯಚ್ಚ ॥೧೦೭॥

ಅರ್ಥ:—ರಜನಿಚರವರಃ-ರಾಕ್ಷಸ ಶ್ರೇಷ್ಟನಾದ, ಅಸೌ-ಈ, ಕುಂಭಕರ್ಣಃ=ಕುಂಭಕರ್ಣನು, ಪ್ರತಾಪೀಸನ್=ಅತ್ಯಂತ ರೋಷವುಳ್ಳವನಾಗಿ, ಕುಮುದಂ=ಕುಮುದನಾಮಕ ಕಪಿವರನನ್ನು, ಅಪಿ=ಮತ್ತು ಜಯಂತನನ್ನೂ ಪಾಣಿನಾ=ಕೈಯ್ಯಿಂದ, ಸಂಪಿಪೇಷ-ಚೆನ್ನಾಗಿ ಉಜ್ಜಿದನು, ಅಥ=ಅನಂತರ ನಲಂ=ನಲನನ್ನು ನೀಲಂ-ನೀಲನನ್ನು ಗಿರಿವರಹಸ್ತಾನ್ - ಪರ್ವತ

ಗಳನ್ನು ಕೈಗಳಲ್ಲಿ ಉಳ್ಳ, ಗಜಾದೀ=ಗಜನೇ ಮೊದಲಾದ, ಪಂಚ=ಐದು ಕಪಿ ವೀರರನ್ನೂ, ಸತಾರಂ=ತಾರನಾಮಕ ವಾನರ ಶ್ರೇಷ್ಠನಿಂದ ಸಹಿತವಾಗಿ, ಮುಷ್ಟಿನಾಚ=ತನ್ನ ಮುಷ್ಟಿಯಿಂದಲೇ, ಅಪಾತಯತ್=ಪ್ರಹಾರ ಮಾಡಿದನು.

ತಾತ್ಪರ್ಯ:—ರಾಕ್ಷಸ ಶ್ರೇಷ್ಟನಾದ ಪ್ರತಾಪಿಯಾದ ಈ ಕುಂಭಕರ್ಣನು ಕುಮುದನಾಮಕ ಕಪಿವರನನ್ನೂ ಮತ್ತು ಹನುಮಂತನನ್ನೂ ತನ್ನ ಹಸ್ತದಿಂದ ಮರ್ದನಮಾಡಿದನು. ಮತ್ತು ನಲನನ್ನೂ, ನೀಲನನ್ನೂ, ಪರ್ವತಶ್ರೇಷ್ಟಗಳನ್ನು ಹಸ್ತದಲ್ಲಿ ಧಾರಣಮಾಡಿದ್ದ ಗಜ, ಗವಾಕ್ಷ, ಗವಯ, ವೃಷ, ಗಂಧಮಾಧನ ಈ ಐದು ಸಂಖ್ಯಾಕರಾದ ಪ್ರಾಣಾದಿ ಪಂಚ ಪ್ರಾಣಾವತಾರಭೂತರಾದ ಕಪಿಶ್ರೇಷ್ಟರನ್ನೂ ತಾರಾಖ್ಯ ವಾನರ ಶ್ರೇಷ್ಟನಿಂದ ಸಹಿತವಾಗಿ ತನ್ನ ಮುಷ್ಟಿಯಿಂದ ಪ್ರಹಾರ ಮಾಡಿದನು.

ಶ್ಲೋಕ|| ಅಥಾಂಗದಶ್ಚ ಜಾಂಬವಾ | ನಿನಾತ್ಮಜಶ್ಚ ವಾನರೈಃ || ನಿಜಘ್ನಿರೇ
ನಿಶಾಚರಂ | ಸವೃಕ್ಷಶೈಲಸಾನುಭಿಃ ||೧೦೮||

ಅರ್ಥ:—ಅನಂತರ, ನಿಶಾಚರಂ-ಕುಂಭಕರ್ಣನನ್ನು, ಅಂಗದಃ=ಅಂಗದನು, ಇನಾತ್ಮಜ=ಇನ-ಸೂರ್ಯನ, ಆತ್ಮಜ-ಪುತ್ರನಾದ, ಸುಗ್ರೀವನು, ಜಾಂಬವಾಂಶ್ಚ=ಜಾಂಬವಂತನೂ ಸಹ, ವಾನರೈಃಸಹ = ಇತರ ಕಪಿಗಳಿಂದ ಸಹಿತರಾಗಿ, ವೃಕ್ಷ, ಪರ್ವತ ಶಿಖರಗಳು ಇವುಗಳಿಂದ, ನಿಜಘ್ನಿರೇ-ತಾಡನಮಾಡಿದರು.

ತಾತ್ಪರ್ಯ:—ಅನಂತರ ಕಪಿ ಪ್ರಮುಖರಾದ ಅಂಗದ, ಜಾಂಬವಂತ ಸೂರ್ಯ ಪುತ್ರನಾದ ಸುಗ್ರೀವನೂ ಸಹ ಗಿಡ ಮರ ಪರ್ವತ ಶಿಖರಗಳಿಂದ ಸಹಿತರಾದ ವಾನರರಿಂದ ಕೂಡಿ ಕುಂಭಕರ್ಣನನ್ನು ಪ್ರಹರಿಸಿದರು.

ಶ್ಲೋಕ|| ವಿಚೂರ್ಣಿತಾಶ್ಚ ಪರ್ವತಾಃ | ತನೌ ನಿಶಾಚರಸ್ಯತೇ || ಬಭೂವ
ಕಾಚನವ್ಯಥಾ | ನಚಾಸ್ಯ ಬಾಹುಶಾಲಿನಃ ||೧೦೯||

ಅರ್ಥ.—ತೇ-ಅಂಗದಾದಿಗಳಿಂದ ಪ್ರಹರಿಸಲ್ಪಟ್ಟ, ಪರ್ವತಾಃ -ವೃಕ್ಷ ಪರ್ವತ ಶಿಖರಗಳೂ, ನಿಶಾಚರಸ್ಯ=ಕುಂಭಕರ್ಣನ; ತನೌ=ಶರೀರದಲ್ಲಿ, ವಿಚೂರ್ಣಿತಾಂ-ಚೂರು ಚೂರಾದವು. ಬಾಹುಶಾಲಿನಃ=ಪರಾಕ್ರ

ಘುಶಾಲಿಯಾದ, ಅಸ್ಯ-ಈ ಕುಂಭಕರ್ಣನಿಗೆ, ಕಾಚನವ್ಯಥಾ - ಯಾವ ಬಾಧೆಯೂ, ನಬಭೂವ - ಉಂಟಾಗಲಿಲ್ಲ.

ತಾತ್ಪರ್ಯ:—ಅಂಗದಾದಿಗಳಿಂದ ಪ್ರಯೋಗಿಸಲ್ಪಟ್ಟ ಗಿಡ ವೃಕ್ಷ ಪರ್ವತ ಶಿಖರಗಳು ಈ ಕುಂಭಕರ್ಣನ ಗಟ್ಟಿಯಾದ ಶರೀರ ಸಂಯೋಗ ದಿಂದ ಪುಡಿ ಪುಡಿಯಾದವು. ಆದರೆ ಬಾಹು ಬಲಶಾಲಿಯಾದ ಕುಂಭಕರ್ಣ ನಿಗೆ ಯಾವ ವಿಧವಾದ ಬಾಧೆಯೂ ಆಗಲಿಲ್ಲ.

**ಶ್ಲೋಕ॥ ಅಥಾಪರಂ ಮಹಾಚಲಂ । ಪ್ರಗೃಹ್ಯ ಭಾಸ್ಕರಾತ್ಮಜಃ । ಮುಮೋಚ ರಾಕ್ಷಸೇಥತಂ । ಪ್ರಗೃಹ್ಯತಂ ಜಘಾನಸಃ ॥೧೧೦॥**

ಅರ್ಥ:— ಅಥ=ಅನಂತರ, ಭಾಸ್ಕರಾತ್ಮಜಃ=ಸೂರ್ಯ ಪುತ್ರನಾದ ಸುಗ್ರೀವನು, ಅಪರಂ-ಮತ್ತೊಂದು, ಮಹಾಚಲಂ=ಮಹಾ ಪರ್ವತವನ್ನು ಪ್ರಗೃಹ್ಯ=ತೆಗೆದುಕೊಂಡು, ರಾಕ್ಷಸೇ=ಕುಂಭಕರ್ಣನಲ್ಲಿ, ಮುಮೋಚ= ಹೊಡೆದನು. ಸಃ-ಕುಂಭಕರ್ಣನು, ತಂ=ಆ ಪರ್ವತವನ್ನೇ, ಪ್ರಗೃಹ್ಯ= ತೆಗೆದುಕೊಂಡು ತಂ=ಸುಗ್ರೀವನನ್ನು ಜಘಾನ-ಹೊಡೆದನು.

ತಾತ್ಪರ್ಯ:—ಅನಂತರ ಸುಗ್ರೀವನು ಕುಂಭಕರ್ಣನನ್ನು ಬೇರೆ ಒಂದು ದೊಡ್ಡ ಪರ್ವತದಿಂದ ಹೊಡೆದನು. ಆ ಕುಂಭಕರ್ಣನು ಅದೇ ಪರ್ವತದಿಂದ ಸುಗ್ರೀವನನ್ನು ಹೊಡೆದನು.

**ಶ್ಲೋಕ॥ ತದಾ ಪಪಾತ ಸೂರ್ಯಜ । ಸ್ತತಾಡಚಾಂಗದಂರುಷಾ ॥ ಸಜಾಂಬವಂತ ಮಾಶುತೌ । ನಿಪೇತತುಸ್ತಳಾಹತೌ ॥೧೧೧॥**

ಅರ್ಥ:—ತದಾ=ಆ ಕಾಲದಲ್ಲಿ, ಸೂರ್ಯಜಃ=ಸುಗ್ರೀವನು, ಪಪಾತ=ನೆಲಕ್ಕೆ ಬಿದ್ದನು ( ಅನಂತರ ಕುಂಭಕರ್ಣನು ). ರುಷಾ=ರೋಷದಿಂದ ಸಜಾಂಬವಂತಂ-ಜಾಂಬವಂತನಿಂದ ಕೂಡಿ, ಅಂಗದಂ = ಅಂಗದನನ್ನು, ತತಾಡ-ಅಂಗೈಗಳಿಂದ ಅಪ್ಪಳಿಸಿದನು. ತಳಾಹತೌ=ಅಂಗೈ ಪೆಟ್ಟುತಿಂದ ತೌ=ಅಂಗದ ಜಾಂಬವಂತರು, ಆಶು=ಕೂಡಲೇ ನಿಪೇತತುಃ=ನೆಲಕ್ಕೆ ಬಿದ್ದರು

ತಾತ್ಪರ್ಯ:—ಆಗ ಸುಗ್ರೀವನು ಮೂರ್ಛಿತನಾಗಿನೆಲಕ್ಕೆ ಬಿದ್ದನು. ಅನಂತರ ರೋಷದಿಂದ ಜಾಂಬವಂತನಿಂದ ಸಹಿತನಾದ ಅಂಗದನನ್ನು ಅಂಗೈಯಿಂದ ಅಪ್ಪಳಿಸಿದನು. ಅಂಗದನೂ ಜಾಂಬವಂತನೂ ಸಹ ನೆಲಕ್ಕೆ ಬಿದ್ದರು.

**ಶ್ಲೋಕ॥ ಅಥಪ್ರಗೃಹ್ಯ ಭಾಸ್ಕರಿಂ । ಯಯೌಸರಾಕ್ಷಸೋಬಲೀ ॥ ಜಗಾಮ ಚಾನುಮಾರುತಿಃ । ಸುಸೂಕ್ಷ್ಮಮಕ್ಷಿಕೋಪಮಃ ॥೧೧೨॥**

ಅರ್ಥ:— ಅಥ=ಅನಂತರದಲ್ಲಿ, ಬಲೀ=ಬಲಿಷ್ಟನಾದ, ಸರಾಕ್ಷಸಃ—ಆ ಕುಂಭಕರ್ಣನು, ಭಾಸ್ಕರಿಂ=ಸುಗ್ರೀವನನ್ನು, ಪ್ರಗೃಹ್ಯ=ಎತ್ತಿಕೊಂಡು, ಯಯೌ=ಹೊರಟನು. ಮಾರುತಿಃ=ಹನುಮಂತನೂ ಸಹ, ಸುಸೂಕ್ಷ್ಮ ಮಕ್ಷಿಕೋಪಮಃಸನ್=ಸುಸೂಕ್ಷ್ಮ=ಅತ್ಯಂತ ಸಣ್ಣದಾದ, ಮಕ್ಷಿಕ=ನೊಣಕ್ಕೆ, ಉಪಮಃಸನ್=ಸಮಾನವಾದ ರೂಪವುಳ್ಳವನಾಗಿ, ಅನು = ಅವನ ಹಿಂದೆ, ಜಗಾಮ—ಹೊರಟನು.

ತಾತ್ಪರ್ಯ:— ಅನಂತರ ಬಲಿಷ್ಟನಾದ ಕುಂಭಕರ್ಣನು ಸುಗ್ರೀವನನ್ನು ಎತ್ತಿಕೊಂಡು ಹೊರಟನು, ಆಗ ಹನುಮಂತನು ನೊಣದೋಪಾದಿಯ ಸೂಕ್ಷ್ಮರೂಪದಿಂದ ಅವನನ್ನು ಅನುಸರಿಸಿ ಹಿಂದೆಯೇ ಹೊರಟನು.

ಅವತಾರಿಕೆ:— ಕುಂಭಕರ್ಣನು ಸುಗ್ರೀವನನ್ನು ಎತ್ತಿಕೊಂಡು ಹೋಗಲು ಹನುಮಂತನು ಅವನನ್ನು ಅನುಸರಿಸಿ ಏನು ಕಾರಣ ಹೋದನೆಂದು ಹೇಳುತ್ತಾರೆ:—

**ಶ್ಲೋಕ॥ ಯದ್ಯೈನಮೇಷ ಬಾಧತೇ । ತದಾವಿಮೋಚಯಾಮ್ಯಹಂ ॥ ಯದಿಸ್ಮ ಶಕ್ಯತೇಸ್ಯತು । ಸ್ವಮೋಚನಾಯ ತದ್ವರಂ ॥೧೧೩॥**

ಅರ್ಥ: —ಏಷಃ=ಈ ಕುಂಭಕರ್ಣನು, ಏನಂ = ಈ ಸುಗ್ರೀವನನ್ನು, ಯದಾಬಾಧತೇ=ಬಾಧೆಪಡಿಸಿದ್ದೆ ಆದರೆ, ತದಾ=ಆಗ, ಅಸ್ಯತು=ಈ ಸುಗ್ರೀವನಿಗೆ, ಸ್ವಮೋಚನಾಯ=ತನ್ನನ್ನು ಬಿಡಿಸಿಕೊಳ್ಳಲು, ಯದಿಶಕ್ಯತೇಸ್ಮ=ಸಾಧ್ಯವಾದರೆ, ತದ್ವರಂ=ಅದು ಒಳ್ಳೆಯದೇ ಆಯಿತು. ( ನೋಚೇತ್=ಹಾಗೆ ಸಾಧ್ಯವಾಗದಿದ್ದರೆ, ಅಹಂ=ನಾನು, ಮೋಚಯಾಮಿ—ಬಿಡಿಸುತ್ತೇನೆ ಎಂದು ಭಾವಿಸಿ ) ಹೊರಟನು.

ತಾತ್ಪರ್ಯ:— ಕುಂಭಕರ್ಣನು ಈ ಸುಗ್ರೀವನನ್ನು ಬಾಧಿಸಿದ ಪಕ್ಷದಲ್ಲಿ ತಾನು ತಪ್ಪಿಸಿಕೊಳ್ಳಲು ಶಕ್ತನಾದರೆ ಒಳ್ಳೆಯದೇ ಆಯಿತು. ಹಾಗೆ ಶಕ್ಯವಾಗದಿದ್ದರೆ ನಾನೇ ಕುಂಭಕರ್ಣನ ಬಾಧೆಯಿಂದ ಈ ಸುಗ್ರೀವನನ್ನು ಬಿಡಿಸಿ ರಕ್ಷಣೆಮಾಡೋಣವೆಂಬ ಅಭಿಪ್ರಾಯದಿಂದ ಅವನನ್ನು ಅನುಸರಿಸಿ ಹೊರಟನು.

**ಶ್ಲೋಕ ॥ ಇತಿವ್ರಜತ್ಯನುಸ್ಮತಂ । ಮರುತ್ಸುತೇ ನಿಶಾಚರಃ ॥ ಪುರಂ ವಿ ವೇಶಚಾರ್ಚಿತಃ । ಸ್ವಬಂಧುಭಿಃ ಸಮಸ್ತಶಃ ।೧೧೪।**

ಅರ್ಥ:—ಇತಿ=ಹೀಗೆಂದು ಭಾವಿಸಿ, ಮರುತ್ಸುತೇ=ಹನುಮಂತನು, ತಂ-ಸುಗ್ರೀವನನ್ನು, ಅನು=ಅನುಸರಿಸಿ, ವ್ರಜತಿಸತಿಸ್ಮ=ಹೋಗುತ್ತಿರಲಾಗಿ ನಿಶಾಚರಃ=ಕುಂಭಕರ್ಣನು, ಸಮಸ್ತಶಃ=ಸಮಸ್ತರಾದ, ಸ್ವಬಂಧುಭಿಃ= ತನ್ನ ಬಂಧು ಮಿತ್ರರಿಂದ, ಅರ್ಚಿತಃಸರ್-ಪೂಜಿತನಾಗಿ, ಪುರಂ = ಲಂಕಾ ಪುರವನ್ನು, ವಿವೇಶಚ-ಪ್ರವೇಶಮಾಡಿದನು.

ತಾತ್ಪರ್ಯ:—ಹನುಮಂತನು ಸುಗ್ರೀವನನ್ನು ರಾಕ್ಷಸರಬಾಧೆಯಿಂದ ರಕ್ಷಣ ಮಾಡಬೇಕೆಂಬ ಅಭಿಪ್ರಾಯದಿಂದ ಅವನನ್ನು ಅನುಸರಿಸಿ ಸೂಕ್ಷ್ಮ ರೂಪದಿಂದ ಹೋಗುತ್ತಿದ್ದನು. ಕುಂಭಕರ್ಣನಾದರೋ ತನ್ನ ಇಷ್ಟ ಮಿತ್ರ ರಿಂದ ಬಹುಮಾನಿಸಲ್ಪಟ್ಟವನಾಗಿ ಲಂಕಾಪುರವನ್ನು ಪ್ರವೇಶಿಸಿದನು.

**ಶ್ಲೋಕ । ತುಹಿನ ಸಲಿಲಮಾಲ್ಯೈಃ ಸರ್ವತೋಭಿಃ ಪ್ರವೃಷ್ಟೈ ॥ ರಜನಿ ಚರವರೇಸ್ಮಿನ್ತೇ ನಸಿಕ್ತಃ ಕಪೀಶಃ ॥ ವಿಗತಸಕಲ ಯುದ್ಧಗ್ಲಾನಿ ರಾವಂಚಯಿತ್ವಾ । ರಜನಿಚರವರಂತಂ ತಸ್ಯನಾಸಾಂ ದದಂಶ ।೧೧೫।**

**ಶ್ಲೋಕ । ಕರಾಭ್ಯಾಮಸ್ಯಕರ್ಣೌಚ । ನಾಸಿಕಾಂ ದಶನೈರಪಿ ॥ ಸಂಛಿದ್ಯಕ್ಷಿ ಪ್ರ ಮೇವಾಸಾ ವುತ್ಪಪಾತ ಹರೀಶ್ವರಃ ॥೧೧೬॥**

ಅರ್ಥ:—ರಜನೀಚರವರೇ = ರಾಕ್ಷಸ ಶ್ರೇಷ್ಠನಾದ, ತಸ್ಮಿನ್ = ಆ ಕುಂಭಕರ್ಣನು, ತುಹಿನ=ತನುವಾದ. ಸಲಿಲ=ಉದಕವು, ಮಾಲ್ಯೈಃ - ಪುಷ್ಪಹಾರಗಳು (ಇವುಗಳಿಂದ) ಸರ್ವತೋಭಿಃ-ಸಮಸ್ತವಾದ ಅವಯವ ಗಳಿಂದಲೂ, ಪ್ರವೃಷ್ಟೇಸತಿ = ಮಳೆಗರೆಯಲ್ಪಡುತ್ತಿರಲಾಗಿ, ತೇನ = ಆ ಉದಕಮಾಲ್ಯಾದಿ ಪೂಜಾದ್ರವ್ಯಗಳಿಂದ, ಸಿಕ್ತಃ=ತೋಯಿಸಲ್ಪಟ್ಟ, ಕಪೀ ಶಃ=ಸುಗ್ರೀವನು. ವಿಗತ ಸಕಲಯುದ್ಧಗ್ಲಾನಿಃ=ವಿಗತ-ಹೋಗಲಾಡಿಸಲ್ಪ ಟ್ಟ, ಸಕಲ=ಸಮಸ್ತವಾದ, ಯುದ್ಧಗ್ಲಾನಿಃಸ=ಯುದ್ಧದಿಂದ ಉತ್ಪನ್ನ ವಾದ ಶ್ರಮವುಳ್ಳವನಾಗಿ, ರಜನಿಚರವರಂ=ರಾಕ್ಷಸ ಶ್ರೇಷ್ಠನಾದ, ತಂ= ಆ ಕುಂಭಕರ್ಣನನ್ನು, ಅವಂಚಯಿತ್ವಾ=ಚೆನ್ನಾಗಿ ವಂಚಿಸಿ, ತಸ್ಯ = ಆ ಕುಂಭಕರ್ಣನ, ನಾಸಾಂ=ಮೂಗನ್ನು, ದದಂಶ=ಕಚ್ಚಿದನು.

ಅರ್ಥ.— ಕರಾಭ್ಯಾಂ=ಕೈಗಳಿಂದ, ಅಸ್ಯ=ಆ ಕುಂಭಕರ್ಣನ, ಕರ್ಣೌಚ=ಕಿವಿಗಳನ್ನೂ, ನಾಸಿಕಾಂ=ಮೂಗನ್ನೂ ಸಹ, ದಶನೈರಪಿ=ಹಲ್ಲುಗಳಿಂದ, ಸಂಭಿದ್ಯ=ಕಚ್ಚಿ, ಅಸೌಹರೀಶ್ವರಃ=ಈ ಕಪಿಶ್ರೇಷ್ಠನಾದ ಸುಗ್ರೀವನು, ಕ್ಷಿಪ್ರಮೇವ-ತಕ್ಷಣದಲ್ಲಿಯೇ, ಉತ್ಪಪಾತ-ಮೇಲಕ್ಕೆ ಹಾರಿದನು.

ತಾತ್ಪರ್ಯ.— ರಾಕ್ಷಸ ಶ್ರೇಷ್ಠನಾದ ಕುಂಭಕರ್ಣನು, ಸುಗ್ರೀವನನ್ನು ಹಿಡಿದುಕೊಂಡು ಲಂಕಾಪಟ್ಟಣದಲ್ಲಿ ಹೋಗುತ್ತಿರಲು ಆ ಪಟ್ಟಣದಲ್ಲಿರುವ ರಾಕ್ಷಸರು ಇವನ ಮೇಲೆ ತಣ್ಣಗಿರುವ ಉದಕವನ್ನು ತನುವಾದ ಹಾರಗಳನ್ನೂ ಹಾಕಿ ಅವನನ್ನು ಪೂಜೆಮಾಡಿದರು. ಇವನಿಗೆ ಮಾಡಿದ ಪೂಜಾದ್ಯುಪಚಾರಗಳಿಂದ ಅವನು ಹಿಡಿದುಕೊಂಡು ಹೋಗುತ್ತಿದ್ದ ಸುಗ್ರೀವನಿಗೆ ಸಂಸರ್ಗವಾದ್ದರಿಂದ ಇವನ ಶ್ರಮವೆಲ್ಲವೂ ಪರಿಹಾರವಾಗಿ ಎಚ್ಚರಗೊಂಡನು. ಆಗ ಸುಗ್ರೀವನು ಕುಂಭಕರ್ಣನ ಮೂಗನ್ನು ತನ್ನ ಹಲ್ಲುಗಳಿಂದ ಕಚ್ಚಿ ಕೈಗಳಿಂದ ಅವನ ಕಿವಿಗಳನ್ನು ಹರಿದುಹಾಕಿದನು. ಈ ರೀತಿಯಾಗಿ ಮೂಗನ್ನೂ ಕಿವಿಗಳನ್ನೂ ಛೇದನಮಾಡಿ ಅವನ ಕೈಯ್ಯಿಂದ ತಪ್ಪಿಸಿಕೊಂಡು ಮೇಲಕ್ಕೆ ಹಾರಿದನು. ||೧೩೫||೧೧೬||

**ಶ್ಲೋಕ || ತಲೇನಚೈನಂ ನಿಜಘಾನ ರಾಕ್ಷಸಃ | ಪಿಪೇಷಭೂಮೌ ಪತಿತಂ ತತೋಽಪಿ || ಸಮುದ್ಗತೋಽಸೌ ವಿವರೇಂಗುಳೀನಾಂ | ಜಘಾನ ಶೂಲೇನ ಪುನಃ ಸರಾಕ್ಷಸಃ ||೧೧೭||**

ಅರ್ಥ.— ತತಃ=ಅನಂತರ, ರಾಕ್ಷಸಃ=ಕುಂಭಕರ್ಣನು, ಏನಂ-ಈ ಸುಗ್ರೀವನನ್ನು, ತಲೈನ=ಅಂಗೈಗಳಿಂದ, ನಿಜಘಾನ=ಹೊಡೆದನು, ಭೂಮೌಪತಿತಂ=ಭೂಮಿಯಮೇಲೆ ಬಿದ್ದಂತಹ ಸುಗ್ರೀವನನ್ನು, ಪಿಪೇಷ=ಪಾದತಳದಿಂದ ಉಜ್ಜಿದನು, ಅಸೌ=ಈ ಸುಗ್ರೀವನು, ಅಂಗುಳೀನಾಂ=ಪಾದದ ಬೆರಳುಗಳ, ವಿಹರೇ=ಸಂಧಿಗಳಲ್ಲಿ, ಸಮುದ್ಗತಃ – ಮೇಲಕ್ಕೆದ್ದನು, ಪುನಃ=ಮತ್ತೆ, ಸರಾಕ್ಷಸಃ=ಆ ಕುಂಭಕರ್ಣನು (ಸುಗ್ರೀವನನ್ನು) ಶೂಲೇನ =ಶೂಲಾಯುಧದಿಂದ, ಜಘಾನ-ಹೊಡೆದನು.

ತಾತ್ಪರ್ಯ.— ಸುಗ್ರೀವನು ಕುಂಭಕರ್ಣನ ಮೂಗು ಮತ್ತು ಕಿವಿಗಳನ್ನು ಕಿತ್ತುಹಾಕಿ ಮೇಲಕ್ಕೆ ಹಾರಿದ ಕೂಡಲೇ ಕುಂಭಕರ್ಣನು ಅವನನ್ನು ಹಿಡಿದುಕೊಂಡು ನೆಲಕ್ಕೆ ಹಾಕಿದನು. ನೆಲದ ಮೇಲೆ ಬಿದ್ದಿದ್ದ ಸುಗ್ರೀವ

ನನ್ನು ತನ್ನ ಪಾದದಿಂದ ಮರ್ಧನಮಾಡಿದನು. ಕಾಲಿನಿಂದ ಉಜ್ಜುತ್ತಿ ರುವ ಸಂದರ್ಭದಲ್ಲಿ ಸುಗ್ರೀವನು ಅವನ ಕಾಲ ಬೆರಳಿನ ಸಂದಿನಿಂದ ಮೇಲಕ್ಕೆ ಎದ್ದನು. ಎದ್ದಂತಹ ಸುಗ್ರೀವನನ್ನು ಶೂಲಾಯುಧದಿಂದ ಪುನಃ ಹೊಡೆದನು.

**ಶ್ಲೋಕ || ಅಮೋಘಶೂಲಂ ಪ್ರಪತಂತ ಮೀಕ್ಷ್ಯರವೇಃಸುತಸ್ಯೋ ಪರಿ ಮಾರುತಾತ್ಮಜಃ || ಪ್ರಗೃಹ್ಯಜಾನೌ ಪ್ರಣಿಧಾಯಶೀಘ್ರಂ ಬಭಂಜ ತಂ ಪ್ರೇಕ್ಷ್ಯನನಾದ ಚೋಚ್ಚೈಃ ||೧೧೮||**

ಅರ್ಥ.—ಮಾರುತಾತ್ಮಜಃ=ಹನುಮಂತನು, ರವೇಃಸುತಸ್ಯ=ಸುಗ್ರೀವನ, ಉಪರಿ=ಮೇಲೆ, ಪ್ರಪತಂತಂ=ಬಂದು ಬೀಳುತ್ತಿರುವ, ಅಮೋಘಶೂಲಂ=ಅಸಾಧ್ಯವಾದ ಶೂಲಾಯುಧವನ್ನು, ಈಕ್ಷ್ಯ-ನೋಡಿ, ಪ್ರಗೃಹ್ಯ=ಆ ಶೂಲಾಯುಧವನ್ನು ತನ್ನ ಕೈಲಿ ಹಿಡಿದುಕೊಂಡು, ಶೀಘ್ರಂ-ಕೂಡಲೇ, ಜಾನೌ=ತನ್ನ ಮೊಣಕಾಲಿಗೆ ಇಟ್ಟು, ಪ್ರಣಿಧಾಯ=ಮುರಿದು, ಬಭಂಜ=ಹಾಕಿದನು. ಮತ್ತು, ತಂ=ಆ ಕುಂಭಕರ್ಣನನ್ನು, ಪ್ರೇಕ್ಷ್ಯ-ನೋಡಿ ಉಚ್ಚೈಃ=ಗಟ್ಟಿಯಾಗಿ, ನನಾದ=ಸಿಂಹನಾದ ಮಾಡಿದನು.

ತಾತ್ಪರ್ಯ.—ಕುಂಭಕರ್ಣನು ಮೇಲಕ್ಕೆದ್ದ ಸುಗ್ರೀವನ ಮೇಲೆ ಪ್ರಯೋಗಿಸಿದ ಶೂಲಾಯುಧವನ್ನು ನೋಡಿ ಹನುಮಂತನು ಅದನ್ನು ತನ್ನ ಕೈಯ್ಯಲ್ಲಿ ತೆಗೆದುಕೊಂಡು ಮೊಣಕಾಲಿನಲ್ಲಿಟ್ಟು ಮುರಿದು ಹಾಕಿದನು. ಅನಂತರ ಕುಂಭಕರ್ಣನ ಮುಖವನ್ನು ನೋಡಿ ಅಪಹಾಸ್ಯಮಾಡಿ ಗಟ್ಟಿಯಾಗಿ ಸಿಂಹನಾದಮಾಡಿದನು..

**ಶ್ಲೋಕ || ಅಥೈನಮಾವೃತ್ಯ ಜಘಾನ ಮುಷ್ಟಿನಾ | ಸರಾಕ್ಷಸೋ ವಾಯುಸುತಂ ಸ್ತನಾಂತರೇ || ಜಗರ್ಜ ತೇನಾಭಿಹತೋ ಹನೂಮಾ | ನಚಿಂತಯಂಸ್ತತ್ತ್ವಜಹಾರಚೈನಂ ||೧೧೯||**

ಅರ್ಥ.—ಅಥ=ಅನಂತರ, ಸರಾಕ್ಷಸಃ=ಆ ಕುಂಭಕರ್ಣನು, ಏನಂ ವಾಯುಸುತಂ=ಹನುಮಂತನನ್ನು, ಆವೃತ್ಯ=ತಿರಿಗಿಸಿಕೊಂಡು, ಮುಷ್ಟಿನಾ=ತನ್ನ ಮುಷ್ಟಿಯಿಂದ, ಸ್ತನಾಂತರೇ=ಎದೆಯಲ್ಲಿ, ಜಘಾನ=ಗುದ್ದಿದನು. ಮತ್ತು, ಜಗರ್ಜಚ=ಗರ್ಜನಮಾಡಿದನು. ತೇನ-ಕುಂಭಕರ್ಣನನಿಂದ, ಅಭಿಹತಃ=ಹೊಡೆಯಲ್ಪಟ್ಟ ಹನೂಮಾನ್=ಹನುಮಂತದೇವರು, ತತ್ತ್ವ

ಹಾರಂ=ಆ ಮುಷ್ಟಿಪ್ರಹಾರವನ್ನು, ನಚಿಂತಯಾಮಾಸ = ಲಕ್ಷ್ಯಮಾಡದೆ, ಏನಂ=ಕುಂಭಕರ್ಣನನ್ನು, ಪ್ರಜಹಾರ-ಹೊಡೆದನು.

ತಾತ್ಪರ್ಯ.—ಅನಂತರ ಕುಂಭಕರ್ಣನು ಹನುಮಂತದೇವರನ್ನ ತಿರುಗಿಸಿಕೊಂಡು ಮುಷ್ಟಿಯಿಂದ ವಕ್ಷ್ಯಸ್ಥಳದಲ್ಲಿ ಗುದ್ದಿದನು- ಮತ್ತು ಸಿಂಹನಾದಮಾಡಿದನು. ಹನುಮಂತನು ಆ ಮುಷ್ಟಿ ಪ್ರಹಾರವನ್ನು ಲೆಕ್ಕಿಸದೇ ಪುನಃ ಕುಂಭಕರ್ಣನನ್ನು ಹೊಡೆದನು.

**ಶ್ಲೋಕ || ತಲೇನ ವಕ್ಷಸ್ಯಭಿತಾಡಿತೋರುಷಾ । ಹನೂಮತಾ ಮೋಹ ಮವಾಪರಾಕ್ಷಸಃ । ಪುನಶ್ಚ ಸಂಜ್ಞಾಂ ಸಮವಾಪ್ಯಶೀಘ್ರಂ । ಯಯೌ ಸಯತ್ರೈವ ರಘುಪ್ರವೀರಃ ||೧೨೦||**

ಅರ್ಥ.—ಹನೂಮತಾ=ಹನುಮಂತನಿಂದ, ತಲೇನ=ಅಂಗೈಯ್ಯಿಂದ ವಕ್ಷಸಿ=ವಕ್ಷಸ್ಥಳದಲ್ಲಿ, ರುಷಾ-ಕೋಪದಿಂದ, ಅಭಿತಾಡಿತಃ=ಹೊಡಿಸಿಕೊಳ್ಳಲ್ಪಟ್ಟ, ರಾಕ್ಷಸಃ=ಕುಂಭಕರ್ಣನು, ಮೋಹಂ-ಮೂರ್ಛೆಯನ್ನು, ಅವಾಪ=ಹೊಂದಿದನು. ಪುನಶ್ಚ=ತಿರುಗೀ, ಶೀಘ್ರಂ=ಜಾಗ್ರತೆಯಾಗಿ, ಸಂಜ್ಞಾಂ-ಎಚ್ಚರಿಕೆಯನ್ನು, ಅವಾಪ್ಯ=ಹೊಂದಿ, ಸಃ=ಆ ಕುಂಭಕರ್ಣನು, ಯತ್ರ ರಘುವೀರಃ=ರಾಮಚಂದ್ರದೇವರಿದ್ದ ಸ್ಥಳಕ್ಕೆ, ಯಯೌ = ಯುದ್ಧಕ್ಕಾಗಿ ಹೋದನು.

ತಾತ್ಪರ್ಯ.—ಹನುಮಂತನು ಅಂಗೈಯ್ಯಿಂದ ಕುಂಭಕರ್ಣನ ವಕ್ಷಸ್ಥಳದಲ್ಲಿ ಕೋಪದಿಂದ ಹೊಡೆದ ಆ ಪೆಟ್ಟನ್ನು ತಡೆಯಲಾರದೆ ಕುಂಭಕರ್ಣನು ಮೂರ್ಛೆಹೋದನು. ಪುನಃ ಜಾಗ್ರತೆಯಾಗಿ ಎಚ್ಚೆತ್ತು ಶ್ರೀರಾಮರೆಲ್ಲಿದ್ದರೋ ಆ ಸ್ಥಳವನ್ನು ಕುರಿತು ಹೋದನು.

**ಶ್ಲೋಕ || ವಿಚಿಂತಯಾಮಾಸ ತತೋಹನೂಮಾ । ಮಯ್ಯೆವಹಂತುಂ ಸಮರೇಹಿ ಶಕ್ಯಃ || ಅಸೌತಥಾಪ್ಯೇನ ಮಹಂನಹನ್ಮಿ । ಯಶೋಹಿ ರಾಮಸ್ಯ ದೃಢಂ ಪ್ರಕಾಶಯಾ ||೧೨೧||**

ಅರ್ಥ.—ತತಃ=ಅನಂತರ, ಅಸೌ-ಈ, ಹನೂಮಾ-ಹನುಮಂತನು, ರಾಮಸ್ಯ-ಶ್ರೀರಾಮರಿಗೆ, ಯಶೋಹಿ-ಕೀರ್ತಿಯನ್ನು, ದೃಢಂ=ಸ್ಥಿರವಾಗಿ, ಪ್ರಕಾಶಯಾಸ=ಪ್ರಸಿದ್ಧಿಪಡಿಸುವುದಕ್ಕಾಗಿ, ಅಸೌ=ಈ ಕುಂಭಕರ್ಣನು, ಮಯ್ಯೆವ-ನನ್ನಿಂದಲೇ, ಹಂತುಃ=ಕೊಲ್ಲಲ್ಪಡಲು, ಶಕ್ಯೋಪಿ

ಹಿ=ಸಾಧ್ಯನು, ತಥಾಪಿ=ಆದಾಗ್ಯೂ, ಏವಂ-ಈ ಕುಂಭಕರ್ಣನನ್ನು, ಅ ಹಂ=ನಾನು, ನಹನ್ಮಿ=ಸಂಹರಿಸುವುದಿಲ್ಲ. ಇತಿ=ಹೀಗೆಂದು, ವಿಚಿಂತಯಾ ಮಾಸ-ಯೋಚಿಸಿದನು.

ತಾತ್ಪರ್ಯ.—ಕುಂಭಕರ್ಣನು ಶ್ರೀರಾಮರಿದ್ದೆಡೆಗೆ ಹೋಗುತ್ತಿರ ಲಾಗಿ ಹನುಮಂತನು ಈ ರೀತಿ ಯೋಚಿಸಿದನು. ನಾನೇ ಯುದ್ಧಮಾಡಿ ಈ ರಾಕ್ಷಸನನ್ನು ಸಂಹರಿಸಬಲ್ಲೆ, ಆದಾಗ್ಯೂ ಶ್ರೀರಾಮರೇ ಇವನನ್ನು ಸಂ ಹರಿಸುವುದರಿಂದ ಅವರ ಯಶಸ್ಸು ಶಾಶ್ವತವಾಗಿ ಪ್ರಸಿದ್ಧಿಯಾಗುವುದು. ಆದ್ದರಿಂದ ನಾನು ಇವನನ್ನು ಸಂಹರಿಸುವುದಿಲ್ಲ.

**ಶ್ಲೋಕ ॥ ಅನನ್ಯವಧ್ಯಂ ತಮಿಮಂ ನಿಹತ್ಯ । ಸ್ವಯಂಸರಾಮೋ ಯಶಆಹ ರೇತ ॥ ದತ್ತೋವರೋ ದ್ವಾರಪಯೋಃ ಸ್ವಯಂಚ । ಜನಾರ್ದನೇ ನೈವ ಪುರಾತನಶ್ಚ ॥೧೨೨॥**

ಅರ್ಥ.—ಜನಾರ್ದನೇನೈವ=ಶ್ರೀರಾಮಸ್ವರೂಪನಾದ ಶ್ರೀಮನ್ನಾ ರಾಯಣದೇವರಿಂದ, ದ್ವಾರಪಯೋಃ=ದ್ವಾರಪಾಲಕರಾಗಿದ್ದ ರಾವಣ ಕುಂ ಭಕರ್ಣ ಸ್ವರೂಪರಾದ ಜಯವಿಜಯರಿಗೆ, ಸ್ವಯಂ=ತಾನೇ, ಪುರಾತನ ಶ್ಚ-ಪೂರ್ವದಲ್ಲಿ, ವರಃ=ವರವನ್ನು, ದತ್ತಃ=ಕೊಟ್ಟಿದ್ದಾನೆ, (ತಸ್ಮಾತ್=ಆ ಕಾರಣದಿಂದ) ತಂ=ದ್ವಾರಪಾಲಕರಲ್ಲೊಬ್ಬನಾದ, ಅನನ್ಯವಧ್ಯಂ=ನಾರಾ ಯಣ=ಸ್ವರೂಪನಾದ ಈ ರಾಮನ ವಿನಹ ಮತ್ತಾರಿಂದಲೂ ವಧೆಯಿಲ್ಲದೆ ಇರುವ, ಇಮಂ-ಈ ಕುಂಭಕರ್ಣನನ್ನು, ಸಃ-ಆ ನಾರಾಯಣ ಸ್ವರೂಪ ನಾದ, ರಾಮಃ=ಶ್ರೀರಾಮನೇ, ಸ್ವಯಂ-ತಾನೇ, ನಿಹತ್ಯ=ಸಂಹಾರಮಾಡಿ ಯಶಃ=ಕೀರ್ತಿಯನ್ನು, ಆಹರೇತ=ಪಡೆಯಬೇಕಾದ್ದು, ಇತಿ=ಹೀಗೆಂದು, ಹನುಮಂತನು ಯೋಚಿಸಿದನು.

ತಾತ್ಪರ್ಯ.—ಈ ಹನುಮಂತನು ಏತಕ್ಕೆ ಹೀಗೆ ಯೋಚಿಸಿದನೆಂ ಬುವುದಕ್ಕೆ ಕಾರಣವನ್ನು ಹೇಳುತ್ತಾರೆ.—

ಪೂರ್ವದಲ್ಲಿ ಈ ರಾಮರೂಪನಾದ ಶ್ರೀಮನ್ನಾರಾಯಣದೇವರು ತನ್ನ ದ್ವಾರಪಾಲಕರಾಗಿದ್ದ ಜಯ-ವಿಜಯರಿಗೆ ತನ್ನ ವಿನಹ ಮತ್ತಾರಿಂದಲೂ ನಿಮಗೆ ವಧೆ ಬೇಡವೆಂದು ವರವನ್ನು ಕೊಟ್ಟಿದ್ದಾನೆ. ಆ ದ್ವಾರಪಾಲಕರಲ್ಲಿ ಒಬ್ಬನಾದ ವಿಜಯನ ಅವತಾರನಾದ ಈ ಕುಂಭಕರ್ಣನನ್ನು ಆ ನಾರಾಯ

ಣಾವತಾರನಾದ ಶ್ರೀರಾಮನೇ ಸಂಹರಿಸಿ ಪ್ರಪಂಚದಲ್ಲಿ ಸತ್ಯಸಂಧನೆಂದು ಧರ್ಮಕೀರ್ತಿಗಳನ್ನು ಪಡೆಯಲಿ ಎಂದು ಯೋಚಿಸಿ ರಾಮರ ಬಳಿಗೆ ಯುದ್ಧಕ್ಕಾಗಿ ಹೋಗುತ್ತಿದ್ದ ಕುಂಭಕರ್ಣನನ್ನು ತಾನು ಸಂಹರಿಸದೇ ಬಿಟ್ಟು ಬಿಟ್ಟನು.

ಅವತಾರಿಕೆ:—ರಾವಣ ಕುಂಭಕರ್ಣರ ಮೂಲಭೂತರಾದ ಜಯ ವಿಜಯರಿಗೆ ರಾಮಾವತಾರದ ಮೂಲರೂಪನಾದ ಶ್ರೀಮನ್ನಾರಾಯಣನು ಏನು ವರವನ್ನು ಕೊಟ್ಟಿದ್ದನೆಂಬುವುದನ್ನು ಈ ಶ್ಲೋಕವು ತಿಳಿಸುತ್ತದೆ:—

**ಶ್ಲೋಕ ॥ ಮಯ್ಯೈವ ವಧ್ಯೌ ಭವತಾಂ ತ್ರಿಜನ್ಮಸು । ಪ್ರವೃದ್ಧವೀರ್ಯೌ ವಿತಿ ಕೇಶವೇನ ॥ ಉಕ್ತಂ ಮಯ್ಯೈವೇಷ ಯದಪ್ಯನುಗ್ರಹಂ । ವಧೋಸ್ಯ ಕುರ್ಯಾನ್ನ ತು ಮೇಽಸ ಧರ್ಮಃ ॥೧೩॥**

ಅರ್ಥ:—ಅಸ್ಯ=ಈ ಕುಂಭಕರ್ಣನಿಗೆ, ಮಯ್ಯೈವ = ನನ್ನಿಂದಲೇ, ವಧೋ=ಮರಣವು, (ಕೃತೇ(ಸತಿ=ಮಾಡಲ್ಪಟ್ಟಿದ್ದೇ ಆದರೆ) ಯದ್ಯಪಿ=ಒಂದು ವೇಳೆ, ಏಷಃ=ಈ ರಾಮಚಂದ್ರದೇವರು ಮಮ=ನನಗೆ, ಅನುಗ್ರಹಂ=ಅನುಗ್ರಹವನ್ನು, ಕುರ್ಯಾದೇವ-ಮಾಡಿಯೇ ಮಾಡುತ್ತಾರೆ, (ಏವಮಪಿ= ಹೀಗಿದ್ದಾಗ್ಯೂ) ಕೇಶವೇನ=ಈ ರಾಮಸ್ವರೂಪನಾದ ಶ್ರೀಪರಮಾತ್ಮನಿಂದ, (ತೌಪ್ರತಿ = ಆಗ ದ್ವಾರಪಾಲಕರಾಗಿದ್ದ ಈ ರಾವಣ ಕುಂಭಕರ್ಣರನ್ನು ಕುರಿತು) ಯುವಾಂ–ನೀವು ಉಭಯತ್ರರೂ, ತ್ರಿಜನ್ಮಸು-ಮೂರು ಜನ್ಮಗಳಲ್ಲಿಯೂ, ಪ್ರವೃದ್ಧವೀರ್ಯೌ ಸತೌ=ಅತ್ಯಂತ ಪರಾಕ್ರಮಭರಿತರಾಗಿ, ಮಯ್ಯೈವ-ನನ್ನಿಂದಲೇ, ವಧ್ಯೌ=ವಧೆಗೆ ಅರ್ಹರಾದವರು, ಭವತಾಂ=ಆಗಲಿ, ಇತಿ – ಹೀಗೆಂದು, ಉಕ್ತಂ=ಹೇಳಲ್ಪಟ್ಟಿದೆ. ತಸ್ಮಾತ್=ಈ ಕಾರಣದಿಂದ, ಸಃ–ಆ ಕುಂಭಕರ್ಣನ ವಧೆಯು, ಮೇ = ನನಗೆ, ಧರ್ಮಃ= ಯೋಗ್ಯವಾದದ್ದು, ನತು=ಅಲ್ಲವೇ ಅಲ್ಲವು, ಇತಿ – ಈ ಪ್ರಕಾರ, ಸಃ= ಆ ಹನುಮಂತನು, ವಿಚಿತಯಾಮಾಸ–ಯೋಚನೆ ಮಾಡಿದನು.

ತಾತ್ಪರ್ಯ:—ಹನುಮಂತನು ಪುನಃ ಯೋಚಿಸಿದನು, ಹೇಗೆಂದರೆ ಯದ್ಯಪಿ ಈ ರಾಕ್ಷಸನನ್ನು ನಾನೇ ಸಂಹರಿಸಿದರೆ ಒಂದುವೇಳೆ ಶ್ರೀರಾಮರು ದೇವಕಾರ್ಯವನ್ನು ನೆರವೇರಿಸಿದನೆಂದು ನನಗೆ ಅನುಗ್ರಹವೇ ಮಾಡು

ತ್ತಾರೆ. ಆದಾಗ್ಯೂ ಶ್ರೀರಾಮ ಸ್ವರೂಪನಾದ ನಾರಾಯಣದೇವರು ತಮ್ಮ ದ್ವಾರಪಾಲರಾಗಿದ್ದಾಗ್ಯೆ ಈ ರಾವಣ ಕುಂಭಕರ್ಣರನ್ನು ಕುರಿತು ನೀವು ಉಭಯತ್ರರೂ ಮೂರು ಜನ್ಮಗಳಲ್ಲಿ ಅತ್ಯಂತ ಪರಾಕ್ರಮವುಳ್ಳವರಾಗಿ ನನ್ನಿಂದಲೇ ಮರಣವನ್ನು ಹೊಂದಿರಿ; ಎಂದು ಇವರಿಗೆ ವರಪ್ರದಾನ ಮಾಡಿದ್ದಾನೆ ಆದ್ದರಿಂದ ಇವನನ್ನು ವಧಾಮಾಡುವುದು ನನಗೆ ಧರ್ಮವಲ್ಲ.

**ಶ್ಲೋಕ ॥ ಇತಿಸ್ಮಸಂಚಿಂತ್ಯ ಕಪೀಶಯುಕ್ತೋ । ಜಗಾಮಯತ್ರೈವ ಕಪಿಪ್ರವೀರಃ ॥ ಸಕುಂಭಕರ್ಣೋಽಖಿಲವಾನರಾಂಸ್ತು । ಪ್ರಭಕ್ಷಯನ್ರಾಮ ಮುಪಾಜಗಾಮ ॥೧೨೪॥**

ಅರ್ಥ:— ಇತಿ= ಈ ಪ್ರಕಾರ ಯೋಚನೆಮಾಡಿ, ಕಪೀಶಯುಕ್ತಃ= ಸುಗ್ರೀವನಿಂದ ಕೂಡಿಕೊಂಡು, ಕಪಿಪ್ರವೀರಃ = ವಾನರ ಶ್ರೇಷ್ಠರುಗಳು, ಯತ್ರ–ಯಾವ ಸ್ಥಳದಲ್ಲಿದ್ದರೋ, ತತ್ರೈವ–ಆ ಸ್ಥಳಕ್ಕೇನೇ, ಜಗಾಮಸ್ಮ–ಹೋದನು. ಸಕುಂಭಕರ್ಣಃ–ಆ ರಾಕ್ಷಸನಾದರೋ, ಅಖಿಲವಾನರಾನ್=ಸಮಸ್ತ ಕಪಿಗಳನ್ನು, ಭಕ್ಷಯನ್=ಭಕ್ಷಣ ಮಾಡುತ್ತಾ, ರಾಮಂ =ಶ್ರೀರಾಮನನ್ನು, ಉಪಾಜಗಾಮ=ಹೊಂದಿದನು.

ತಾತ್ಪರ್ಯ:— ಪೂರ್ವೋಕ್ತ ರೀತಿಯಾಗಿ ಹನುಮಂತನು ಯೋಚಿಸಿ ಕುಂಭಕರ್ಣನನ್ನು ಬಿಟ್ಟು ಸುಗ್ರೀವನ ಸಂಗಡ ಶ್ರೀರಾಮಚಂದ್ರನು ಇದ್ದಲ್ಲಿಗೆ ಹೋದನು. ಈ ರಾಕ್ಷಸನಾದರೋ ಸಮಸ್ತ ಕಪಿಗಳನ್ನೂ ನುಂಗುತ್ತಾ ಶ್ರೀರಾಮರ ಸಮೀಪಕ್ಕೆ ಹೋದನು.

**ಶ್ಲೋಕ ॥ ತೇಭಕ್ಷಿತಾಸ್ತೇನ ಕಪಿಪ್ರವೀರಾಃ । ಸರ್ವೇಽಪಿನಿರ್ಜಗ್ಮುರಮುಷ್ಯದೇಹಾತ್ ॥ ಸ್ರೋತೋಭಿ ರೇವಾಥಚ ರೋಮಕೂಪೈಃ । ಕೇಚಿತ್ತಮೇವಾರುರುಹುರ್ಯಥಾಗಿರಿಂ ॥೧೨೫॥**

ಅರ್ಥ:—ತೇನ=ಆ ಕುಂಭಕರ್ಣನಿಂದ, ಭಕ್ಷಿತಾಃ=ಭಕ್ಷಣ ಮಾಡಲ್ಪಟ್ಟ. ತೇ ಕಪಿಪ್ರವೀರಾಃ=ಕಪಿವೀರರು, ಸರ್ವೇ =ಸಮಸ್ತರೂ, ಅಮುಷ್ಯ= ಈ ರಾಕ್ಷಸನ, ದೇಹಾತ್=ಶರೀರದಿಂದ, (ಬಹಿಃ=ಹೊರಗಡೆಗೆ) ಸ್ರೋತೋಭಿರೇವ–ಕಿವಿ ಮೂಗು ಮೊದಲಾದ ನವ ದ್ವಾರಗಳಿಂದಲೂ, ರೋಮಕೂಪೈರಪಿ=ರೋಮ ಕೂಪಗಳ ಮೂಲಕವಾಗಿಯೂ, ನಿರ್ಜಗ್ಮುಃ–ಹೊರಗೆ

ಬಂದರು. ಅಥಚ-ಅನಂತರದಲ್ಲಿ, ಕೇಚಿತ್=ಕೆಲವು ಕಪಿವೀರರು, ಗಿರಿಂ ಯಥಾ=ಪರ್ವತವನ್ನು ಏರುವ ರೀತಿಯಲ್ಲಿ, ತಮೇವ=ಆ ಕುಂಭಕರ್ಣನ ಶರೀರವನ್ನೇ, ಆರುರುಹುಃ=ಏರಿದರು.

ತಾತ್ಪರ್ಯ:—ಕುಂಭಕರ್ಣನು ಕಪಿಗಳನ್ನು ನುಂಗುತ್ತಿರಲು ಅವನ ಉದರದೊಳಗೆ ಹೋದ ಕಪಿಗಳೆಲ್ಲರೂ ಅವನ ಮೂಗು ಕಿವಿ ರೋಮ ಕೂಪಗಳ ದ್ವಾರದಿಂದ ಹೊರಗೆ ಬಂದರು. ಮತ್ತೆ ಕೆಲವು ಕಪಿಗಳು ಆ ಕುಂಭಕರ್ಣನ ದೇಹವನ್ನು ಬೆಟ್ಟವನ್ನು ಹತ್ತುವಹಾಗೆ ಏರಿದರು.

ಶ್ಲೋಕ ॥ ಸತಾನ್ವಿಧೂಯಾಶು ಯಥಾ ಮಹಾಗಜೋ ಜಗಾಮ ರಾಮಂ ಸಮರಾರ್ಥಮೇಕಃ ॥ ಪ್ರಭಕ್ಷಯನ್ಸ್ವಾನಪರಾಂಶ್ಚ ಸರ್ವಶೋ । ಮತ್ತಃ ಸಮಾಘ್ರಾಯ ಚ ಶೋಣಿತಂ ಪಿಬನ್ ॥೧೨೬॥

ಅರ್ಥ:-ಸಃ=ಆ ಕುಂಭಕರ್ಣನು, ತಾನ್=ತನ್ನ ಶರೀರದಮೇಲೆ ಹತ್ತಿ ಹರಿದಾಡುತ್ತಿದ್ದ ಕಪಿಗಳನ್ನು, ಮತ್ತಗಜೋಯಥಾ=ಮದಿಸಿದ ಆನೆಯು ಮಕ್ಷಿಕಾದಿಗಳನ್ನು ಯಾವ ಪ್ರಕಾರ ಝಾಡಿಸಿಕೊಳ್ಳುತ್ತದೆಯೋ ಅದೇ ಪ್ರಕಾರ, ವಿಧೂಯ-ಓಡಿಸಿ, ಸ್ವಾನ್ = ಸ್ವಕೀಯರಾದ ರಾಕ್ಷಸರನ್ನೂ, ಅಪರಾನ್=ಪ್ರತಿ ಪಕ್ಷಿಗಳಾದ ವಾನರರನ್ನೂ ಕೂಡ, ಸರ್ವಶಃ=ಎಲ್ಲರನ್ನೂ ಭಕ್ಷಯನ್=ನುಂಗುತ್ತಾ, ಶೋಣಿತಂ-ರಕ್ತವನ್ನು, ಸಮಾಘ್ರಾಯ=ಮೂಸಿನೋಡಿ, ಪಿಬನ್ಂಶ್ಚ=ಕುಡಿದು, ಮತ್ತಃಸನ್-ಉನ್ಮತ್ತನಾಗಿ, ಸಮರಾರ್ಥಂ=ಯುದ್ಧಾರ್ಥವಾಗಿ, ಏಕಏವ=ತಾನೊಬ್ಬೊಂಟಿಗನಾಗಿಯೇ, ರಾಮಂಪ್ರತಿ=ಶ್ರೀರಾಮರನ್ನು ಕುರಿತು, ಜಗಾಮ=ಬಂದನು.

ತಾತ್ಪರ್ಯ:—ಕುಂಭಕರ್ಣನು ತನ್ನ ಮೇಲೆ ಹತ್ತಿ ಓಡಾಡುತ್ತಿದ್ದ ಕಪಿಗಳನ್ನು ಮದಿಸಿದ ಗಜವು ಮಕ್ಷಿಕಾದಿಗಳನ್ನು ಓಡಿಸುವ ಹಾಗೆ ಓಡಿಸಿ ತನ್ನವರಾದ ರಾಕ್ಷಸರನ್ನೂ ಶತ್ರು ಪಕ್ಷದ ಕಪಿಗಳನ್ನೂ ನುಂಗುತ್ತಾ ರಕ್ತವನ್ನ ಮೂಸಿನೋಡಿ ಪಾನಮಾಡುತ್ತಲೂ, ಉನ್ಮತ್ತನಾಗಿ ತಾನು ಒಬ್ಬನೇ ರಾಮರೊಡನೆ ಯುದ್ಧಕ್ಕೆ ಹೊರಟನು.

ಶ್ಲೋಕ ॥ ನ್ಯವಾರಯತ್ತಂ ಶರವರ್ಷಧಾರಯಾ । ಸಲಕ್ಷ್ಮಣೋನ್ಯೈಸಮುಚಿತಂ ತಯುತ್ಸುಃ ॥ ಜಗಾಮ ರಾಮಂ ಗಿರಿಶೃಂಗಧಾರೀ । ಸಮಾಹ್ವಯಂತಂ ಸಮ... ॥೧೨೭॥

ಅರ್ಥ.––ಸಲಕ್ಷ್ಮಣಃ=ಲಕ್ಷ್ಮಣನು, ತಂ–ಆ ಕುಂಭಕರ್ಣನನ್ನು, ಶರವರ್ಷಧಾರಯಾ=ಬಾಣಗಳ ವರ್ಷದಿಂದ, ನ್ಯವಾರಯತ್–ತಡೆದನು, ಸಃ–ಕುಂಭಕರ್ಣನು, ಸಮರಾಯ = ಯುದ್ಧಕ್ಕಾಗಿ, ಸಮಾಹ್ವಯಂತಂ= ಕರೆಯುತ್ತಿರುವ, ಏನಂ=ಈ ಲಕ್ಷ್ಮಣನನ್ನು, ನಾಚಿಂತಯತ್=ಲಕ್ಷ್ಯಮಾಡದೆ, ಗಿರಿಶೃಂಗಧಾರೀ ಸನ್=ಪರ್ವತ ಶಿಖರವನ್ನು ಕೈಯಲ್ಲಿ ಹಿಡಿದುಕೊಂಡು ರಾಮಂಪ್ರತಿ–ಶ್ರೀರಾಮಚಂದ್ರನನ್ನು ಕುರಿತು, ಜಗಾಮ=ಹೋದನು

ತಾತ್ಪರ್ಯ:––ಕುಂಭಕರ್ಣನು ಯುದ್ಧಕಾಗಿ ಶ್ರೀರಾಮರ ಕಡೆಗೆ ಹೋಗುತ್ತಿರಲಾಗಿ ಲಕ್ಷ್ಮಣನು ಅವನನ್ನು ಬಾಣ ಪರಂಪರೆಯಿಂದ ತಡೆದನು. ಅವನಾದರೋ, ಈ ರೀತಿಯಾಗಿ ಯುದ್ಧಕ್ಕೆ ಕರೆಯುತ್ತಿರುವ ಲಕ್ಷ್ಮಣನನ್ನು ನಿರಾಕರಿಸಿ ಪರ್ವತ ಶಿಖರವನ್ನು ತೆಗೆದುಕೊಂಡು ರಾಮರ ಬಳಿಗೇ ಹೋದನು.

**ಶ್ಲೋಕ || ಅಥೋಸಮಾದಾಯ ಧನುಃ ಸುಘೋರಂ | ಶರಾನ್ ಸುರೇಶಾಶನಿ ತುಲ್ಯವೇಗಾನ್ || ಪ್ರವೇಶಯಾಮಾಸ ನಿಶಾಚರೇ ಪ್ರಭುಃ | ಸ ರಾಘವಃ ಪೂರ್ವಹತೇಷು ಯದ್ವತ್ ||೧೨೮||**

ಅರ್ಥ:—ಅಥ=ಅನಂತರ, ಪ್ರಭುಃ–ಸ್ವಾಮಿಯಾದ, ಸರಾಘವಃ= ಶ್ರೀರಾಮನು, ಸುಘೋರಂ–ಅತ್ಯಂತ ಘೋರವಾದ, ಧನುಃ–ಧನುಸ್ಸನ್ನು ಸಮಾದಾಯ=ತೆಗೆದುಕೊಂಡು, ಸುರೇಶಾ=ಇಂದ್ರನ, ಅಶನಿ=ವಜ್ರಾಯುಧಕ್ಕೆ, ತುಲ್ಯ=ಸಮಾನವಾದ, ವೇಗಾನ್=ವೇಗವುಳ್ಳ, ಶರಾನ್=ಬಾಣಗಳನ್ನು ನಿಶಾಚರೇ=ಕುಂಭಕರ್ಣನಲ್ಲಿ, ಪೂರ್ವ=ಪೂರ್ವದಲ್ಲಿ, ಹತೇಷು=ಹತರಾದ ಖರಾದಿ ರಾಕ್ಷಸರಲ್ಲಿ, ಯದ್ವತ್=ಯಾವ ರೀತಿಯಲ್ಲಿ ಬಾಣಗಳನ್ನು ಪ್ರಯೋಗಮಾಡಿದನೋ, ತದ್ವತ್–ಅದೇ ರೀತಿಯಾಗಿ, ಪ್ರವೇಶಯಾಮಾಸ– ಈ ಕುಂಭಕರ್ಣನಲ್ಲಿಯೂ ಪ್ರಯೋಗಮಾಡಿದನು.

ತಾತ್ಪರ್ಯ:— ಶ್ರೀರಾಮನು ಇಂದ್ರ ಧನುಸ್ಸಿಗೆ ಸಮಾನವಾದ ಅತಿ ಪ್ರಬಲವಾದ ಧನುಸ್ಸನ್ನು ತೆಗೆದುಕೊಂಡು ತಾನು ಪೂರ್ವದಲ್ಲಿ ಹತರಾದ ಖರಾದಿ ರಾಕ್ಷಸರಲ್ಲಿ ಯಾವ ಪ್ರಕಾರ ಬಾಣ ಪ್ರಯೋಗಮಾಡಿದ್ದನೋ ಅದೇ ರೀತಿಯಾಗಿ ಈ ಕುಂಭಕರ್ಣನಲ್ಲಿಯೂ ಈಗ ಪ್ರಯೋಗ ಮಾಡಿದನು.

**ಶ್ಲೋಕ || ಯಾವದ್ಬಲೇನ ನ್ಯಹನತ್ಖರಾದೀನ್ | ನ್ತಾವತೈವ ನ್ಯಪತತ್ಸ ರಾಕ್ಷಸಃ || ಅಥ ಪ್ರಹಸ್ಯಾತ್ಮ ಬಲೈಕದೇಶಂ | ಪ್ರದರ್ಶಯನ್ ಬಾಣವರಾನ್ಮುಮೋಚ ||೧೨೯||**

ಅರ್ಥ:— ಸಃ = ಶ್ರೀರಾಮನು, ಖರಾದೀನ್ - ಖರದೂಷಣಾದಿ ರಾಕ್ಷಸರನ್ನು, ಯಾವದ್ಬಲೇನ=ಎಷ್ಟು ಮಾತ್ರ ಬಲವನ್ನು ಪ್ರಯೋಗಮಾಡಿ ನ್ಯಹನತ್=ಸಂಹಾರಮಾಡಿದನೋ, ತಾವತೈವ=ಅಷ್ಟೇ ಬಲದಿಂದ, ಸರಾಕ್ಷಸಃ=ಆ ಕುಂಭಕರ್ಣನು, ನಪ್ಯಪತತ್ - ಬೀಳಲಿಲ್ಲ. ಅಥ = ಅನಂತರ, ಸಃ=ಶ್ರೀರಾಮನು, ಪ್ರಹಸ್ಯ-ಮಂದಹಾಸ ಉಳ್ಳವನಾಗಿ, ಆತ್ಮಬಲೈಕದೇಶಂ=ಆತ್ಮಬಲ=ಮೂಲಬಲದ, ಏಕದೇಶಂ-ಒಂದಂಶವನ್ನು, ಪ್ರದರ್ಶಯನ್=ಪ್ರಕಾಶಮಾಡುತ್ತಾ, ಬಾಣವರಾನ್ - ಶ್ರೇಷ್ಠವಾದ ಬಾಣಗಳನ್ನು, ಮುಮೋಚ-ಪ್ರಯೋಗಮಾಡಿದನು.

ತಾತ್ಪರ್ಯ:— ಶ್ರೀರಾಮನು ಪೂರ್ವದಲ್ಲಿ ಖರದೂಷಣಾದಿ ರಾಕ್ಷಸರನ್ನು ಸಂಹರಿಸುವುದಕ್ಕಾಗಿ ಎಷ್ಟು ಬಲವನ್ನು ಉಪಯೋಗಿಸಿದ್ದನೋ ಅಷ್ಟುಮಾತ್ರ ಬಲದಿಂದ ಈ ಕುಂಭಕರ್ಣನು ಸಾಧ್ಯನಾಗಲಿಲ್ಲ. ಅನಂತರ ಶ್ರೀರಾಮನು ನಕ್ಕು ತನ್ನ ಮೂಲಬಲದ ಸ್ವಲ್ಪ ಭಾಗವನ್ನು ಪ್ರಕಟನಮಾಡಿ ಕುಂಭಕರ್ಣನ ಮೇಲೆ ಪ್ರಬಲವಾದ ಬಾಣಗಳನ್ನು ಪ್ರಯೋಗಮಾಡಿದನು.

ವಿಶೇಷಾಂಶ:— ಖರದೂಷಣಾದಿಗಳಿಗಿಂತಲು ಕುಂಭಕರ್ಣನು ಅಧಿಕ ಬಲಶಾಲಿ ಎಂಬುವುದನ್ನು ಸೂಚಿಸಿದ್ದಾರೆ.

**ಶ್ಲೋಕ || ದ್ವಾಭ್ಯಾಂಸಬಾಹೂನಿ ಚಕರ್ತತಸ್ಯ | ಪದದ್ವಯಂಚೈವ ತಥಾ ಶರಾಭ್ಯಾಂ || ಅಥಾಪರೇಣಾಸ್ಯ ಶಿರೋಽನಿಕೃತ್ಯ | ಸಂಪ್ರಾಕ್ಷಿಪತ್ಸಾಗರತೋಯ ಆಶು ||೧೩೦||**

ಅರ್ಥ:— ಸರಾಮಃ=ಶ್ರೀರಾಮನು, ತಸ್ಯ=ಆ ಕುಂಭಕರ್ಣನ, ಬಾಹೂನಿ=ಎರಡು ಭುಜಗಳನ್ನೂ, ದ್ವಾಭ್ಯಾಂಶರಾಭ್ಯಾಂ=ಎರಡು ಬಾಣಗಳಿಂದಲೂ, ತಥಾ=ಮತ್ತೆ ಎರಡುಬಾಣಗಳಿಂದ, ಪದದ್ವಯಂ-ಎರಡು ಕಾಲುಗಳನ್ನೂ, ಚಕರ್ತ-ಕತ್ತರಿಸಿದನು. ಅಥ=ಅನಂತರ, ಅಪರೇಣ=ಮತ್ತೊಂದು ಬಾಣದಿಂದ, ಅಸ್ಯ=ಇವನ, ಶಿರಃ=ತಲೆಯನ್ನು, ನಿಕೃತ್ಯ=ಛೇಧನ ಮಾಡಿ, ಆಶು=ತಕ್ಷಣದಲ್ಲಿಯೇ, ಸಾಗರತೋಯೇ=ಸಮುದ್ರದ ನೀರಿನಲ್ಲಿ ಸಂಪ್ರಾಕ್ಷಿಪತ್—ಹಾಕಿದನು.

ತಾತ್ಪರ್ಯ:— ವಿಶೇಷವಿಷಯವು:— ಇಲ್ಲಿ ಶ್ರೀಹರಿಯ ಏಕದೇಶ ಬಲ ಪ್ರದರ್ಶನವೆಂದು ಹೇಳಿದ್ದರಿಂದ ಕುಂಭಕರ್ಣನು ಸಮಸ್ತ ರಾಕ್ಷಸರಿಗಿಂತಲೂ ಬಲಾಧಿಕ್ಯನೆಂದು ತಿಳಿಯಬೇಕು.

ಶ್ರೀರಾಮರು ಶ್ರೀಹರಿಯ ಏಕದೇಶ ಬಲವನ್ನು ಪ್ರಕಟನಮಾಡಿ ಎರಡು ಬಾಣಗಳಿಂದ ಕುಂಭಕರ್ಣನ ಎರಡು ಬಾಹುಗಳನ್ನೂ ಮತ್ತೆರಡು ಬಾಣಗಳಿಂದ ಅವನ ಪಾದದ್ವಯವನ್ನೂ ಕತ್ತರಿಸಿ, ಅನಂತರ ಬೇರೊಂದು ಬಾಣದಿಂದ ಅವನ ಶಿರಸ್ಸನ್ನೂ ಛೇದಿಸಿ ತದನಂತರ ಛೇದನ ಮಾಡಿದ ಶರೀರವನ್ನು ಸಮುದ್ರದಲ್ಲಿ ಹಾಕಿಸಿದನು.

ಶ್ಲೋಕ ॥ ಅವರ್ಧತಾಬ್ಧಿಃ ಪತಿತೇಸ್ಯಕಾಯೇ । ಮಹಾಚಲಾಭೇಕ್ಷಣ ದಾಚರಸ್ಯ ॥ ಸುರಾಶ್ಚ ಸರ್ವೇ ವವೃಷುಃ ಪ್ರಸೂನೈಃ । ಮುದಾಸ್ತುವಂತೋ ರಘುವರ್ಯಮೂರ್ಧನಿ ॥೧೩೦॥

ಅರ್ಥ:— ಕ್ಷಣದಾಚರಸ್ಯ=ಕ್ಷಣದಾ=ರಾತ್ರಿಯಲ್ಲಿ, ಚರಸ್ಯ=ಸಂಚಾರ ಮಾಡತಕ್ಕ ( ರಾಕ್ಷಸನಾದ ) ಅಸ್ಯ–ಆ ಕುಂಭಕರ್ಣನ, ಮಹಾಚಲಾಭೇ= ಮಹಾಚಲ=ಮಹಾ ಪರ್ವತ ರೂಪದ, ಕಾಯೇ=ಶರೀರವು, ಪತಿತೇಸತಿ– ನೀರಿನಲ್ಲಿ ಹಾಕಲ್ಪಡುತ್ತಿರಲಾಗಿ, ಅಬ್ಧಿಃ=ಸಮುದ್ರವು, ಅಭಿವರ್ಧತ=ಉಕ್ಕಿತು. ಸರ್ವೇ=ಸಮಸ್ತರಾದ, ಸುರಾಶ್ಚ=ದೇವತೆಗಳು, ( ರಾಮಂ– ಶ್ರೀರಾಮಚಂದ್ರನನ್ನು ) ಮುದಾ=ಸಂತೋಷದಿಂದ, ಸ್ತುವಂತಃಸಂತಃ–ಸ್ತೋತ್ರಮಾಡುತ್ತಾ, ರಘುವರ್ಯಮೂರ್ಧನಿ=ರಘುವರ್ಯ=ರಘುಕುಲ ಶ್ರೇಷ್ಠನಾದ ಶ್ರೀರಾಮದೇವರ, ಮೂರ್ಧನಿ=ಶಿರಸ್ಸಿನಲ್ಲಿ, ಪ್ರಸೂನೈಃ–ಪುಷ್ಪಗಳಿಂದ, ವವೃಷುಃ=ಮಳೆಗರೆದರು.

ತಾತ್ಪರ್ಯ:— ಶ್ರೀರಾಮಚಂದ್ರನಿಂದ ಹತನಾದ ಕುಂಭಕರ್ಣನ ಮಹಾಪರ್ವತಕ್ಕೆ ಸಮಾನವಾದ ಶರೀರವು ಸಮುದ್ರದಲ್ಲಿ ಬಿದ್ದವಡನೆಯೇ ಆ ಸಮುದ್ರವು ತನ್ನ ಹದ್ದುಮೀರಿ ಉಕ್ಕಿ ಬಂದಿತು. ಸಮಸ್ತರಾದ ದೇವತೆಗಳೂ ಇದನ್ನು ನೋಡಿ ಬಹಳ ಸಂತೋಷಪಟ್ಟು ಶ್ರೀರಾಮನನ್ನು ಸ್ತೋತ್ರಮಾಡಿ ಆತನ ಶಿರಸ್ಸಿನಲ್ಲಿ ಹೂಮಳೆಗರೆದರು.

ಅವತಾರಿಕೆ:— ರಾಕ್ಷಸನ ಶರೀರವನ್ನು ಸಮುದ್ರದಲ್ಲಿ ಹಾಕಿದೊಡನೆಯೇ ಅದು ಉಕ್ಕಿದ ಕಾರಣವನ್ನು ಹೇಳುತ್ತಾರೆ:—

ಶ್ಲೋಕ || ಯೋಜನಾನಾಂ ತ್ರಿಲಕ್ಷಂಹಿ | ಕುಂಭಕರ್ಣೋಽಭ್ಯವರ್ಧತ ||
ಪೂರ್ವಂ ಪಶ್ಚಾತ್ಸಂಚುಕೋಚ | ಲಂಕಾಯಾ ಮುಷಿತುಂಸ್ವಯಂ ||೧೩೨||

ಶ್ಲೋಕ || ಸತುಸ್ವಭಾವಮಾಪನ್ನೋ | ಮ್ರಿಯಮಾಣೋಽಭ್ಯವರ್ಧತ |
ತೇನಾಸ್ಮಿನ್ಪತಿತೇತ್ವಬ್ಧಿ ರವರ್ಧದಧಿಕಂ ತದಾ ||೧೩೩||

ಅರ್ಥ: —ಕುಂಭಕರ್ಣಃ=ಕುಂಭಕರ್ಣನು, ಪೂರ್ವಂ = ಲಂಕೆಯಲ್ಲಿ ವಾಸಮಾಡುವುದಕ್ಕಿಂತ ಮೊದಲು (ಬಾಲ್ಯಾವಸ್ಥೆಯಲ್ಲಿ) ತ್ರಿಲಕ್ಷಂ=ಮೂರು ಲಕ್ಷ ಯೋಜನಾನಾಂ-ಯೋಜನಗಳ ವಿಸ್ತೀರ್ಣದಷ್ಟು ದೊಡ್ಡದಾಗಿ ಅಭ್ಯವರ್ಧತ=ಉನ್ನತನಾಗಿದ್ದನು, ಪಶ್ಚಾತ್=ಅನಂತರ, ಲಂಕಾಯಾಂ= ಲಂಕಾಪಟ್ಟಣದಲ್ಲಿ, ವುಷಿತುಂ=ವಾಸಮಾಡುವುದಕ್ಕಾಗಿ, ಸ್ವಯಂ=ತನ್ನ ಶರೀರವನ್ನು, ಸಂಚುಕೋಚ-ಸಂಕೋಚ ಮಾಡಿಕೊಂಡಿದ್ದನು. ||೧೩೨||

ಅರ್ಥ:—ಮ್ರಿಯಮಾಣಃ-ಮರಣವನ್ನು ಹೊಂದತಕ್ಕ, ಸತು-ಆ ಕುಂಭಕರ್ಣನು, ಸ್ವಭಾವಂ=ತನ್ನ ನಿಜರೂಪವನ್ನು, ಆಪನ್ನಃಸನ್=ಹೊಂದಿ ಅಭ್ಯವರ್ಧತ-ಬಳೆದನು. ತೇನ=ಆ ಕಾರಣದಿಂದ, ಅಸ್ಮಿನ್=ಈ ಕುಂಭಕರ್ಣನ ಶರೀರವು, ಪತಿತೇಸತಿ=ಬೀಳುವಾಗ, ಅಬ್ಧಿಸ್ತು = ಸಮುದ್ರವು, ತದಾ=ಆ ಕಾಲದಲ್ಲಿ, ಅಧಿಕಂ=ತನ್ನ ಮರ್ಯಾದಾತಿಕ್ರಮಣಮಾಡಿ, ಅಭಿವರ್ಧತ=ಉಕ್ಕಿತು ||೧೩೩||

ತಾತ್ಪರ್ಯ:—ಮೃತನಾದ ಕುಂಭಕರ್ಣನ ಶರೀರವು ಸಮುದ್ರದಲ್ಲಿ ಬಿದ್ದ ಒಡನೆಯೇ ಸಮುದ್ರವು ಮಿತಿಮೀರಿ ಉಕ್ಕಿ ಬರುವುದಕ್ಕೆ ಕಾರಣವೇನೆಂಬುವುದನ್ನು ಈ ಎರಡು ಶ್ಲೋಕದಿಂದ ನಿರೂಪಣಮಾಡುತ್ತಾರೆ.

ಈ ಕುಂಭಕರ್ಣನು ತನ್ನ ನಿಜ ರೂಪದಿಂದಿರುವಾಗ ಲಂಕಾಪಟ್ಟಣ ಪ್ರವೇಶಕ್ಕೆ ಮುಂಚೆ ಮೂರುಲಕ್ಷ ಯೋಜನ ವಿಸ್ತೀರ್ಣದ ಶರೀರವುಳ್ಳವನಾಗಿದ್ದನು- ಲಂಕಾಪಟ್ಟಣದಲ್ಲಿ ವಾಸಮಾಡುವ ಉದ್ದೇಶದಿಂದ ಅಷ್ಟು ದೊಡ್ಡ ಶರೀರವನ್ನು ತಾನೇ ಸಂಕೋಚಮಾಡಿಕೊಂಡನು. ಕೊನೆಗೆ ಸಾಯುವ ಕಾಲದಲ್ಲಿ ತನ್ನ ನಿಜರೂಪವನ್ನು ಹೊಂದಿ ಮೃತನಾದನು. ಇಂತಹ ಅಗಾಧವಾದ ಶರೀರವು ಸಮುದ್ರದಲ್ಲಿ ಬಿದ್ದವಡನೆಯೇ ಅದು ಮಿತಿ ಮೀರಿ ಉಕ್ಕಿತು.

**ಶ್ಲೋಕ || ಅಥಾಪರೇಯೇ ರಜನೀಚರಾಸ್ತದಾ । ಕಪಿಪ್ರವೀರೈರ್ನಿಹತಾಶ್ಚ ಸರ್ವಶಃ || ಹತಾವಶಿಷ್ಟಾಸ್ತ್ವರಿತಾಃ ಪ್ರದುದ್ರುವು । ಭ್ರಾತು ರ್ವಧಂ ಚೋಚು ರುಪೇತ್ಯ ರಾವಣಂ ||೧೩೬||**

ಅರ್ಥ:—ಅಥ–ಅನಂತರ, ಅಪರೇ=ಕುಂಭಕರ್ಣನನ್ನು ಅನುಸರಿಸಿ ಯುದ್ಧ ಮಾಡುತ್ತಿದ್ದ, ಯೇರಜನೀಚರಾಃ–ರಾಕ್ಷಸರು (ಸ್ಥಿತಾಃ = ಇದ್ದರೋ) ತಾಶ್ಚಸರ್ವಶಃ=ಅವರೆಲ್ಲರೂ, ಕಪಿಪ್ರವೀರೈಃ=ವಾನರ ವೀರರಿಂದ, ನಿಹತಾಃ–ಸಂಹಾರಮಾಡಲ್ಪಟ್ಟರು, ಅಥ=ಹೀಗಾದನಂತರ, ಹತಾವಶಿಷ್ಟಾಃ =ಹತಶೇಷರಾದವರು, ತ್ವರಿತಾಃ=ಜಾಗ್ರತೆಯಾಗಿ, ಪ್ರದುದ್ರುವುಃ = ಓಡಿ ಹೋದರು, ತೇ=ಅವರು, ರಾವಣಂ=ರಾವಣನನ್ನು, ಉಪೇತ್ಯ–ಹೊಂದಿ, ಭ್ರಾತುಃ=ತಮ್ಮನಾದ ಕುಂಭಕರ್ಣನ, ವಧಂ= ಸಂಹಾರದ ಸಮಾಚಾರ ವನ್ನು, ಊಚುಃ=ಹೇಳಿದರು.

ತಾತ್ಪರ್ಯ:—ಕುಂಭಕರ್ಣನ ವಧಾನಂತರ ಅವನನ್ನು ಅನುಸರಿಸಿ ಬಂದಿದ್ದ ಸಮಸ್ತ ರಾಕ್ಷಸರನ್ನೂ ಕಪಿವೀರರು ಸಂಹರಿಸಿದರು. ಈ ರೀತಿ ಯಾಗಿ ಉಳಿದ ರಾಕ್ಷಸರು ತಕ್ಷಣವೇ ಓಡಿಹೋಗಿ ರಾವಣನಿಗೆ ಕುಂಭಕ ರ್ಣನ ವಧೆಯ ಸಮಾಚಾರವನ್ನು ತಿಳಿಸಿದರು.

**ಶ್ಲೋಕ || ಸದುಃಖ ತಪ್ತೋ ನಿಪಪಾತ ಮೂರ್ಛಿತೋ । ನಿರಾಶಕಶ್ಚಾ ಭವ ದಾತ್ಮ ಜೀವಿತೇ || ತಮಾಹ ಪುತ್ರಸ್ತ್ರಿದಶೇಶಶತ್ರು । ರ್ನಿಯುಂ ಕ್ಷ್ವಮಾಂ ಶತ್ರುವಧಾಯ ಮಾಚಿರಂ ||೧೩೭||**

ಅರ್ಥ.—ಸಃ=ಆ ರಾವಣನು, ದುಃಖತಪ್ತಃಸನ್–ದುಃಖದಲ್ಲಿ ಮುಳು ಗಿದವನಾಗಿ, ಮೂರ್ಛಿತಃ=ಮೂರ್ಛಿತನಾಗಿ, ನಿಪಪಾತ–ನೆಲಕ್ಕೆ ಬಿದ್ದನು, ಮತ್ತು, ಆತ್ಮಜೀವಿತೇ–ತನ್ನ ಪ್ರಾಣದ ವಿಷಯದಲ್ಲಿ, ನಿರಾಶಕಶ್ಚ = ಆಶೆ ಯಿಲ್ಲದವನಾಗಿಯೂ, ಅಭವತ್–ಆದನು. ತಂ=ಆ ರಾವಣನನ್ನು ಕುರಿತು ಪುತ್ರಃ=ಅವನ ಮಗನಾದ, ತ್ರಿದಿಶೇಶಶತ್ರುಃ=ತ್ರಿದಿಶೇಶ – ಸ್ವರ್ಗಲೋಕದ ಪತಿಯಾದ ಇಂದ್ರನ, ಶತ್ರುಃ=ವೈರಿಯಾದ ಇಂದ್ರಜಿತುವು, (ಮಾತನಾಡಿ ದನು) ಶತ್ರುವಧಾಯ=ಶತ್ರುಗಳನ್ನು ಸಂಹರಿಸುವುದಕ್ಕೆ, ನಿಯುಂಕ್ಷ್ವ =ನೇ ಮಿಸು, ಚಿರಂ=ಆಲಸ್ಯವನ್ನು, ಮಾಂ (ಕುರು) = ಮಾಡಬೇಡ, ಇತಿ – ಹೀ ಗೆಂದು=ಆಹ=ಹೇಳಿದನು.

ತಾತ್ಪರ್ಯ:— ರಾವಣನು ಕುಂಬಕರ್ಣನ ಮರಣದ ಸುದ್ದಿಯನ್ನು ಕೇಳಿ ದುಃಖದಿಂದ ಸಂತಪ್ತನಾಗಿ ಮೂರ್ಛೆಹೊಂದಿದನು, ಹಾಗೆಯೇ ತನ್ನ ಒದುಕುವಿಕೆಯ ವಿಷಯದಲ್ಲಿ ಆಶೆ ಇಲ್ಲದವನಾದನು. ಆಗ ರಾವಣನನ್ನು ಕುರಿತು ಅವನ ಮಗ ( ಇಂದ್ರಶತ್ರುವಾದ ) ಇಂದ್ರಜಿತುವು, ಶತ್ರುವನ್ನು ನಾಶಮಾಡುವುದಕ್ಕಾಗಿ ನನಗೆ ಅಪ್ಪಣೆ ಕೊಡು, ಆಲಸ್ಯ ಮಾಡಬೇಡವೆಂದು ಹೇಳಿದನು.

ಶ್ಲೋಕ ॥ ಮಯಾಗೃಹೀತ ಸ್ತ್ರಿದಶೇಶ್ವರಃ ಪುರಾ । ವಿಷೀದಸೇಕಿಂ ನರ
ರಾಜ ಪುತ್ರತಃ ॥ ಸಏವ ಮುಕ್ತ್ವಾ ಪ್ರಜುಹಾವ ಪಾವಕಂ । ಶಿವಂ
ಸಮಭ್ಯರ್ಚ್ಯ ಸಮಾರುಹದ್ರಥಂ ।೧೩೬।

ಅರ್ಥ:— ಪುರಾ=ಪೂರ್ವದಲ್ಲಿ. ತ್ರಿದಿಶೇಶ್ವರಃ – ದೇವೇಶ್ವರನಾದ ಇಂದ್ರನು, ಮಯಾ=ನನ್ನಿಂದ, ಗೃಹೀತಃ = ಹಿಡಿಯಲ್ಪಟ್ಟನು. ಹೀಗಿರಲಾಗಿ, ನರರಾಜಪುತ್ರತಃ = ಮನುಷ್ಯರಾಜನಾದ ದಶರಥ ಪುತ್ರನಾದ ಈ ರಾಮನ ದೆಶೆಯಿಂದ, ಕಿಂವಿಷೀದಸೇ=ಏತಕ್ಕೆ ವಿಷಾದಿಸುತ್ತೀಯೆ, ಏವಂ= ಈ ಪ್ರಕಾರವಾಗಿ, ಉಕ್ತ್ವಾ = ಹೇಳಿ, ಸಃ=ಆ ಇಂದ್ರಜಿತುವು, ಶಿವಂ– ರುದ್ರದೇವರನ್ನು, ಸಮಭ್ಯರ್ಚ್ಯ=ಚೆನ್ನಾಗಿ ಪೂಜಿಸಿ, ಪಾವಕಂ–ಅಗ್ನಿಯನ್ನೂ ಪೂಜಿಸಿ, ಪ್ರಜುಹಾವ–ಹೋಮ ಮಾಡಿದನು. ( ಅನಂತರ ) ರಥಂ– ರಥವನ್ನು, ಸಮಾರುಹತ್ =ಏರಿದನು.

ತಾತ್ಪರ್ಯ:—ಇಂದ್ರಜಿತುವು ರಾವಣನನ್ನು ಕುರಿತು ಹೇಳುತ್ತಾನೆ. ಪೂರ್ವದಲ್ಲಿ ನಾನು ಯುದ್ಧದಲ್ಲಿ ದೇವೇಂದ್ರನನ್ನು ಜಯಿಸಿ ಅವನನ್ನು ಹಿಡಿದು ತರಲಿಲ್ಲವೇ ಈ ಮನುಷ್ಯನಾದ ರಾಮನ ವಿಷಯದಲ್ಲಿ ಸಂಶಯಪಟ್ಟು ಏತಕ್ಕೆ ದುಃಖಿಸುತ್ತೀಯೆ. ನನಗೆ ಅಪ್ಪಣೆ ಕೊಡು, ನಾನು ಯುದ್ಧಮಾಡಿ ಎಲ್ಲರನ್ನೂ ನಾಶಮಾಡುತ್ತೇನೆಂದು ಹೇಳಿ ತಾನು ಅಗ್ನಿಯಲ್ಲಿ ಹೋಮ ಮಾಡಿ, ಈಶ್ವರನನ್ನು ಪೂಜಿಸಿ ರಥವನ್ನು ಏರಿದನು.

ಶ್ಲೋಕ ॥ ಸ ಆತ್ತಧನ್ವಾ ಸಶರೋ ರಥೇನ । ವಿಯತ್ಸ ಮಾರುಹ್ಯ ಯಯಾವ ದರ್ಶನಂ ॥ ಸನಾಗಪಾಶೈರ್ವರತಃ ಶಿವಸ್ಯ । ಬಬಂಧ ಸರ್ವಾನ್ ಕಪಿವೀರ ಸಂಘಾನ್ ॥೧೩೭॥

ಅರ್ಥ:—ಆತ್ತಧನ್ವಾ=ಧಾರಣಮಾಡಲ್ಪಟ್ಟ ಧನುಸ್ಸುಳ್ಳ, ಸಃ=ಆ ಇಂದ್ರಜಿತುವು, ಸಶರಃ=ಬಾಣಗಳಿಂದ ಸಹಿತನಾಗಿ, ರಥೇನ=ರಥದಿಂದ, ವಿಯತ್–ಆಕಾಶವನ್ನು, ಆರುಹ್ಯ=ಏರಿ, ಅದರ್ಶನಂ=ದೃಷ್ಟ್ಯಗೋಚರವನ್ನು, ಯಯೌ=ಹೊಂದಿದನು (ಕಣ್ಣಿಗೆ ಕಾಣದೆ ಹೋದನು) ಸಃ=ಅವನು. ಶಿವಸ್ಯ=ರುದ್ರದೇವರ, ವರತಃ–ವರದಿಂದ, ಕಪಿವೀರಸಂಘಾನ್=ಕಪಿಶ್ರೇಷ್ಠರ ಸಮೂಹಗಳನ್ನು, ಸರ್ವಾನ್–ಸಮಸ್ತವನ್ನೂ, ನಾಗಪಾಶೈಃ=ನಾಗಾಸ್ತ್ರದಿಂದ, ಬಬಂಧ–ಕಟ್ಟಿದನು.

ತಾತ್ಪರ್ಯ:—ಇಂದ್ರಜಿತುವು ರಾವಣನಿಂದ ಅಪ್ಪಣೆ ಪಡೆದು ಧನುರ್ಬಾಣಗಳಿಂದ ಸಹಿತನಾಗಿ ರಥವಲ್ಲಿ ಕುಳಿತು ಆಕಾಶ ಮಾರ್ಗಕ್ಕೆ ಏರಿ ಅಲ್ಲಿ ಅಗೋಚರನಾದನು ಅವನು ರುದ್ರದೇವರ ವರದಿಂದ ಪಡೆದಿದ್ದ ನಾಗಾಸ್ತ್ರದಿಂದ ಸಮಸ್ತ ಕಪಿವೀರರ ಸಮೂಹಗಳನ್ನು ಕಟ್ಟಿದನು.

ಅವತಾರಿಕೆ:— ಇಂದ್ರಜಿತುವು ಅಂತರಿಕ್ಷಮಾರ್ಗಕ್ಕೆ ಹೋಗಿ ಅಲ್ಲಿ ಇತರರಿಗೆ ಗೋಚರನಾಗದೆ ನಾಗಾಸ್ತ್ರ ಪ್ರಯೋಗಮಾಡಿ ಸಮಸ್ತ ಕಪಿಗಳನ್ನೂ ಬಂಧನಮಾಡಿದನು. ಈ ಕಪಿಗಳಿಗೆ ನಾಗಾಸ್ತ್ರದಿಂದ ಹೇಗೆ ಬಿಡುಗಡೆ ಆಯಿತೆಂಬ ವಿಷಯವನ್ನು ನಿರ್ಣಯಾಚಾರ್ಯರು ಈ ಕೆಳಗೆ ಕಂಡ ಶ್ಲೋಕಗಳಿಂದ ವಿಶದಪಡಿಸುತ್ತಾರೆ. ಹೇಗೆಂದರೆ:—

**ಶ್ಲೋಕ || ಪುರಾವತಾರಾಯ** ಯದಾಸ ವಿಷ್ಣು | **ರ್ದಿದೇಶ ಸರ್ವಾಂಸ್ತ್ರಿದಶಾಂ ಸ್ತದೈವ** || ಮಮಾಪಿ ಸೇವಾ ಭವತಾ ಪ್ರಯೋಜ್ಯೇ | ತ್ಯೇವಂ ಗರುತ್ಮಾ ನವದದ್ವೃಷಾಕಪಿಂ ||೧೩೮|

ಅರ್ಥ:—ಸವಿಷ್ಣುಃ=ರಾಮಾವತಾರದ ಮೂಲರೂಪರಾದ ಶ್ರೀವಿಷ್ಣುವು, ಪುರಾ=ರಾಮಾವತಾರ ಮಾಡುವ ಕಾಲದಲ್ಲಿ, ಸರ್ವಾನ್=ಸಮಸ್ತರಾದ ತ್ರಿದಶಾನ್–ಬ್ರಹ್ಮಾದಿ ದೇವತೆಗಳನ್ನು, ಅವತಾರಾಯ=ಭೂಲೋಕದಲ್ಲಿ ಅವತಾರಮಾಡಿರಿ ಎಂದು, ಯದಾ=ಯಾವಾಗ, ದಿದೇಶ–ಆಜ್ಞಾಪಿಸಿದನೋ, ತದೈವ=ಆಗ, ಗರುತ್ಮಾನ್–ಗರುಡನು, ವೃಷಾಕಪಿಂಪ್ರತಿ=ಅಭೀಷ್ಟದಾತೃತ್ವಾದಿ ಗುಣಗಳುಳ್ಳ ಶ್ರೀವಿಷ್ಣುವನ್ನು ಕುರಿತು, ಭವತಾ = ನಿನ್ನಿಂದ, ಮಮಾಪಿ–ನನಗೂ ಸಹಾ, ಸೇವಾ=ಭೂಲೋಕದಲ್ಲಿ ನಿನ್ನ ಸೇವೆಯು, ಪ್ರಯೋಜ್ಯಾ=ಆಜ್ಞೆಮಾಡಬೇಕು. ಇತ್ಯೇವಂ=ಹೀಗೆಂದು, ಅವದತ್=ಹೇಳಿದನು.

ತಾತ್ಪರ್ಯ:—ಶ್ರೀವಿಷ್ಣುವು ರಾಮಾವತಾರ ಮಾಡುವ ಕಾಲದಲ್ಲಿ ಬ್ರಹ್ಮನೇ ಮೊದಲಾದ ದೇವತೆಗಳನ್ನು ಭೂಮಿಯಲ್ಲಿ ಹುಟ್ಟುವುದಕ್ಕೆ ಅಪ್ಪಣೆಮಾಡಿದನು. ಆ ಕಾಲದಲ್ಲಿ ಗರುಡನೂ ಸಹ ನನಗೂ ನಿನ್ನ ಸೇವಾ ಮಾಡುವುದಕ್ಕೆ ಆಜ್ಞಾಪಿಸಬೇಕೆಂದು ಇಷ್ಟಾರ್ಥಗಳನ್ನು ಸಿದ್ಧಿಮಾಡತಕ್ಕ ದುಃಖಪರಿಹಾರಕನಾದ ಶ್ರೀವಿಷ್ಣು ಪರಮಾತ್ಮನನ್ನು ಪ್ರಾರ್ಥಿಸಿದನು.

ಇಲ್ಲಿ ವೃಷಾಕಪಿಃ ಎಂಬ ಶಬ್ದಕ್ಕೆ ವ್ಯಾಖ್ಯಾನಕಾರರು ಹೀಗೆ ಅರ್ಥಮಾಡಿದ್ದಾರೆ. ( ಅಭಿಷ್ಟವರ್ಷಣಾತ್=ಇಷ್ಟಾರ್ಥವನ್ನು ಕೊಡುವುದರಿಂದ ಮತ್ತು ಐಶ್ವರ್ಯಾದಿ ಷಡ್ಗುಣೋಪೇತನಾಗಿರುವುದರಿಂದ (ವೃಷ) ಎಂತಲೂ, ಅಕಂ-ದುಃಖಂ, ಪೇಷಯತೀತಿ=ದುಃಖವನ್ನು ಪರಿಹಾರಮಾಡುವುದರಿಂದ, ಅಕಪಿ ಎಂತಲೂ, ಏತೇನ ವೃಷಾಕಪಿ ಎಂದು ಹೆಸರು. ಇಂತಹ ಗುಣಗಳುಳ್ಳ ವೃಷಾಕಪಿಯು=ಶ್ರೀವಿಷ್ಣು ಪರಮಾತ್ಮನೆಂದರ್ಥವು. )

**ಶ್ಲೋಕ || ತಮಾಹವಿಷ್ಣುರ್ನಭು ವಿಪ್ರಜಾತಿ ! ಮುಪ್ಯೆಹಿಸೇವಾಂ ತವಚಾನ್ಯಥಾಹಂ || ಅದಾಸ್ಯ ಏವಾತ್ರ ಯಥಾಯಶಃಸ್ಯಾ | ಧರ್ಮಶ್ಚ ಕರ್ತ್ರವ್ಯ ಕೃದೇವಚಸ್ಯಾಃ ||೧೩೯||**

ಅರ್ಥ:—ವಿಷ್ಣುಃ=ಶ್ರೀಪರಮಾತ್ಮನು, ತಂಪ್ರತಿ=ಆ ಗರುಡನನ್ನು ಕುರಿತು, ತ್ವಂ=ನೀನು, ಭುವಿ = ಭೂಲೋಕವಲ್ಲಿ, ಪ್ರಜಾತಿಂ – ಉತ್ಪತ್ತಿಯನ್ನು, ನಉಪ್ಯೆಹಿ=ಹೊಂದಬೇಡ, ಅಹಂ=ನಾನು, ತವ–ನಿನಗೆ, ಅನ್ಯಥಾ=ಬೇರೆ ವಿಧವಾಗಿ, ಅತ್ರ=ರಾಮಾವತಾರದಲ್ಲಿ, ತೇ=ನಿನಗೆ, ಯಥಾ–ಯಾವರೀತಿಯಲ್ಲಿ, ಯಶಃ–ಕೀರ್ತಿಯು, ಸ್ಯಾತ್–ಬರುವುದೋ, ತಥೈವ=ಅದೇ ಪ್ರಕಾರವಾಗಿ, ತವ = ನಿನಗೆ, ಸೇವಾಂ = ಸೇವೆಯನ್ನು, ಅದಾಸ್ಯ–ಕೊಡುತ್ತೇನೆ, ತದಾ–ಆಗ್ಯೆ, ತ್ವಂ–ನೀನು, ಕರ್ತವ್ಯಕೃತ್=ಕೃತಕಾರ್ಯವಾದ, ಧರ್ಮಃ=ಧರ್ಮವುಳ್ಳವನು, ಸ್ಯಾಃ=ಆಗುತ್ತೀಯೋ, ಇತಿ=ಹೀಗೆಂದು, ಆಹ=ಹೇಳಿದ್ದನು.

ತಾತ್ಪರ್ಯ:—ಗರುಡದೇವನು ಶ್ರೀವಿಷ್ಣು ಪರಮಾತ್ಮನನ್ನು ಪ್ರಾರ್ಥಿಸಿದಾಗ ಶ್ರೀವಿಷ್ಣು ಪರಮಾತ್ಮನು ಗರುಡನನ್ನು ಕುರಿತು ನೀನು ರಾಮಾವತಾರದಲ್ಲಿ ಭೂಲೋಕದಲ್ಲಿ ಅವತಾರಮಾಡಬೇಡ ಯಾವರೀತಿ ಸೇವಾಮಾಡಿದರೆ ಯಶಸ್ಸು ಬರುತ್ತದೋ ಅಂತಃ ಸೇವೆಯನ್ನು ನಿನಗೆ ಹೇಳುತ್ತೇನೆ ಆಗ್ಯೆ ನೀನು ಕರ್ತವ್ಯಕಾರ್ಯ ಮಾಡಿದ ಧರ್ಮವುಳ್ಳವನಾಗುತ್ತೀಯೆಂದು ಹೇಳಿದನು

**ಅವತಾರಿಕೆ:—ಶ್ರೀವಿಷ್ಣು ಪರಮಾತ್ಮನು ಗರುಡನಿಗೆ ಯಾವರೀತಿ ಸೇವಾಮಾಡಬೇಕೆಂದು ಹೇಳಿದನೆಂಬುದನ್ನು ಈ ಎರಡು ಶ್ಲೋಕದಲ್ಲಿ ವಿಶದ ಪಡಿಸುತ್ತಾರೆ:—**

**ಶ್ಲೋಕ|| ವರೇಣ ಶರ್ವಸ್ಯಹಿ ರಾವಣಾತ್ಮಜೋ । ಯದಾನಿಬಧ್ನಾತಿಕಪೀನ್ ಸಲಕ್ಷ್ಮಣಾನ್ || ಉರಂಗಪಾಶೇನ ತದಾತ್ವಮೇವ । ಸಮೇತ್ಯ ಸರ್ವಾನಪಿ ಮೋಚಯಸ್ವ ||೧೪೮||**

**ಶ್ಲೋಕ|| ಅಹಂ ಸಮರ್ಥೋಽಪಿ ಸಲಕ್ಷ್ಮಣಶ್ಚ । ತಥಾ ಹನೂಮಾನ್ನವಿಮೋಚಯಾಮಃ || ತವಪ್ರಿಯಾರ್ಥಂ ಗರುಡೈಷ ಏವ । ಕೃತಸ್ತವಾದೇಶ ಇಮಂ ಕುರುಷ್ವ ||೧೪೯||**

ಅರ್ಥ:—ಸಃ-ಶ್ರೀವಿಷ್ಣು ಪರಮಾತ್ಮನು, ತಂಪ್ರತಿ=ಗರುತ್ಮಂತನನ್ನು ಕುರಿತು, ರಾವಣಾತ್ಮಜಃ=ರಾವಣನ ಪುತ್ರನಾದ ಇಂದ್ರಜಿತುವು, ಶರ್ವಸ್ಯ=ರುದ್ರದೇವರ, ವರೇಣ=ವರದಿಂದ, ಯದಾ = ಯಾವಾಗ, ಉರಂಗಪಾಶೇನ=ನಾಗಾಸ್ತ್ರದಿಂದ, ಸಲಕ್ಷ್ಮಣಾನ್ = ಲಕ್ಷ್ಮಣನಿಂದ ಸಹಿತರಾದ, ಕಪೀನ್=ವಾನರರನ್ನು, ನಿಬಧ್ನಾತಿ-ಬಂಧನಮಾಡುತ್ತಾನೋ ತದಾ = ಆಗ ತ್ವಮೇವ=ನೀನೆ ಸಮೇತ್ಯ=ಭೂ ಲೋಕಕ್ಕೆ ಬಂದು, ಸರ್ವಾನಪಿ=ಸಮಸ್ತರನ್ನೂ, ಮೋಚಯಸ್ವ=ಬಿಡುಗಡೆ ಮಾಡು, ಹೇ ! ಗರುಡ = ಎಲೌ ಗರುತ್ಮಂತನೇ, ಸಲಕ್ಷ್ಮಣಃ-ಲಕ್ಷ್ಮಣನೂ, ಅಹಂ=ನಾನೂ, ತಥಾ-ಮತ್ತು, ಹನೂಮಾಂಶ್ಚ=ಹನುಮಂತನು, ಸಮರ್ಥೋಽಪಿ-ಶಕ್ತರಾದಾಗ್ಯೂ, ತವ=ನಿನಗೆ, ಪ್ರಿಯಾರ್ಥಂ= ಪ್ರೀತಿ ಉಂಟುಮಾಡುವುದಕ್ಕಾಗಿ, ವಯಂತ್ರಯಃ = ನಾವು ಮೂವರೂ, ನವಿಮೋಚಯಾಮಃ =ಮೋಚನ ಮಾಡುವುದಿಲ್ಲ. ಇತಿ = ಹೀಗೆಂದು, ತವ = ನಿನಗೆ, ಆದೇಶಃ=ಅಪ್ಪಣೆಯು, ಮಯಾ—ನನ್ನಿಂದ, ಕೃತಃ-ಮಾಡಲ್ಪಟ್ಟಿತು, ಇಮಂ-ಈ ಆಜ್ಞೆಯನ್ನು, ಅನುಸರಿಸಿ, ಕುರುಷ್ವ=ಬಂಧ ಮೋಚನರೂಪವಾದ ಸೇವೆಯನ್ನು ಮಾಡು ಇತಿ=ಹೀಗೆಂದು, ಆಹ-ಹೇಳಿದನು.

ತಾತ್ಪರ್ಯ:—ಶ್ರೀವಿಷ್ಣು ಪರಮಾತ್ಮನು ಗರುಡನನ್ನು ಕುರಿತು ಎಲೌ ಗರುಡನೇ ಇಂದ್ರಜಿತುವು ರಾಮಾವತಾರದಲ್ಲಿ ಲಕ್ಷ್ಮಣನ ಸಹಿತವಾಗಿ ಸಮಸ್ತ ಕಪಿಗಳನ್ನೂ ತಾನು ರುದ್ರದೇವರಿಂದ ಪಡೆದ ನಾಗಾಸ್ತ್ರದಿಂದ ಬಂಧನ ಮಾಡುತ್ತಾನೆ, ಆ ಕಾಲದಲ್ಲಿ ನೀನು ಭೂಲೋಕಕ್ಕೆ ಬಂದು ಎಲ್ಲರನ್ನೂ

ಆ ನಾಗಾಸ್ತ್ರದಿಂದ ವಿಮೋಚನ ಮಾಡುವುದಕ್ಕೆ ನಾನೂ ಲಕ್ಷ್ಮಣನೂ ಹನುಮಂತನೂ ಸಹ ಶಕ್ತರೇ ಆದಾಗ್ಯೂ ನಿನಗೆ ಕೀರ್ತಿ ಯಶಸ್ಸು ಬರುವುದಕ್ಕಾಗಿ ಆ ಕೆಲಸವನ್ನು ನಾವು ಮಾಡುವುದಿಲ್ಲ. ಈ ರೀತಿಯಾಗಿ ನಿನಗೆ ಆಜ್ಞೆ ಮಾಡಿರುತ್ತೇನೆ ಆ ಆಜ್ಞೆಯನ್ನು ಈಗ ನೆರವೇರಿಸೆಂಬುದಾಗಿ ಶ್ರೀರಾಮನು ಗರುಡನಿಗೆ ಹೇಳಿದನೆಂಬು ತಾತ್ಪರ್ಯ.

**ಶ್ಲೋಕ ॥ ತದೇತ ದುಕ್ತಂಹಿ ಪುರಾತ್ಮನಾಯ । ತ್ತತೋಹಿರಾಮೋ ನನು ಮೋಚ ಕಂಚನ ॥ ಸಲಕ್ಷ್ಮಣೋ ನೈವಚ ಮಾರುತಾತ್ಮಜಃ । ಸಏವ ಜಾನಾತಿಚ ದೇವಗುಹ್ಯಂ ॥೧೪೨॥**

ಅರ್ಥ:--ರಾಮಃ= ಶ್ರೀರಾಮನು. ಆತ್ಮನಾ = ತನ್ನ ಸ್ವರೂಪ ದಿಂದ, ಪೂರ್ವದಲ್ಲಿ, ಯತ್-ಯಾವ ಕಾರಣದ್ದೆಸೆಯಿಂದ, ತದೇತತ್ - ಬಂಧವಿಮೋಚನ ಕಾರ್ಯವು, ಉಕ್ತಂಹಿ = ಗರುಡನಿಗೆ ಹೇಳಲ್ಪಟ್ಟಿತ್ತೋ, ತತಃ-ಆ ಕಾರಣದ್ದೆಸೆಯಿಂದ ಕಂಚನ-ಯಾರನ್ನೂ, ನನು ಮೋಚ- ಮೋಚನ ಮಾಡಲಿಲ್ಲ. ಸಲಕ್ಷ್ಮಣಃ = ಲಕ್ಷ್ಮಣನಿಂದ ಕೂಡಿದ, ಮಾರುತಾತ್ಮಜಃ=ಹನುಮಂತನೂ ಸಹ, ದೇವಗುಹ್ಯಂ=ದೇವತೆಗಳ ಗೋಪ್ಯವನ್ನು. ಸಏವ-ತಾವೇನೆ, ಜಾನಾತಿಚ ಬಲ್ಲವರಾದ್ದರಿಂದ, ನನುಮೋಚ=ಯಾರನ್ನೂ ನಾಗಪಾಶ ಬಂಧನದಿಂದ ಮೋಚನ ಮಾಡಲಿಲ್ಲವು.

ತಾತ್ಪರ್ಯ:--ಶ್ರೀರಾಮನು ಅವತಾರ ಮಾಡುವುದಕ್ಕೆ ಮೊದಲು ಗರುಡನಿಗೆ ನಾಗಪಾಶ ವಿಮೋಚನ ಮಾಡುವದಾಗಿ ಹೇಳಿದ್ದನಾದ್ದರಿಂದ ತಾನು ಶಕ್ತನಾಗಿದ್ದಾಗ್ಯೂ ಅವನಿಂದ ಬಂಧನಮೋಚನ ರೂಪವಾದ ಸೇವೆಯನ್ನು ಸ್ವೀಕರಿಸಿ ಅವನಿಗೆ ಯಶಸ್ಸನ್ನುಂಟುಮಾಡುವ ಉದ್ದೇಶದಿಂದ ಶ್ರೀರಾಮನು ಬಂಧ ವಿಮೋಚನ ಮಾಡಲಿಲ್ಲವು. ಲಕ್ಷ್ಮಣನಿಂದ ಸಹಿತನಾದ ಹನುಮಂತನು ದೇವತಾ ಮರ್ಮ (ಗುಹ್ಯ) ವನ್ನು ಬಲ್ಲವರಾದ್ದರಿಂದ ಅವನೂ ಸಹ ಶ್ರೀರಾಮನ ಅಭಿಪ್ರಾಯಾನುಸಾರ ಈ ಕಪಿಗಳನ್ನು ಬಂಧನದಿಂದ ವಿಮೋಚನ ಮಾಡಲಿಲ್ಲವೆಂಬುತಾತ್ಪರ್ಯ.

**ಶ್ಲೋಕ ॥ ಅಥೋನಿ ಬಧ್ಯಾಶು ಹರೀನ್ ಸಲಕ್ಷ್ಮಣಾನ್ । ಜಗಾಮ ರಕ್ಷಃ ಸ್ವಪಿತುಃಸಕಾಶಂ॥ನನಂದ ಚಾಸೌಪಿರಿತಾಶನೇಶ್ವರ । ಶ್ಶಶಂಸ ಪುತ್ರಂಚ ಕೃತಾತ್ಮಕಾರ್ಯಂ ॥೧೪೩॥**

ಅರ್ಥ:--ರಕ್ಷಃ = ರಾಕ್ಷಸನಾದ ಇಂದ್ರಜಿತುವು, ಸಲಕ್ಷ್ಮಣಾನ್= ಲಕ್ಷ್ಮಣನಿಂದ ಸಹಿತರಾದ, ಹರೀನ್=ವಾನರರನ್ನು, ನಿಬಧ್ಯ = ನಾಗಾಸ್ತ್ರ ದಿಂದ ಬಂಧನಮಾಡಿ ಅಥೋ=ಅನಂತರ, ಅಶು = ಜಾಗ್ರತೆಯಾಗಿ, ಸ್ವಪಿತುಃ=ತನ್ನ ತಂದೆಯಾದ ರಾವಣನ, ಸಕಾಶಂ=ಸಮಕ್ಷಮಕ್ಕೆ, ಜಗಾಮ= ಹೊರಟುಹೋದನು ಪಿಶಿತಾಶನೇಶ್ವರಃ- ಪಿಶಿತ=ಮಾಂಸ, ಅಶನ = ಆಹಾರವಾಗಿವುಳ್ಳ ರಾಕ್ಷಸರಿಗೆ, ಈಶ್ವರಃ=ಪ್ರಭುವಾದ, ಅಸೌಚ-ರಾವಣನಾದರೋ, ನನಂದ = ಸಂತೋಷಪಟ್ಟನು. ಮತ್ತು ಕೃತಾತ್ಮಕಾರ್ಯಂ= ಕೃತ=ಮಾಡಲ್ಪಟ್ಟ, ಆತ್ಮಕಾರ್ಯಂ=ತನಗೆ ಪ್ರಯೋಜನಕರವಾದ ಕಾರ್ಯವುಳ್ಳ. ಪುತ್ರಂ=ಮಗನಾದ ಇಂದ್ರಜಿತುವನ್ನು ಶಶಂಸ=ಪ್ರಶಂಸೆಮಾಡಿದನು

ತಾತ್ಪರ್ಯ:--ಇಂದ್ರಜಿತುವು ಯುದ್ಧದಲ್ಲಿ ಸಮಸ್ತ ಕಪಿಗಳನ್ನೂ ಹನುಮಂತ ಲಕ್ಷ್ಮಣರನ್ನೂ ಸಹ ನಾಗಾಸ್ತ್ರ ಪ್ರಯೋಗಮಾಡಿ ಬಂಧನ ಮಾಡಿದನು ಅನಂತರ ತನ್ನ ತಂದೆಯಾದ ರಾವಣನ ಬಳಿಗೆ ಬಹುಜಾಗ್ರತೆಯಾಗಿ ಹೊರಟು ಹೋದನು ಆ ರಾವಣನಾದರೋ ತನಗೆ ಪ್ರಯೋಜನಕರವಾದ ಕಾರ್ಯವುಳ್ಳ ಮಗನಾದ ಇಂದ್ರಜಿತುವನ್ನು ನೋಡಿ ಸಂತೋಷಪಟ್ಟು ಪ್ರಶಂಸೆ ಮಾಡಿದನು.

**ಶ್ಲೋಕ|| ಸಪಕ್ಷಿ ರಾಜೋಥ ಹರೇರ್ನಿದೇಶಂ | ಸ್ಮರಂ ಸ್ತ್ವರಾವಾ ನಿಹಚಾಜಗಾಮ || ತತ್ಪಕ್ಷವಾತ ಸ್ಪರ್ಶೇನ ಕೇವಲಂ | ವಿನಷ್ಟ್ಯಯೇಷಾಂ ಸ ಉರಂಗಬಂಧಃ ||೧೪೪||**

ಅರ್ಥ:--ಅಥ=ಅನಂತರ, ಸಪಕ್ಷಿರಾಜಃ-ಪಕ್ಷಿ ರಾಜನಾದ ಗರುಡನು ಹರೇಃ=ಶ್ರೀವಿಷ್ಣುವಿನ, ನಿದೇಶಂ = ಅನುಜ್ಞೆಯನ್ನು, ಸ್ಮರನ್ = ಜ್ಞಾಪಿಸಿಕೊಂಡು, ತ್ವರಾವಾನ್ ಸನ್-ತ್ವರ್ಯವುಳ್ಳವನಾಗಿ ಇಹ=ಈ ರಣರಂಗದಲ್ಲಿ ಆಜಗಾಮ-ಬಂದನು. ತತ್ಪಕ್ಷವಾತಸ್ಪರ್ಶೇನ=ತತ್ಪಕ್ಷ=ಆ ಗರುಡನ ರೆಕ್ಕೆಗಳ ವಾತ=ಗಾಳಿಯ ಸ್ಪರ್ಶೇನ= ಸ್ಪರ್ಶದಿಂದ ಕೇವಲಂ=ಮಾತ್ರವೇ ಯೇಷಾಂ-ಯಾರಿಗೆ ಉರಂಗಬಂಧಃ=ನಾಗಬಂಧನವಾಗಿತ್ತೋ ಆ ಬಂಧವು ವಿನಷ್ಟಃ=ನಷ್ಟವಾಯಿತು. ( ಮೋಚನವಾಯಿತು)

ತಾತ್ಪರ್ಯ:--ಇಂದ್ರಜಿತುವು ನಾಗಾಸ್ತ್ರದಿಂದ ಸಮಸ್ತ ಕಪಿಗಳನ್ನೂ ಬಂಧನಮಾಡಿ ತಾನು ರಾವಣನ ಬಳಿಗೆ ಹೊರಟುಹೋದನಂತರ ಗರುತ್ಮಂ

ತನು ಶ್ರೀಪರಮಾತ್ಮನು ಕೊಟ್ಟಿದ್ದ ಸೇವಾರೂಪವಾದ ಆಜ್ಞೆಯನ್ನು ಸ್ಮರಿಸಿಕೊಂಡು ಜಾಗ್ರತೆಯಾಗಿ ಈ ರಣರಂಗಕ್ಕೆ ಬಂದನು. ಅವನು ಬಂದಮಾತ್ರದಿಂದಲೇ ಆ ಗರುಡನ ರೆಕ್ಕೆಗಳ ಕೇವಲ ಗಾಳಿಯ ಸ್ಪರ್ಶದಿಂದಲೇನೇ ಯಾರ್‍ಯಾರು ಈ ನಾಗಪಾಶದಿಂದ ಬದ್ಧರಾಗಿದ್ದರೋ ಅವರ ಬಂಧನಗಳೆಲ್ಲವೂ ಮುಕ್ತವಾಯಿತು.

ಶ್ಲೋಕ || ಸರಾಮ ಮಾನಸ್ಯ ಪರಾತ್ಮದೈವತಂ | ಯಯೌ ಸುಮಾಲ್ಯಾ ಭರಣಾನು ಲೇಪನಃ || ಕಪಿಪ್ರವೀರಾಸ್ತು ತರೂಂ ಛಿಲಾಂಶ್ಚ | ಪ್ರಗೃಹ್ಯನೇದುರ್ಬಲಿನಃ ಪ್ರಹೃಷ್ಟಾಃ ||೧೪೫||

ಅರ್ಥ:—ಸುಮಾಲ್ಯಾಭರಣಾನುಲೇಪನಃ=ಸುಮಾಲ್ಯ = ಪುಷ್ಪಹಾರಗಳು, ಆಭರಣ= ಕುಂಡಲಾದಿಭೂಷಣಗಳು, ಅನುಲೇಪನ = ಸುಗಂಧಾದಿಲೇಪನಗಳು ಇವುಗಳುಳ್ಳ, ಸಃ=ಆ ಗರುಡನು, ಪರಾತ್ಮದೈವತಂ=ತನಗೂ ಮತ್ತು ಪರರಿಗೂ ಪರಮದೇವತೆಯಾದ, ರಾಮಂ=ಶ್ರೀರಾಮನನ್ನು, ಮಾನಸ್ಯ = ನಮಸ್ಕಾರಮಾಡಿ, ಯಯೌ = ಸ್ವಸ್ಥಾನಕ್ಕೆ ಹೊರಟು ಹೋದನು. ಕಪಿಪ್ರವೀರಾಸ್ತು=ವಾನರ ವೀರರಾದರೋ, ಪ್ರಹೃಷ್ಟಾಃ=ಸಂತೋಷಯುಕ್ತರಾದರು ಬಲಿನಃ=ಬಲಿಷ್ಠರಾದ ಈ ಕಪಿವೀರರು, ತರೂನ್ - ವೃಕ್ಷಗಳನ್ನೂ, ಶಿಲಾಂಶ್ಚ - ಕಲ್ಲುಗಳನ್ನೂ, ಪ್ರಗೃಹ್ಯ = ತೆಗೆದುಕೊಂಡು, ನೇದುಃ=ಸಿಂಹನಾದ (ವೀರಧ್ವನಿ) ವನ್ನು ಮಾಡಿದರು.

ತಾತ್ಪರ್ಯ:—ಗರುಡದೇವರು ಈ ರಣಕ್ಷೇತ್ರಕ್ಕೆ ಬಂದಮಾತ್ರದಲ್ಲಿಯೇ ಅವನ ರೆಕ್ಕೆಗಳಿಂದ ಹೊರಟ ಗಾಳಿಯ ಸ್ಪರ್ಶವಾದ ಮಾತ್ರವೇ ಕಪಿವೀರರ ಬಂಧನವೆಲ್ಲವೂ ಬಿಡುಗಡೆಯಾಯಿತು ಆದನಂತರ ದಿವ್ಯಮಾಲ್ಯಾಭರಣಾದಿಗಳಿಂದಲಂಕೃತನಾದ ಗರುತ್ಮಂತನು ಪರರಿಗೂ ಮತ್ತು ತನಗೂ ಪರದೇವತೆಯಾದ (ಪರಮ ದೇವರಾದ) ಶ್ರೀರಾಮದೇವರಿಗೆ ನಮಸ್ಕಾರ ಮಾಡಿ ಯಥಾಸ್ಥಾನಕ್ಕೆ ಹೊರಟುಹೋದನು ಅನಂತರ ಬಂಧನ ಮುಕ್ತರಾದ ಸಮಸ್ತ ಕಪಿಗಳೂ ಪರಮ ಸಂತೋಷಪಟ್ಟವರಾಗಿ ಪುನಃ ಬಲಿಷ್ಠರಾದವರಾಗಿ ವೃಕ್ಷಪರ್ವತಗಳನ್ನು ತೆಗೆದುಕೊಂಡು ವೀರಧ್ವನಿಮಾಡಿದರು

ಶ್ಲೋಕ || ಶ್ರುತ್ವಾನಿನಾದಂ ಪ್ಲವಗೇಶ್ವರಾಣಾಂ | ಪುನಃ ಸಪುತ್ರೋ ತ್ರಸದತ್ರ ರಾವಣಃ|| ಬಂಧಾದಮುಷ್ಮಾತ್ಪ್ರವಿನಿಃಸೃತಾಸ್ತೇ | ಕಿಮತ್ರಕಾರ್ಯಂ ತ್ವಿತಿಚಿಂತಯಾನಃ ||೧೪೬||

ಶ್ಲೋಕ || ಪುನಶ್ಚ ಹುತ್ವಾ ಸಹುತಾಶಮೇವ | ರಥಂಸಮಾರುಹ್ಯ ಯಯಾವ ದರ್ಶನಂ || ವವರ್ಷಚಾಸ್ತ್ರಾಣಿ ಮಹಾಂತ್ಯಜಸ್ರಂ| ವರಾದುಮೇಶ ಸ್ಯತಥಾಬ್ಜಜಸ್ಯ ||೧೪೭||

ಅರ್ಥ:— ರಾವಣಃ=ರಾವಣನು, ಪ್ಲವಗೇಶ್ವರಾಣಾಂ = ಕಪೀಶ್ವರರ ನಿನಾದಂ=ವೀರಧ್ವನಿಯನ್ನು, ಶ್ರುತ್ವಾ=ಕೇಳಿ, ಸಪುತ್ರಃ – ಪುತ್ರನಾದ ಇಂದ್ರಜಿತುವಿನಿಂದ ಸಹಿತನಾಗಿ, ತೇ=ಆ ಕಪಿವೀರರು, ಅಮುಷ್ಮಾತ್-ನಾಗ ಪಾಶ ಸಂಬಂಧವಾದ, ಬಂಧನಾತ್=ಬಂಧನವ್ಯಿಶೆಯಿಂದ, ಪ್ರವಿನಿಃಸೃತಾಃ =ಬಿಡುಗಡೆ ಮಾಡಲ್ಪಟ್ಟರು. ಅತ್ರ -- ಈಗ, ಕಿಂತುಕಾರ್ಯಂ -- ಏನು ಮಾಡತಕ್ಕದ್ದು, ಇತಿ=ಹೀಗೆಂದು, ಚಿಂತಯಾನಃಸರ್=ಚಿಂತಾಗ್ರಸ್ತನಾಗಿ, ಅತ್ರಸತ್=ಭಯಗ್ರಸ್ಥನಾದನು. ||೧೪೬||

ಅರ್ಥ:— ಸಪುತ್ರಃ– ಆ ರಾವಣ ಪುತ್ರನಾದ ಇಂದ್ರಜಿತುವು, ಪುನಃ– ತಿರಿಗೀ, ಹುತಾಶಂ=ಅಗ್ನಿಯನ್ನು, ಹುತ್ವೈವ=ಹೋಮ ಮಾಡಿಯೇ, ರಥಂ ರಥವನ್ನು, ಸಮಾರುಹ್ಯ – ಏರಿಕೊಂಡು, ಅದರ್ಶನಂ=ಅಂತರ್ಧಾನವನ್ನು, ಯಯೌ — ಹೊಂದಿದನು ಸಃ=ಆ ಇಂದ್ರಜಿತುವು ( ಪುನಶ್ಚ ) ಉಮೇಶಸ್ಯ=ರುದ್ರದೇವರ, ತಥಾ=ಹಾಗೆಯೇ, ಅಬ್ಜಜಸ್ಯ ··· ಬ್ರಹ್ಮದೇವರ, ವರಾತ್ --- ವರಪ್ರಸಾದದಿಂದ, ಮಹಾಂತಿ --- ಮಹಾ ಪ್ರಬಲವಾದ, ಅಸ್ತ್ರಾಣಿ-- ಅಸ್ತ್ರಗಳನ್ನು, ಅಜಸ್ರಂ -- ನಿರಂತರವಾಗಿ, ವವರ್ಷ -- ಮಳೆಗರೆದನು.

ತಾತ್ಪರ್ಯ:— ಕಪಿಶ್ರೇಷ್ಟರೆಲ್ಲರೂ ನಾಗಪಾಶ ಬಂಧನದಿಂದ ಮುಕ್ತರಾದ ಸಂಗತಿಯನ್ನು ಪುತ್ರನಿಂದ ಸಹಿತನಾಗಿ ಕೇಳಿ ರಾವಣನು ಕಪಿಗಳೆಲ್ಲರೂ ಬಂಧನದಿಂದ ಬಿಡುಗಡೆಯನ್ನು ಹೊಂದಿದರು ಪುನಃ ಯುದ್ಧಸನ್ನದ್ಧರಾದರು. ಈ ವಿಷಯದಲ್ಲಿ ಏನು ಮಾಡತಕ್ಕದ್ದು ಎಂದು ಚಿಂತಾಕ್ರಾಂತನಾಗಿ ಭಯಗ್ರಸ್ಥನಾದನು. ಆಮೇಲೆ ಇಂದ್ರಜಿತುವು ಪುನಃ ಅಗ್ನಿಯನ್ನು ಪೂಜಿಸಿ ಹೋಮಮಾಡಿ ಪ್ರಾರ್ಥಿಸಿಕೊಂಡು ರಥಾರೂಢನಾಗಿ ಯುದ್ಧಕ್ಕಾಗಿ

ಬಂದು ಯಾರಿಗೂ ದೃಷ್ಟಿಗೋಚರನಾಗದೆ ಋದ್ರ ದೇವರ ಮತ್ತು ಬ್ರಹ್ಮ ದೇವರ ವರಪ್ರಸಾದದಿಂದ ಅಗತ ಸಾರವಾಗಿದ್ದುದರಿಂದ ಸಾರವುಳ್ಳ ಅಸ್ತ್ರಗಳಿಂದ ಏಕ ಪ್ರಕಾರವಾಗಿ ಈ ಕಪಿ ಸೈನ್ಯದಲ್ಲಿ ಮಳೆಗರೆದನು.

**ಶ್ಲೋಕ॥ ಪುನಶ್ಚ ತಸ್ಯಾಸ್ತ್ರ ನಿಪೀಡಿತಾಸ್ತೇ । ನಿಪೇತುರುರ್ವ್ಯಾಂ ಕಪಯಃ ಸ ಲಕ್ಷ್ಮಣಾಃ ॥ ಸ್ಪೃಶಂತಿ ನಾಸ್ತ್ರಾಣಿ ದುರಂತಶಕ್ತಿಂ । ತನುಂ ಸಮೀರಸ್ಯಹಿ ಕಾನಿಚಿತ್ಕ್ವಚಿತ್ ॥೧೪೮॥**

ಅರ್ಥ:—ಪುನಶ್ಚ=ತಿರಿಗೀ, ತಸ್ಯ=ಆ ಇಂದ್ರಜಿತುವಿನ, ಅಸ್ತ್ರನಿಪೀಡಿತಾಃಸಂತಃ-ಅಸ್ತ್ರಗಳಿಂದ ಪೆಟ್ಟು ಬಿದ್ದವರಾಗಿ, ತೇ ಕಪಯಃ-ಕಪಿಗಳು, ಸಲಕ್ಷ್ಮಣಾಃ = ಲಕ್ಷ್ಮಣನಿಂದ ಸಹಿತರಾಗಿ, ಉರ್ವ್ಯಾಂ = ಭೂಮಿಯಲ್ಲಿ, ನಿಪೇತುಃ- ಮೂರ್ಛಿತರಾಗಿ ಬಿದ್ದುಹೋದರು, ಸಮೀರಸ್ಯ=ಹನುಮಂತನ ದುರಂತಶಕ್ತಿಂ= ಅಪರಿಮಿತವಾದ ಶಕ್ತಿಯುಳ್ಳ, ತನುಂಹಿ – ಶರೀರವನ್ನು, ಕಾನಿಚಿತ್=ಯಾವ, ಅಸ್ತ್ರಾಣಿ=ಅಸ್ತ್ರ ಶಸ್ತ್ರಗಳೂ, ಕ್ವಚಿದಪಿ–ಸ್ವಲ್ಪವಾದರೂ, ನಸ್ಪೃಶಂತಿ=ಸ್ಪರ್ಶಮಾಡಲಿಲ್ಲ.

ತಾತ್ಪರ್ಯ:—ಇಂದ್ರಜಿತುವು ಪುನಃ ಅಸ್ತ್ರ ಶಸ್ತ್ರಗಳ ಮಳೆಗರೆಯಲು ಅದರಿಂದ ಭಾಧಿತರಾದ ಸಮಸ್ತ ಕಪಿಗಳೂ ಲಕ್ಷ್ಮಣನಿಂದ ಸಹಿತರಾಗಿ ಭೂಮಿಯಲ್ಲಿ ಮೂರ್ಛಿತರಾಗಿ ಬಿದ್ದುಹೋದರು. ಆದರೆ ಶ್ರೀಹನುಮಂತನ ಅಪರಿಮಿತ ಬಲವುಳ್ಳ ಶರೀರವನ್ನು ಯಾವ ಅಸ್ತ್ರ ಶಸ್ತ್ರಗಳೂ ಸ್ವಲ್ಪವಾದರೂ ಸ್ಪರ್ಶ ಮಾಡಲಿಲ್ಲ.

**ಶ್ಲೋಕ॥ ವಿಜ್ಞಾತುಕಾಮಃ ಪುರಿ ಸಂಪ್ರವೃತ್ತಿಂ । ವಿಭೀಷಣಃ ಪೂರ್ವ ಗತಸ್ತದಾಗಾತ್ ॥ ದದರ್ಶಸರ್ವಾನ್ಪತಿತಾನ್ಸವಾನರಾನ್ । ನ್ಮರುತ್ಸುತಂ ಶ್ಲೋಕಮನಾಕುಲಂಚ ॥೧೪೯॥**

ಅರ್ಥ:—ಪುರಿ – ಲಂಕಾಪಟ್ಟಣದ, ಸಂಪ್ರವೃತ್ತಿಂ– ಸ್ಥಿತಿಯನ್ನು, ವಿಜ್ಞಾತುಕಾಮಃಸಃ=ತಿಳಿದುಕೊಳ್ಳಲಪೇಕ್ಷೆಯುಳ್ಳವನಾಗಿ, ಪೂರ್ವಗತಃ= ಮೊದಲೇ ಹೋಗಿದ್ದ, ವಿಭೀಷಣಃ = ವಿಭೀಷಣನು, ತದಾ=ಸಮಸ್ತರಾದ ಕಪಿಗಳೂ ಮೂರ್ಛಿತರಾಗಿ ಬಿದ್ದಿರುವ ಕಾಲದಲ್ಲಿ, ಆಗಾತ್ = ಹಿಂದಿರುಗಿ ಬಂದನು. ಸಃ=ಬಂದಂತಹ ವಿಭೀಷಣನು, ಸರ್ವಾನ್ – ಸಮಸ್ತರಾದ,

ವಾನರಾನ್ ಕಪಿಗಳೂ, ಪತಿತಾನ್–ಮೂರ್ಛಿತರಾಗಿ ಬಿದ್ದಿರುವವರನ್ನೂ, ಏಕಂ ಒಬ್ಬನಾದ, ಮರುತ್ಸುತಂ=ಹನುಮಂತನನ್ನು, ಅನಾಕುಲಂಚ=ಮೂರ್ಛೆಯಿಲ್ಲದವನಾಗಿ ಇರುವವನನ್ನೂ, ದದರ್ಶ=ನೋಡಿದನು.

ತಾತ್ಪರ್ಯ.--ಲಂಕಾಪಟ್ಟಣದ ಸ್ಥಿತಿಗಳನ್ನು ತಿಳಿದುಕೊಳ್ಳಬೇಕೆಂಬ ಕುತೂಹಲದಿಂದ ವಿಭೀಷಣನು ಈ ಕಪಿಗಳು ಮೂರ್ಛಿತರಾಗುವದಕ್ಕಿಂತ ಮೊದಲೇ ಲಂಕಾಪುರಿಗೆ ಹೋಗಿದ್ದವನು ಈ ಕಪಿಗಳು ಮೂರ್ಛಿತರಾಗಿ ಬಿದ್ದಿರುವ ಕಾಲಕ್ಕೆ ಸರಿಯಾಗಿ ವಾಪಸು ಬಂದನು. ಈ ರಣರಂಗಕ್ಕೆ ಬಂದು ನೋಡುವಲ್ಲಿ ಸಮಸ್ತ ಕಪಿಗಳೂ ಮೂರ್ಛಿತರಾಗಿ ಬಿದ್ದಿದ್ದರು. ಆದರೆ ಒಬ್ಬ ಹನುಮಂತನು ಮಾತ್ರ ಮೂರ್ಛೆ ಇಲ್ಲದೆ ಸುಖವಾಗಿದ್ದುದನ್ನು ನೋಡಿದನು.

**ಶ್ಲೋಕ || ಸತಂ ಸಮಾದಾಯ ಯಯೌ ವಿಧಾತೃಜಂ। ವಿಮೂರ್ಛಿತಂ ಚೋದಕಸೇಕತಸ್ತ್ರಂ || ಆಶ್ವಾಸ್ಯ ಕಿಂಜೀವಸಿಹೀತ್ಯವೋಚತ। ತ್ತಥೇತಿ ಸಪ್ರಾಹಚ ಮಂದವಾಕ್ಯೈಃ ||೧೫೦||**

ಅರ್ಥ:-- ಸಃ= ಆ ವಿಭೀಷಣನು, **ತಂ=ಹನುಮಂತನನ್ನು,** ಸಮಾದಾಯ = ಕರೆದುಕೊಂಡು, ವಿಧಾತೃಜಂಪ್ರತಿ = **ಜಾಂಬವಂತನ ಸಮೀಪಕ್ಕೆ,** ಯಯೌ–ಹೋದನು ವಿಮೂರ್ಛಿತಂ=ಮೂರ್ಛಿತನಾಗಿದ್ದ, **ತಂ=ಜಾಂಬವಂತನನ್ನು,** ಉದಕಸೇಕತಃ=ನೀರು ಚೆಲ್ಲಿ ಎಚ್ಚರಿಸಿ, **ತಂ – ಜಾಂಬವಂತನನ್ನು,** ಜೀವಸಿಕಿಂ ಬದುಕಿದ್ದೀಯಾ? ಏನು, ಇತಿ=ಹೀಗೆಂದು, ಅವೋಚತ್ = ಕೇಳಿದನು, ಸಃ = ಆ ಜಾಂಬವಂತನ. ಮಂದವಾಕ್ಯೈಃ = ಮೆಲ್ಲಗೆ (ಕುಗ್ಗಿದ ಧ್ವನಿಯಿಂದ,) ತಥೇತಿಚ = ಹಾಗೆಯೇ (ಬದುಕಿದ್ದೇನೆಂದು). ಪ್ರಾಹ=ವಿಭೀಷಣನಿಗೆ ಹೇಳಿದನು.

ತಾತ್ಪರ್ಯ:—ಆ ವಿಭೀಷಣನು ಎಚ್ಚರವಾಗಿದ್ದ ಹನುಮಂತನನ್ನು ಕರೆದುಕೊಂಡು ಜಾಂಬವಂತನ ಬಳಿಗೆ ಹೋದನು. ಅವನೂ ಮೂರ್ಛಿತನಾಗಿ ಬಿದ್ದಿರುವದನ್ನು ನೋಡಿ ಉದಕಸೇಚನಾದಿಗಳಿಂದ ಉಪಚರಿಸಿ ಅವನನ್ನು ಎಚ್ಚರಗೊಳಿಸಿದನು. ಅನಂತರ ಅವನನ್ನು ಕುರಿತು ವಿಭೀಷಣನು " ಜೀವಿಸಿದ್ದೀಯಾ, ಏನು " ಎಂದು ಕೇಳಿದನು. ಆದಕ್ಕೆ ಜಾಂಬವಂತನು ಕೇವಲ ತಗ್ಗಿದ ಸ್ವರದಿಂದ " ಬದುಕಿದ್ದೇನೆ " ಎಂದು ಹೇಳಿದನು.

ಶ್ಲೋಕ || ಊಚೇ ಪುನರ್ಜೀವತಿ ಕಿಂಹನೂಮಾನ್ | ಜೀವಾಮ ಸರ್ವೇಪಿಹಿ ಜೀವಮಾನೇ || ತಸ್ಮಿನ್ ಹತೇ ನಿಹತಾಶ್ಚೈವ ಸರ್ವೇ | ಇತೀರಿತೇಸ್ಮೀತ್ಯವದತ್ಸ ಮಾರುತಿಃ ||೧೫೧||

ಅರ್ಥ:—ಸಃ = ಆ ಜಾಂಬವಂತನು, ತಂಪ್ರತಿ = ವಿಭೀಷಣನನ್ನು ಕುರಿತು, ಹನೂಮಾನ್=ಹನುಮಂತನು, ಜೀವತಿಕಿಂ = ಬದುಕಿದ್ದಾನೆಯೇ, ತಸ್ಮಿನ್=ಅವನ, ಜೀವಮಾನೇಸತಿ=ಬದುಕಿರಲಾಗಿ, ವಯಂಸರ್ವೇ-ನಾವೆಲ್ಲರೂ ಜೀವಾಮಃ=ಬದುಕುತ್ತೇವೆ, ಸಃ=ಆ ಹನುಮಂತನು, ಹತೇಸತಿ=ಹತನಾಗಿದ್ದರೆ, ವಯಂಸರ್ವೇ-ನಾವೆಲ್ಲರೂ, ನಿಹತಾಶ್ಚೈವ=ಹತರಾದವರೇ ಸರಿ, ಇತಿ-ಹೀಗೆಂದು, ಪುನಃ=ತಿರಿಗಿ, ಊಚೇ=ಹೇಳಿದನು. ಇತಿ=ಹೀಗೆಂದು, ಸಃ=ಜಾಂಬವಂತನು, ಈರಿತೇಸತಿ=ಹೇಳುತ್ತಿರಲಾಗಿ, ಮಾರುತಿಃ=ಹನುಮಂತನು, ಅಸ್ಮಿ=ಜೀವಿಸಿದ್ದೇನೆ, ಇತಿ=ಹೀಗೆಂದು, ಅವದತ್=ಹೇಳಿದನು.

ತಾತ್ಪರ್ಯ:—ಅನಂತರ ಜಾಂಬವಂತನು ಪುನಃ ವಿಭೀಷಣನನ್ನು ಕುರಿತು, "ಹನುಮಂತನು ಜೀವಿಸಿದ್ದಾನೆಯೇ? ಏನು? ಅವನು ಜೀವಿಸಿದ್ದರೆ ನಾವೆಲ್ಲ ಜೀವಿಸುವವರಾಗುತ್ತೇವೆ, ಅವನು ಹತನಾಗಿದ್ದರೆ ನಾವೆಲ್ಲರೂ ಮೃತರಾದವರೇ." ಹೀಗೆಂದು ಹೇಳುತ್ತಿರಲಾಗಿ ಹನುಮಂತನು "ನಾನು ಜೀವಿಸಿದ್ದೇನೆ" ಎಂದು ಹೇಳಿದನು.

ಶ್ಲೋಕ || ಇತ್ಯುಕ್ತೇ ಜಾಂಬವಾನಾಹ | ಹನೂಮಂತ ಮನಂತರಂ || ಯೋ ಸೌಮ್ಯೋ ಸಮೀಪಸ್ಥೋ | ಗಂಧಮಾದನ ಸಂಜ್ಞಕಃ ||೧೫೨||

ಗಿರಿಸ್ತಸ್ಮಾತ್ಸಮಾಹಾರ್ಯಂ | ತ್ವಯೌಷಧಿ ಚತುಷ್ಟಯಂ || ಮೃತಸಂಜೀವನೀ ಮುಖ್ಯಾ | ಸಂಧಾನ ಕರಣೀ ಪರಾ || ಸವರ್ಣ ಕರಣೀ ಚೈವ | ವಿಶಲ್ಯಕರಣೀತಿಚ ||೧೫೩||

ಇತ್ಯುಕ್ತಃ ಸಕ್ಷಣೇನೈವ | ಪ್ರಾಪತ ದ್ಗಂಧಮಾದನಂ || ಅವಾಪಚಾಂಬರಚರೋ | ರಾಮಮುಕ್ತಃ ಶರೋಯಥಾ ||೧೫೪||

ಅಂತರ್ಹಿತಾ ಶ್ಚೌಷಧೀಸ್ತು | ತದಾವಿಜ್ಞಾಯ ಮಾರುತಿಃ || ಉದ್ಬಬರ್ಹ ಗಿರಿಂ ಕ್ರೋಧಾ | ಚ್ಛತಯೋಜನ ಮಂಡಲಂ ||೧೫೫||

ಅರ್ಥ:— ಇತ್ಯುಕ್ತಃ=ಹನುಮಂತನಿಂದ ಜೀವಿಸಿದ್ದೇನೆಂದು ಹೇಳಲ್ಪಟ್ಟ, ಜಾಂಬವಾನ್=ಜಾಂಬವಂತನು, ಅನಂತರಂ= ಅನಂತರದಲ್ಲಿ. ಹನೂಮಂತಂ-ಹನುಮಂತನನ್ನು ಕುರಿತು, ಯಃ-ಯಾವ ಪ್ರಸಿದ್ಧವಾದ, ಮೇರೋಃ = ಮೇರುಪರ್ವತದ, ಸಮೀಪಸ್ಥಃ = ಸಮೀಪದಲ್ಲಿ, ಗಂಧಮಾದನಸಂಜ್ಞಕಃ=ಗಂಧಮಾಧನ ಪರ್ವತವೆಂದು ಹೆಸರುಳ್ಳ. ಗಿರಿಃ=ಪರ್ವತವು (ಅಸ್ತಿ=ಇದೆಯೋ,) ತಸ್ಮಾತ್=ಆ ಪರ್ವತದಿಂದ, ಮುಖ್ಯಾ = ಪ್ರಧಾನವಾದ, ಮೃತಸಂಜೀವನೀ=ಮೃತ ಸಂಜೀವನಿಯೆಂತಲೂ, ಪರಾ=ಎರಡನೆಯದಾದ ಸಂಧಾನ ಕರಣೀ ಎಂತಲೂ, ಮೂರನೇದು ಸವರ್ಣಕರಣೀಚ-ಮೂರನೇದು ಸವರ್ಣಿಕರಣೀ ಎಂತಲೂ, ನಾಲ್ಕನೇದು ವಿಶಲ್ಯಕರಣೀತಿಚ ವಿಶಲ್ಯಕರಣೀ ಎಂತಲೂ, ಯಃ - ಯಾವ ಪ್ರಸಿದ್ಧವಾದ, ಔಷಧಿಚತುಷ್ಟಯಂ=ಈ ನಾಲ್ಕು ಔಷಧಿಗಳು, ಸಂತಿ-ಅವಯೋ (ತೇ-ಅವುಗಳ.) ತ್ವಯಾ-ನಿನ್ನಿಂದ, ಸಮಾಹಾರ್ಯಂ=ತರಲ್ಪಡತಕ್ಕದ್ದಾಗಬೇಕು (ತೆಗೆದುಕೊಂಡು ಬರಬೇಕು) ಇತಿ-ಹೀಗೆಂದು, ಜಾಂಬವಾನ್=ಜಾಂಬವಂತನು, ಆಹ=ಹನುಮಂತನಿಗೆ ಹೇಳಿದನು. ||೧೫೨|| ||೧೫೩||

ಇತಿ=ಈ ರೀತಿಯಾಗಿ, ಉಕ್ತಃ=ಜಾಂಬವಂತನಿಂದ ಹೇಳಿಸಿಕೊಳ್ಳಲ್ಪಟ್ಟ, ಸಃ=ಹನುಮಂತನು, ಕ್ಷಣೇನೈವ-ಕ್ಷಣಮಾತ್ರದಲ್ಲಿಯೇ, ಗಂಧಮಾದನಂ=ಗಂಧಮಾದನ ಪರ್ವತಕ್ಕಾಗಿ, ಪ್ರಾಪತತ್ = ಹಾರಿದನು. ರಾಮಮುಕ್ತಃ=ಶ್ರೀರಾಮನಿಂದ ಬಿಡಲ್ಪಟ್ಟ, ಶರಃ=ಬಾಣವು, ಯಥಾ=ಹೇಗೋ ತಥಾ=ಹಾಗೆಯೇ, ಅಂಬರಚರಃ=ಆಕಾಶದಲ್ಲಿ ಸಂಚಾರಮಾಡಿಕೊಂಡು ಹೋಗಿ, ಗಂಧಮಾದನಂ=ಗಂಧಮಾದನ ಪರ್ವತವನ್ನು, ಅವಾಪ = ಸೇರಿದನು ||೧೫೪|| ತದಾ=ಆಗ, ಔಷಧೀಸ್ತು=ಮೃತಸಂಜೀವಿನಿಯೇ ಮೊದಲಾದ ಔಷಧಿಗಳೂ, ಅಂತರ್ಹಿತಾಃ ಶ್ಚ=ಪರ್ವತದ ಒಳಗಡೆ ಅಡಗಿಕೊಂಡವು ಮಾರುತಿಃ=ಹನುಮಂತನು, ವಿಜ್ಞಾಯ-ಅಂತರ್ಧಾನವಾದದ್ದನ್ನು ತಿಳಿದುಕೊಂಡು, ಕ್ರೋಧಾತ್-ಕೋಪದಿಂದ, ಶತಯೋಜನಮಂಡಲಂ=ಒಂದು ನೂರು ಯೋಜನ ಪ್ರದೇಶವ, ಗಿರಿಂ - ಪರ್ವತನನ್ನು, ಉದ್ಬಬರ್ಹ=ಮೇಲಕ್ಕೆತ್ತಿದನು.

**ತಾತ್ಪರ್ಯ :**—ಹನುಮಂತನು ಜಾಂಬವಂತನನ್ನು ಕುರಿತು ನಾನು ಜೀವಿತನಾಗಿದ್ದೇನೆಂದು ಹೇಳಿದ ನಂತರ, ಆ ಜಾಂಬವಂತನು ಹನುಮಂತನನ್ನು ಕುರಿತು ಹೇಳುತ್ತಾನೆ. ಮೇರು ಪರ್ವತದ ಸಮೀಪದಲ್ಲಿ ಗಂಧಮಾದನ ಪರ್ವತವಿದೆ. ಆ ಪರ್ವತದಲ್ಲಿ ವನೌಷಧಿಗಳಿವೆ. ಅವುಗಳಲ್ಲಿ ಮುಖ್ಯವಾದುವು ಒಂದನೇದು ಮೃತಸಂಜೀವಿನಿ, ಎರಡನೆ ಸಂಧಾನಕರಣಿ, ಮೂರನೇ ಸವರ್ಣಕರಣಿ, ಮತ್ತು ನಾಲ್ಕನೇ ವಿಶಲ್ಯಕರಣಿ, ಈ ನಾಲ್ಕು ಔಷಧಿಗಳನ್ನು ನೀನು ತರಬೇಕು. (ಈ ಔಷಧಿಗಳಿಗೆ ಈ ಹೆಸರುಗಳು ಏನುಕಾರಣ (ಬಂತೆಂದರೆ,) ಹೇಳುತ್ತಾರೆ:—(1) ಮೃತರಾದವರನ್ನು ಬದುಕಿಸತಕ್ಕದು. ಮೃತಸಂಜೀವಿನಿ (2) ಛಿದ್ರವಾದ ಶರೀರಾವಯವಗಳನ್ನು ಸೇರಿಸಿ ಸರಿಪಡಿಸುತ್ತದಾದಕಾರಣ ಸಂಧಾನಕರಣಿಯೆಂದು ಹೆಸರುಳ್ಳದಾಯಿತು. (3) ಸಹಜವಾದ ಶರೀರದ ವರ್ಣವು ಬಾಣಾಹತ ಮೊದಲಾದ ಕಾರಣದಿಂದ ಛಾಯವಾಗಿ ಕೆಟ್ಟುಹೋಗಿದ್ದರೆ ಅದನ್ನು ಸಮಾನವಾದ ಕಾಂತಿಯುಳ್ಳದ್ದಾಗಿ ಮಾಡತಕ್ಕದ್ದು, ಸವರ್ಣಕರಣಿ. (4) ಶರೀರದಲ್ಲಿ ಬಾಣಗಳು ಮೊದಲಾದುವು ನೆಟ್ಟಿಕೊಂಡಿದ್ದರೆ ಅವುಗಳನ್ನು ಹೊರಪಡಿಸಿ ಬಿದ್ದು ಹೋಗುವಂತೆ ಮಾಡುವ ಗುಣವುಳ್ಳದ್ದರಿಂದ ವಿಶಲ್ಯಕರಣಿ ಎಂದು ಪ್ರಸಿದ್ಧಗಳಾದುವು.) ಈ ಪ್ರಕಾರ ಜಾಂಬವಂತನು ಹೇಳಿದ ಕೂಡಲೇ ಹನುಮಂತನು ಹಾರಿ ರಾಮಬಾಣವು ಅಂತರಿಕ್ಷ ಮಾರ್ಗದಲ್ಲಿ ಹೇಗೆ ಬಹು ವೇಗವಾಗಿ ಸಂಚಾರ ಮಾಡುತ್ತದೆಯೋ ಹಾಗೆ ಅಂತರಿಕ್ಷ ಮಾರ್ಗದಲ್ಲಿ ಬಹು ವೇಗವಾಗಿ ಹೊರಟು ಗಂಧಮಾದನ ಪರ್ವತವನ್ನು ಸೇರಿದನು. ಹನುಮಂತನು ಬಂದ ಒಡನೆಯೇ ಈ ಔಷಧಿಗಳು ನಮ್ಮನ್ನು ಇಲ್ಲಿಂದ ತೆಗೆದುಕೊಂಡು ಹೋಗುತ್ತಾನೆಂಬ ಭಯದಿಂದ ಅಲ್ಲಿಯೇ ಅಂತರ್ಧಾನಗಳಾದುವು. ಈ ವಿಷಯವನ್ನು ಹನುಮಂತನು ತಿಳಿದುಕೊಂಡವನಾಗಿ ಕೋಪದಿಂದ ಒಂದುನೂರು ಯೋಜನ ವಿಸ್ತೀರ್ಣವುಳ್ಳ ಭಾಗವನ್ನು ಮೇಲಕ್ಕೆ ಕಿತ್ತು ಎತ್ತಿದನು. (ಆ ಗಂಧಮಾದನ ಪರ್ವತವು ನೂರು ಯೋಜನ ವಿಸ್ತೀರ್ಣವುಳ್ಳದ್ದು. ಏಕದೇಶವನ್ನು ಹನುಮಂತನು ಎಬ್ಬಿಸಿದನೆಂದು ಹೇಳಿದ್ದರಿಂದ ಆ ಸಮಗ್ರ ಪರ್ವತವು ಎಷ್ಟು ವಿಸ್ತಾರವಿರಬಹುದೆಂಬ ಶಂಕೆಪರಿಹಾರ ಮಾಡುತ್ತಾರೆ.

ಶ್ಲೋ॥ ಸತಂಸಮುತ್ಪಾಟ್ಯ ಗಿರಿಂಕರೇಣ। ಪ್ರತೋಲಯಿತ್ವಾ ಬಲದೇವಸೂನುಃ॥
ಸಮುತ್ಪಪಾತಾಂಬರ ಮುಗ್ರವೇಗೋ । ಯಥಾಹರಿಶ್ಚಕ್ರಧರ ಸ್ತ್ರಿವಿಕ್ರಮೇ ॥ ೧೫೬ ॥
ಅವಾಪಚಾಕ್ಷ್ಣೋಃ ಸನಿಮೇಷ ಮಾತ್ರತೋ । ನಿಪಾತಿತಾಯತ್ರ ಕಪಿಪ್ರವೀರಾಃ ॥ ತಚ್ಛೈಲವಾತ ಸ್ಪರ್ಶಾತ್ಸಮುತ್ಥಿತಾಃ । ಸಮಸ್ತಶೋ ವಾನರಯೂಥಪಾಃ ಕ್ಷಣಾತ್ ॥ ೧೫೭ ॥

**ಅರ್ಥ:—**ಬಲದೇವ= ವಾಯುದೇವರ, ಸೂನುಃ=ಪುತ್ರನಾದ, ಸಃ=ಹನುಮಂತನು, ತಂ=ಭೂಮಿಯಿಂದ ಕಿತ್ತು, ಗಿರಿಂ=ಗಂಧಮಾದನ ಪರ್ವತವನ್ನು, ಕರೇಣ=ಒಂದು ಕೈಯಿಂದ, ಪ್ರತೋಲಯಿತ್ವಾ=ಹಾರಿಸುತ್ತ, ಅಂಬರಂಪ್ರತಿ=ಆಕಾಶಕ್ಕೆ, ಸಮುತ್ಪಪಾತ=ಹಾರಿದನು, ಮತ್ತು ಚಕ್ರಧರಂ=ಚಕ್ರಪಾಣಿಯಾದ, ಹರಿಃ=ಶ್ರೀ ಪರಮಾತ್ಮರು, ತ್ರಿವಿಕ್ರಮೇಯಥಾ=ತ್ರಿವಿಕ್ರಮಾವತಾರದಲ್ಲಿ ಹೇಗೆ ಮಾಡಿದನೋ ಹಾಗೆ, ಉಗ್ರವೇಗಃಸ=ಅತ್ಯಂತ ವೇಗವಾಗಿ, ಅಕ್ಷ್ಣೋಃ=ಕಣ್ಣುಗಳ, ನಿಮೇಷಮಾತ್ರತಃ=ರೆಪ್ಪೆಗಳನ್ನು ಮುಚ್ಚಿತೆಗೆಯುವಷ್ಟರೊಳಗಾಗಿ, (ತಂ= ಆ ಯುದ್ಧಮಂಡಲವನ್ನು ಕುರಿತು) ಅವಾಪ=ಬಂದು ಶೇರಿದನು, ಕಪಿಪ್ರವೀರಾಃ=ಕಪಿವೀರರು, ಯತ್ರನಿಪಾತಿತಾಃ=ಮೂರ್ಛಿತರಾಗಿ ಬಿದ್ದಿದ್ದ, ತತ್ರ=ಆ ಸ್ಥಳಕ್ಕೆ, ಅವಾಪ=ಬಂದು ಶೇರಿದರು. ತಚ್ಛೈಲವಾತಸ್ಪರ್ಶಾತ್=ತಚ್ಛೈಲ=ಆ ಪರ್ವತದ ಸಂಬಂಧವಾದ, ವಾತ=ಗಾಳಿಯ, ಸ್ಪರ್ಶಾತ್=ಸೋಕುವುದರಿಂದಲೇ, ಸಮಸ್ತಶಃ=ಎಲ್ಲಾ, ವಾನರಯೂಥಪಾಃ=ಕಪಿಯೋದ್ಧರುಗಳೂ, ಕ್ಷಣಾತ್=ತಕ್ಷಣದಲ್ಲಿಯೇ, ಸಮುತ್ಥಿತಾಃ=ಮೂರ್ಛೆಯಿಂದ ಎದ್ದರು.

**ತಾತ್ಪರ್ಯ:—**ಹನುಮಂತನು ಗಂಧಮಾದನ ಪರ್ವತವನ್ನು ಭೂಮಿಯಿಂದ ಕಿತ್ತು ಒಂದು ಕೈಯಿಂದಲೇ ಹಾರಿಸುತ್ತಾ ಅದರ ತೂಕವನ್ನು ತಿಳಿದುಕೊಂಡು, ತಕ್ಷಣವೇ ಆಕಾಶಕ್ಕೆ ನೆಗೆದನು. ಚಕ್ರಧಾರಿಯಾದ ಶ್ರೀ ಪರಮಾತ್ಮನು ತ್ರಿವಿಕ್ರಮಾವತಾರದಲ್ಲಿ ಹೇಗೆ ಮಾಡಿದನೋ ಹಾಗೆ ಕಣ್ಣು ರೆಪ್ಪೆ ಹೊಡೆಯುವುದರೊಳಗಾಗಿ ಕಪಿಗಳು ಮೂರ್ಛಿತರಾಗಿ ಬಿದ್ದಿದ್ದ ರಣರಂಗದ ಪ್ರದೇಶಕ್ಕೆ ಬಂದು ಶೇರಿದನು. ಪರ್ವತದಿಂದ ಹೊರಟ ಗಾಳಿಯ ಸ್ಪರ್ಶವಾದ ಒಡನೆಯೇ ಸಮಸ್ತ ಕಪಿವೀರರೂ ಮೂರ್ಛೆಯಿಂದ ಎಚ್ಚೆತ್ತು ಮೇಲಕ್ಕೆ ಎದ್ದರು.

ಶ್ಲೋ॥ ಅಪೂಜಯನ್ಮಾರುತಿ ಮುಗ್ರಪೌರುಷಂ । ರಘೋತ್ತಮಾಸ್ಯಾನುಜನಿ ಸ್ತಥಾಪರೇ ॥ ಪಪಾತ ಮೂರ್ಧ್ನ್ಯಸ್ಯಚ ಪುಷ್ಪಸಂತತಿಃ । ಪ್ರಮೋದಿತೈ ರ್ದೇವವರೈ ವಿಸರ್ಜಿತಾ ॥ ೧೫೮ ॥

ಅರ್ಥ:— ಉಗ್ರಪೌರುಷಂ=ಅತ್ಯಂತ ಪರಾಕ್ರಮಿಯಾದ, ಮಾರುತಿಂ= ಹನುಮಂತನನ್ನು, ರಘೂತ್ತಮಸ್ಯ=ರಘುಕುಲ ಶ್ರೇಷ್ಠನಾದ ಶ್ರೀರಾಮನ, ಅನುಜನಿಃ=ತಮ್ಮನಾದ ಲಕ್ಷ್ಮಣನು, ತಥಾ=ಹಾಗೆಯೇ, ಅಪರೇಚ=ಇತರರಾದ ವಾನರ ಶ್ರೇಷ್ಠರೂ ಸಹ, ಅಪೂಜಯನ್=ಸನ್ಮಾನಿಸಿದರು. ಅಪಿ= ಮತ್ತು ಪ್ರಮೋದಿತೈಃ=ಅತ್ಯಂತ ಸಂತೋಷ ಹೊಂದಿದ, ದೇವವರೈಃ= ದೇವತಾಶ್ರೇಷ್ಠರಿಂದ, ವಿಸರ್ಜಿತಾ=ಬಿಡಲ್ಪಟ್ಟ, ಪುಷ್ಪಸಂತತಿಶ್ಚ=ಹೂಮಳೆಯು, ಅಸ್ಯ= ಹನುಮಂತನ, ಮೂರ್ಧನಿ = ತಿರಸ್ಸಿನಲ್ಲಿ, ಪಪಾತ= ಬಿದ್ದಿತು.

ತಾತ್ಪರ್ಯ:— ಅತ್ಯಂತ ಪರಾಕ್ರಮಶಾಲಿಯಾದ ಹನುಮಂತನನ್ನು ಲಕ್ಷ್ಮಣನೂ ಮತ್ತು ಇತರ ಕಪಿಶ್ರೇಷ್ಠರೂ ಸಹ ಬಹಳ ಸನ್ಮಾನ ಮಾಡಿದರು. ದೇವತಾಶ್ರೇಷ್ಠರೂ ಕೂಡ ಸಂತುಷ್ಟರಾಗಿ ಈ ಹನುಮಂತನ ತಿರಸ್ಸಿನಲ್ಲಿ ಪುಷ್ಪವೃಷ್ಟಿ ಕರೆದರು.

ಶ್ಲೋ॥ ಸದೇವಗಂಧರ್ವ ಮಹರ್ಷಿಸತ್ತಮೈ । ರಭಿಷ್ಟುತೋ ರಾಮಕರೋಪಗೂಹಿತಃ ॥ ಪುನರ್ಗಿರಿಂತಂ ಶತಯೋಜನೋಛ್ರಿತಂ । ನ್ಯಪಾತಯುತ್ಸಂಸ್ಥಿತ ಏವತತ್ರ ॥ ೧೫೯ ॥

ಅರ್ಥ:— ಸಃ=ಆ ಹನುಮಂತನು, ದೇವ=ದೇವತೆಗಳು, ಗಂಧರ್ವ= ಗಂಧರ್ವರು, ಮಹರ್ಷಿ=ಮಹಾ ಋಷಿಗಳು ಇವರೇ ಮೊದಲಾದ ಅತ್ಯಂತ ಸಜ್ಜನರಿಂದ, ಅಭಿಷ್ಟುತಃ=ಸ್ತೋತ್ರ ಮಾಡಲ್ಪಟ್ಟನು. ಮತ್ತು, ರಾಮಕರೋಪಗೂಹಿತಃ=ರಾಮ=ರಾಮದೇವರ, ಕರ=ಬಾಹುಗಳ ಮಧ್ಯದಲ್ಲಿ, ಉಪಗೂಹಿತಃ=ಮುಚ್ಚಲ್ಪಟ್ಟನು. (ಆಲಿಂಗನ ಮಾಡಲ್ಪಟ್ಟನು.) ಸಃ= ಶ್ರೀ ಹನುಮಂತನ, ತತ್ರೈವ=ಆ ಲಂಕೆಯಲ್ಲಿಯೇ, ಸಂಸ್ಥಿತಃಸನ್=ಇದ್ದುಕೊಂಡು, ಶತಯೋಜನೋಛ್ರಿತಂ=ನೂರು ಯೋಜನದ ಮೇಲಕ್ಕೆ ಎತ್ತಲ್ಪಟ್ಟ, ತಂಗಿರಿಂ=ಆ ಗಂಧಮಾದನ ಪರ್ವತವನ್ನು, ಪುನಃ=ಯಥಾಸ್ಥಿತವಾಗಿ, ನ್ಯಪಾತಯತ್=ಅದು ಮೊದಲು ಇದ್ದ ಸ್ಥಳದಲ್ಲಿಯೇ ಬೀಳಿಸಿದನು.

**ತಾತ್ಪರ್ಯ:**—ಹನುಮಂತನನ್ನು ದೇವತೆಗಳು, ಗಂಧರ್ವರು, ಮಹರ್ಷಿಗಳು, ಮೊದಲಾದ ಸರ್ವರು ಸ್ತೋತ್ರ ಮಾಡಿದರು. ಶ್ರೀರಾಮದೇವರು ಅತಿ ಪ್ರೇಮದಿಂದ ತಬ್ಬಿಕೊಂಡು ಎರಡು ಬಾಹುಗಳಿಂದ ಆಲಿಂಗನ ಮಾಡಿಕೊಂಡರು. ನಂತರ ಹನುಮಂತನು ನೂರು ಯೋಜನ ವಿಸ್ತೀರ್ಣ ಭಾಗ ವುತ್ಪಾಟನೆಮಾಡಿದ್ದ ಗಂಧಮಾದನ ಪರ್ವತವನ್ನು ತಾನು ಲಂಕೆಯಲ್ಲಿಯೇ ಇದ್ದುಕೊಂಡು ಯಥಾಪ್ರಕಾರ ಸ್ಥಳಕ್ಕೆ ಬಿಸಾಟನು.

**ಶ್ಲೋ || ಸಪೂರ್ವವ ನ್ಮಾರುತಿವೇಗ ಚೋದಿತೋ । ನಿರಂತರಂ ಶ್ಲಿಷ್ಟ ತರೋತ್ರಚಾ ಭವತ್ || ಪುನಶ್ಚ ಸರ್ವೇ ತರುಶೈಲಹಸ್ತಾಃ । ರಣಾಯ ಚೋತ್ತಸ್ಥು ರಲಂನದಂತಃ || ೧೬೦ ||**

**ಅರ್ಥ:**—ಮಾರುತಿವೇಗ=ಹನುಮಂತನ ಬಲದಿಂದ, ಚೋದಿತಃ=(ಪ್ರೇರಿತವಾಗಿ) ಎಸೆಯಲ್ಪಟ್ಟ, ಸಃ=ಆ ಗಂಧಮಾದನ ಪರ್ವತವು (ಅತ್ರ ಚ=ಮೊದಲಿದ್ದ ಸ್ಥಳದಲ್ಲಿಯೇ, ಪೂರ್ವವತ್=ಯಥಾಪ್ರಕಾರವಾಗಿ ಮೊದಲಿನಂತೆಯೇ, ನಿರಂತರಂ ಯಥಾಭವತಿತಥಾ ಮುರುಕು ಪಡಕು ಮೊದಲಾದ ತೊಂದರೆಗಳಾದ (ಭಿನ್ನಭಿನ್ನ ವಗೈರೆಗಳಾಗದೆಯೇ) ಶ್ಲಿಷ್ಟತರಃ=ಅದೇ ಸ್ಥಳದಲ್ಲಿ ಇಟ್ಟು ಬಿಗಿಮಾಡಲ್ಪಟ್ಟದ್ದಾಗಿ, ಅಭವತ್=ಆಯಿತು. ಸರ್ವೇ=ಸಮಸ್ತರಾದ ಕಪಿಯೋಧರೂನೂ, ಅಲಂ=ಹೆಚ್ಚಾಗಿ, ನನಂದತಃ=ಸಂತೋಷವುಳ್ಳವರಾಗಿ, ತರುಶೈಲಹಸ್ತಾಃ=ಕೈಯಲ್ಲಿ ವೃಕ್ಷಗಳು ಕಲ್ಲುಗಳು ಧಾರಣಮಾಡಿದವರಾಗಿ, ಪುನಶ್ಚ=ತಿರಿಗಿಯೂ, ರಣಾಯುಚ=ಯುದ್ಧಕ್ಕೋಸ್ಕರವಾಗಿ, ಉತ್ತಸ್ಥು=ಎದ್ದರು.

**ತಾತ್ಪರ್ಯ:**—ಈ ಹನುಮಂತನು ಲಂಕೆಯಲ್ಲಿ ತನ್ನ ಅಮೋಘ ಬಲದಿಂದ ಎಸೆಯಲ್ಪಟ್ಟ ಗಂಧಮಾದನ ಪರ್ವತವು ಇವನ ಬಲದ ವೇಗದಿಂದ ಹೋಗಿ ಮೊದಲು ಯಾವ ಸ್ಥಳದಿಂದ ಉತ್ಪಾಟನೆ ಮಾಡಿದ್ದನೋ ಆ ಸ್ಥಳದಲ್ಲಿಯೇ ಸ್ವಲ್ಪವೂ ಭಿನ್ನಭಿನ್ನ ಮೊದಲಾದ ಬದಲಾವಣೆಯಾಗದೆ ಸುರಕ್ಷಿತವಾಗಿ ಸ್ಥಾಪನೆ ಮಾಡಲ್ಪಟ್ಟಿತು. ಕಪಿವರರಾದವರೋ ಅತಿ ಉತ್ಸಾಹದಿಂದ ಗಿಡಮರ ಬೆಟ್ಟಗಳನ್ನು ತೆಗೆದುಕೊಂಡು ಪುನಃ ಯುದ್ಧಕ್ಕೆ ಸಿದ್ಧರಾದರು.

**ಶ್ಲೋಕ॥ ಪುನಶ್ಚ ತಾನ್ ಪ್ರೇಕ್ಷ್ಯ ಸಮುತ್ಥಿತಾನ್ಕಪೀನ್ । ಸ್ಭಯಂಮಹ ಛ್ಛಕ್ರ ಜಿತಂ ವಿವೇಶ ॥ ಸಪೂರ್ವವದ್ಧವ್ಯವಹೇ ಸಮುಚ್ಯ್ಯ । ಶಿವಂತಥಾ ದರ್ಶನಮೇವ ಜಗ್ಮಿವಾನ್ ॥ ೧೬೧ ॥**

**ಅರ್ಥ:—** ಪುನಶ್ಚ=ತಿರಿಗೀ, ಸಮುತ್ಥಿತಾನ್=ಯುದ್ದಕ್ಕಾಗಿ ಉನ್ಮುಖ ರಾಗಿರುವ, ಕಪೀನ್=ವಾನರರನ್ನು, ಪ್ರೇಕ್ಷ್ಯ=ನೋಡಿ, ಶಕ್ರಜಿತಂ=ಇಂದ್ರಜಿತು ವನ್ನು, ಮಹದ್ಭಯಂ=ಅತ್ಯಂತ ಭಯವು, ವಿವೇಶ=ಪ್ರವೇಶ ಮಾಡಿತು, ಸಃ=ಆ ಇಂದ್ರಜಿತುವು, ಪೂರ್ವವತ್=ಮೊದಲಿನ ಹಾಗೆಯೇ, ಶಿವಂ= ರುದ್ರ ದೇವರನ್ನು, ಸಮುಚ್ಯ್ಯ=ಚೆನ್ನಾಗಿ ಪೂಜೆ ಮಾಡಿ, ದರ್ಶನಂಕೃತ್ವಾ= ದರ್ಶನಮಾಡಿ, ತಥಾ=ಹಾಗೆಯೇ, ಹವ್ಯವಹೇ=ಅಗ್ನಿಯಲ್ಲಿ (ಹುತ್ವಾ= ಹೋಮಮಾಡಿ), ತಥೈವ=ಹಾಗೆಯೇ (ಮೊದಲಿನ ಹಾಗೆಯೇ), ಜಗ್ಮಿ ವಾನ್=ಯುದ್ಧಕ್ಕೋಸ್ಕರ ಹೊರಟನು.

**ತಾತ್ಪರ್ಯ:—** ಸಮಸ್ತ ಕಪಿಗಳೂ ಬಂದಮುಕ್ತರಾಗಿ ಕುತೂಹಲದಿಂದ ವೃಕ್ಷಪರ್ವತಾದಿಗಳನ್ನು ತೆಗೆದುಕೊಂಡು ಯುದ್ಧಸನ್ನದ್ಧರಾಗಿರುವದನ್ನು ನೋಡಿ ಇಂದ್ರಜಿತುವಿಗೆ ಮಹಾ ಭಯ ಉತ್ಪನ್ನವಾಯಿತು. ತಾನಾದರೋ ಮೊದಲಿನ ಹಾಗೆ ರುದ್ರದೇವರನ್ನು ದರ್ಶನ ಮಾಡಿ ಚೆನ್ನಾಗಿ ಪೂಜಿಸಿ ಅಗ್ನಿ ಯಲ್ಲಿ ಹೋಮ ಮಾಡಿ ಕಪಿಗಳೊಡನೆ ಯುದ್ಧಕ್ಕಾಗಿ ಹೊರಟನು.

**ಶ್ಲೋಕ॥ ವರಾಶ್ರಯೇಣಾಚ ಗಿರೀಶಯೋಃ ಪುನಃ । ಸಮ್ಮೋಹನಾಸ್ತ್ರೈಃ ಸಬ ಬಂಧತಾನ್ ಕಪೀನ್ । ಅಥಾಹರಾಮಸ್ಯ ಮನೋನುಸಾರತಃ । ಪುರಾ ಸ್ತ್ರಮೇವಾ ನುಸರಸ್ಸಲಕ್ಷ್ಮಣಃ ॥ ೧೬೨ ॥**

**ಅರ್ಥ:—** ಸಃ = ಇಂದ್ರಜಿತುವು, ಗಿರೀಶಯೋಃ= ಬ್ರಹ್ಮರುದ್ರರ, ವರಾಶ್ರಯೇಣಾಚ = ವರಪ್ರಸಾದದಿಂದಲೇ, ಸಮ್ಮೋಹನಾಸ್ತ್ರೈಃ = ಸಮ್ಮೋಹನಾಸ್ತ್ರಗಳಿಂದ, ಪುನಃ=ತಿರಿಗೀ, ತಾನ್‌ಕಪೀನ್=ಆ ವಾನರರನ್ನು, ಬಬಂಧ=ಬಂಧನ ಮಾಡಿದನು, ಅಥ=ಅನಂತರ, ಪುರಾ=ಯುದ್ಧೋಪಕ್ರಮ ಕ್ಕಿಂತಲೂ ಪೂರ್ವದಲ್ಲಿದ್ದ, ರಾಮಸ್ಯ=ರಾಮದೇವರ, ಮನೋನುಸಾರತಃ= ಮನಸನ್ನು ಅನುಸರಿಸಿಯೇ, ಸಲಕ್ಷ್ಮಣಃ=ಆ ಲಕ್ಷ್ಮಣನ, ಅಸ್ತ್ರಂ= ಸ್ಮೋಹನಾಸ್ತ್ರವನ್ನು, ಅನುಸರನ್ನೇವ = ಅನುಸರಿಸಿಯೇ, ತಂ=ರಾಮ ನನ್ನು ಕುರಿತು, ಆಹ=ಹೇಳಿದನು.

**ತಾತ್ಪರ್ಯ:**—ಆ ಇಂದ್ರಜಿತುವು ಮೊದಲಿನಂತೆ ಬ್ರಹ್ಮದೇವರ ಮತ್ತು ರುದ್ರದೇವರ ವರಪ್ರಸಾದದ ಆಶ್ರಯದಿಂದಲೇ ಈಗ ಸಮಸ್ತರಾದ ಕಪಿಗಳನ್ನೂ ಸಂಮೋಹನಾಸ್ತ್ರ ಪ್ರಯೋಗ ಮಾಡಿ ದೃಷ್ಟಿಗೋಚರನಾಗದಲೇ ಬಂಧನ ಮಾಡಿದನು. ಅನಂತರ ಲಕ್ಷ್ಮಣನು ಪೂರ್ವದಲ್ಲಿ ಶ್ರೀರಾಮರ ಇಛ್ಛಾನುಸಾರವಾಗಿ ಆ ಮೋಹನಾಸ್ತ್ರದಿಂದ ಬದ್ಧನಾದವನ ಹಾಗೆ ಇದ್ದುಕೊಂಡು ರಾಮರನ್ನು ಕುರಿತು ಮುಂದೆ ಹೇಳುವ ಪ್ರಕಾರ ಹೇಳಿದನು.

**ವಿಶೇಷಾಂಶ :**—ಲಕ್ಷ್ಮಣನು ಕೇವಲ ಶ್ರೀರಾಮರ ಇಛ್ಛಾನುಸಾರವಾಗಿಯೇ ಇಂದ್ರಜಿತುವಿನಿಂದ ಪ್ರಯೋಗಿಸಲ್ಪಟ್ಟ ಮೊದಲಿನ ನಾಗಾಸ್ತ್ರಕ್ಕೂ ಮತ್ತು ಈಗಿನ ಸಮ್ಮೋಹನಾಸ್ತ್ರಕ್ಕೂ ಬದ್ಧನಾದವನ ಹಾಗಿದ್ದನೇ ಹೊರತು ಆ ನಾಗಪಾಶ ಬಂಧನದಿಂದಲೂ ಈಗ ಸಮ್ಮೋಹನಾಸ್ತ್ರ ಬಂಧನದಿಂದಲೂ ಇವನಿಗೆ ಎಷ್ಟು ಮಾತ್ರವೂ ದುಃಖವುಂಟಾಗಲಿಲ್ಲ. ಕೇವಲ ಶ್ರೀರಾಮರ ಇಛ್ಛಾನುಸಾರವಾಗಿಯೇ ಬದ್ಧನಾದವನ ಹಾಗೆ ಇದ್ದು ಶ್ರೀರಾಮರನ್ನು ಕುರಿತು ಅನುಜ್ಞಾಪೇಕ್ಷಿತನಾಗಿ ಮಾತನಾಡುತ್ತಾನೆ.

**ಅವತಾರಿಕೆ :**—ಲಕ್ಷ್ಮಣನು ರಾಮರಿಗೆ ಏನು ಹೇಳಿದನೆಂಬುದನ್ನು ಈ ಶ್ಲೋಕದಿಂದ ವಿಶದಪಡಿಸುತ್ತಾರೆ:—ನಂತರ ರಾಮರು ಲಕ್ಷ್ಮಣರಿಗೆ ಹೇಳುತ್ತಾರೆ.

**ಶ್ಲೋಕ॥ ಪಿತಾಮಹಾಸ್ತ್ರೇಣ ನಿಹನ್ಮಿದುರ್ಮತಿಂ । ತವಾಜ್ಞಯಾ ಶಕ್ರಜಿತಂ ಸಬಾಂಧವಂ ॥ ಇತೀರಿತಸ್ತೇನ ಸ್ಥಹಾಹರಾಘವೋ । ಭಯಾ ದದೃಶ್ಯೇನ ವಿಮೋಕ್ತು ಮರ್ಹಸಿ ॥ ೧೬೩ ॥ ನಸೋಥು ಮಾಹೋಸಿ ಯದಿ ತ್ವಮೇತ । ದಸ್ತ್ರಂ ತದಾಹಂ ಶರಮಾತ್ರಕೇಣ ॥ ಅದೃಶ್ಯಮಪ್ಯಾಶು ನಿಹನ್ಮಿಸಂತಂ । ರಸಾತಲೇದ್ಯಾಪಿಹಿ ಸತ್ಯಲೋಕೇ ॥ ೧೬೪ ॥**

**ಅರ್ಥ:**—ತವಾಜ್ಞಯಾ=ಹೇ ! ರಾಮಚಂದ್ರ, ನಿನ್ನ ಅನುಜ್ಞೆಯಾದರೆ, ದುರ್ಮತಿಂ=ದುಷ್ಟನಾದ, ಶಕ್ರಜಿತಂ=ಇಂದ್ರಜಿತುವನ್ನು, ಸಬಾಂಧವಂ=ಬಂಧುಜನಗಳಿಂದ ಸಹಿತವಾಗಿ, ಪಿತಾಮಹಾಸ್ತ್ರೇಣ = ಬ್ರಹ್ಮಾಸ್ತ್ರದಿಂದ, ನಿಹನ್ಮಿ=ಸಂಹರಿಸುತ್ತೇನೆ, ಇತಿ=ಈ ರೀತಿಯಾಗಿ, ತೇನ=ಆ ಲಕ್ಷ್ಮಣನಿಂದ, ಈರಿತಃ= ಹೇಳಲ್ಪಟ್ಟ, ಸರಾಘವಶ್ಚ=ಶ್ರೀರಾಮನಾದರೋ (ಲಕ್ಷ್ಮಣನನ್ನು ಕುರಿತು ಹೇಳುತ್ತಾನೆ) ಭಯಾತ್=ರಿಪುಗಳ ಭಯದಿಂದ, ಅದೃಶ್ಯೇ=

ಅಗೋಚರನಾಗಿರತಕ್ಕವನಲ್ಲಿ, ವಿಮೋಕ್ತುಂ=ಬಾಣವನ್ನುಬಿಡಲು, ನಾರ್ಹ ಸಿ=ಅರ್ಹನಾಗಿದ್ದೀಯೆ, [illegible] ತ್ವಂ=ನೀನು, ಏಕದಸ್ತ್ರಂ=ಈ ಸಮ್ಮೋಹನಾಸ್ತ್ರವನ್ನು, ಯದಿ=ಯಾವ ಪಕ್ಷದಲ್ಲಿ ಸೋಢುಂ=ಸಹಿಸಲು, ಈಶಃ=ಶಕ್ತನಾದವನು, ನಾಸಿ=ಆಗುವದಿಲ್ಲವೋ, ತದಾ = ಹಾಗಾದಪಕ್ಷದಲ್ಲಿ, ಅಹಂ=ನಾನು, ಅದೃಶ್ಯಂ=ದೃಷ್ಟಿಗೋಚರನಾಗದಿರುವ ಇಂದ್ರಜಿತುವನ್ನು, ರಸಾತಲೇ=ಪಾತಾಳ ಲೋಕದಲ್ಲಿ, ಅದ್ಯ=ಈ ಲೋಕದಲ್ಲಿ ಇದ್ದರೂ, ಅಥವಾ ಸತ್ಯಲೋಕೇಪಿ=ಬ್ರಹ್ಮ ಲೋಕದಲ್ಲಿ ಇದ್ದರೂ ಕೂಡ, ಸಂತಂ=ಹಿ=ಎಲ್ಲೀ ಇದ್ದಾಗ್ಯೂ, ಶರಮಾತ್ರಕೇಣ-ಒಂದೇ ಒಂದು ಬಾಣದಿಂದ, ನಿಹನ್ಮಿ=ಸಂಹಾರ ಮಾಡುತ್ತೇನೆ. ಇತಿ=ಹೀಗೆಂದು, ಸಃ=ಶ್ರೀರಾಮನು, ತಂಪ್ರತಿ=ಲಕ್ಷ್ಮಣನನ್ನು ಕುರಿತು, ಆಹ=ಹೇಳಿದನು.

**ತಾತ್ಪರ್ಯ:**—ಲಕ್ಷ್ಮಣನು ರಾಮನನ್ನು ಕುರಿತು ನಿನ್ನ ಆಜ್ಞೆ ಆದರೆ ಈ ದುಷ್ಟನಾದ ಇಂದ್ರಜಿತುವನ್ನು ಬಾಂಧವರಿಂದ ಸಹಿತವಾಗಿ ಬ್ರಹ್ಮಾಸ್ತ್ರದಿಂದ ಸಂಹರಿಸುತ್ತೇನೆ ಎಂದು ಹೇಳಿದನು. ಈ ಮಾತನ್ನು ಕೇಳಿ ಶ್ರೀರಾಮಚಂದ್ರನ ಭಯದಿಂದ ಕಣ್ಣಿಗೆ ಕಾಣದಿರುವವನಲ್ಲಿ ಬ್ರಹ್ಮಾಸ್ತ್ರವನ್ನು ಪ್ರಯೋಗಿಸಬೇಡ, ನೀನು ಈ ಮೋಹನಾಸ್ತ್ರವನ್ನು ಸಹಿಸಿಕೊಳ್ಳಲಾರದೆ ಇದ್ದಲ್ಲಿ ಅಗೋಚರನಾಗಿರುವ ಇಂದ್ರಜಿತುವು ಈ ರಣಭೂಮಿಯಲ್ಲೇ ಇರಲಿ ರಸಾತಲಾದಿ ಅಧೋಲೋಕಗಳಲ್ಲಿರಲಿ ಅಥವ ಬ್ರಹ್ಮಲೋಕದಲ್ಲಾದರೂ ಇರಲಿ ಸಾಧಾರಣವಾದ ಒಂದು ಬಾಣಮಾತ್ರದಿಂದಲೇ ಅವನು ಎಲ್ಲಿದ್ದಾಗ್ಯೂ ಸಂಹರಿಸುತ್ತೇನೆ ಎಂದು ಹೇಳಿದನು.

**ಶ್ಲೋಕ॥ ಇತಿಸ್ಮವೀಂದ್ರಸ್ಯ ಹನೂಮತಶ್ಚ । ಬಲಪ್ರಕಾಶಾಯ ಪುರಾಪ್ರಭುಃ ಸ್ವಯಂ ॥ ಸಮ್ಮಾನಯಿತ್ವಾಸ್ತ್ರ ಮಮುಷ್ಯರಾಮೋ । ದುರಂತ ಶಕ್ತಿಃ ಶರಮಾದದೇಥ ॥ ೧೬ ॥**

**ಅರ್ಥ:**—ಇತಿಸ್ಮ=ಈ ಪ್ರಕಾರ ಹೇಳಿ, ಪ್ರಭುಃ=ಸ್ವಾಮಿಯಾದ ಶ್ರೀರಾಮನು, ಪುರಾ=ಪೂರ್ವದಲ್ಲಿ, ಸ್ವಯಂ=ತಾನು, ವೀಂದ್ರಸ್ಯ=ಗರುಡದೇವರ, ಹನೂಮತಶ್ಚ=ಹನುಮಂತದೇವರ, ಬಲಪ್ರಕಾಶಾಯ=ಬಲವನ್ನು ಪ್ರಸಿದ್ಧಿಪಡಿಸುವದಕ್ಕೋಸ್ಕರ, ಅಮುಷ್ಯ=ಆ ಇಂದ್ರಜಿತುವಿನಿಂದ ಬಿಡಲ್ಪಟ್ಟದ್ದ, ಅಸ್ತ್ರಂ=ಸಮ್ಮೋಹನಾಸ್ತ್ರವನ್ನು, ಸಂಮಾನಯಿತ್ವಾ=ಗುರ್ತಾದೇ

ಮಾಡಿ, ಅಥ=ಈಗ, ದುರಂತಶಕ್ತಿಃ=ಅಪಾರವಾದ ಶಕ್ತಿಯುಳ್ಳ, ರಾಮಃ=ಶ್ರೀರಾಮನು, ಶರಂ=ಬಾಣವನ್ನು ಆದದೇ=ಸ್ವೀಕಾರ ಮಾಡಿದನು.

**ತಾತ್ಪರ್ಯ:**—ಪ್ರಭುವಾದ ಶ್ರೀರಾಮನು ತಾನು ಅಪಾರ ಶಕ್ತಿಯುಳ್ಳವನಾಗಿದ್ದಾಗ್ಯೂ ಪೂರ್ವದಲ್ಲಿ ಕೊಟ್ಟಿದ್ದ ವರಗಳನ್ನು ಅನುಸರಿಸಿ ಗರುಡ ಮತ್ತು ಹನುಮಂತನ ಬಲವನ್ನು ಪ್ರಕಾಶ ಪಡಿಸುವುದಕ್ಕಾಗಿ ಇಂದ್ರಜಿತುವಿನ ಅಸ್ತ್ರವನ್ನು ನಿವಾರಣ ಮಾಡದಲೇ ಮರ್ಯಾದೆ ಮಾಡಿದನು. ಈಗ ಧನುರ್ಬಾಣಗಳನ್ನು ಸ್ವೀಕಾರ ಮಾಡಿ ಯುದ್ಧಕ್ಕೆ ಸನ್ನದ್ಧನಾದನು.

**ಶ್ಲೋಕ॥ ಅನೇನದೃಷ್ಟೋಽಹ ಮಿತಿಸ್ಮದುಷ್ಟೋ । ವಿಜ್ಞಾಯಬಾಹ್ವೋ ರ್ಬಲ ಮಸ್ಯ ಚೋಗ್ರಂ ॥ ವಿನಿಶ್ಚಯಂ ದೇವತಮಸ್ಯ ಪಶ್ಯನ್ । ಪ್ರದುದ್ರುವೇ ಪ್ರಾಣಪರೀಪ್ಸುರಾಶು ॥ ೧೬೬ ॥**

**ಅರ್ಥ:**—ದುಷ್ಟಃ=ದುಷ್ಟ (ನೀಚ) ನಾದ ಇಂದ್ರಜಿತುವು, ಅನೇನ–ಈ ರಾಮನಿಂದ, ಅಹಂ=ನಾನು, ದೃಷ್ಟಃ=ನೋಡಲ್ಪಟ್ಟೆನು. (ಶ್ರೀರಾಮನು ನನ್ನನ್ನು ನೋಡಿದನು.) ಇತಿ=ಹೀಗೆಂದು, ದೇವತಮಸ್ಯ=ದೇವದೇವೋತ್ತಮನಾದ ಶ್ರೀರಾಮನ, ವಿನಿಶ್ಚಯಂಚ=ತನ್ನನ್ನು ಸಂಹರಿಸಲು ಧನುರ್ಬಾಣಗಳನ್ನು ಧರಿಸಿದನೆಂಬುವನ್ನೂ, ವಿಜ್ಞಾಯ=ತಿಳಿದು, ಅಸ್ಯ=ಈ ರಾಮನ, ಉಗ್ರಂ=ಕ್ರೂರವಾದ, ಬಾಹ್ವೋಃ=ಬಾಹುಗಳ, ಬಲಂ=ಸಾಮರ್ಥ್ಯವನ್ನು, ಪಶ್ಯನ್=ನೋಡಿದವನಾಗಿ, ಪ್ರಾಣಪರೀಪ್ಸುಃ=ಪ್ರಾಣರಕ್ಷಣೆ ಮಾಡಿಕೊಳ್ಳಲಿಚ್ಛಿಸಿ, ಆಶು=ಜಾಗ್ರತೆಯಾಗಿ, ಪ್ರದುದ್ರುವೇ=ಓಡಿ ಹೋದನು.

**ತಾತ್ಪರ್ಯ:**—ನೀಚನಾದ ಇಂದ್ರಜಿತುವು ಈ ರಾಮನು ಅಗೋಚರನಾಗಿದ್ದ ನನ್ನನ್ನು ನೋಡಿದನು ಎಂತಲೂ ಇವನು ನನ್ನನ್ನು ಸಂಹರಿಸದೇ ಬಿಡುವುದಿಲ್ಲವೆಂತಲೂ ತಿಳಿದು ಶ್ರೀರಾಮರ ಅಮೋಘವಾದ ಭುಜಪರಾಕ್ರಮವನ್ನು ನೋಡಿ ತನ್ನ ಪ್ರಾಣಗಳನ್ನು ರಕ್ಷಣೆ ಮಾಡಿಕೊಳ್ಳಲಪೇಕ್ಷೆಯುಳ್ಳವನಾಗಿ ಬಹು ಜಾಗ್ರತೆಯಾಗಿ ಓಡಿಹೋದನು.

**ಶ್ಲೋಕ॥ ಹಾಹಾಕೃತೇ ಪ್ರದ್ರುತ ಇಂದ್ರಶತ್ರೌ । ರಘೂತ್ತಮ ಶ್ಚತ್ರ ವಿಭೀಷಣ ತ್ವಾತ್ ॥ ವಿಭೀಷಣೇತ್ಯೇವ ಸುರೈರಭಿಷ್ಟುತೋ । ವಿಜ್ಞಾನಮಸ್ತ್ರಂ ಸ್ವಮುಚತ್ಸ್ವ ಸೈನ್ಯೇ ॥ ೧೬೭ ॥**

**ಅರ್ಥ:**—ಪ್ರದ್ರುತ ಇಂದ್ರಶತ್ರೌ = ಪ್ರದ್ರುತ = ಓಡಿಹೋಗುತ್ತಿದ್ದ, ಇಂದ್ರಶತ್ರೌ=ಇಂದ್ರಜಿತುವಿನ ಸೈನ್ಯವು, ಹಾಹಾಕೃತೇಸತಿ=ಕಷ್ಟಕಷ್ಟವೆಂದು

ಹಂಬಲಿಸುತ್ತಿರಲಾಗಿ, ರಘೂತ್ತಮಃ = ಶ್ರೀರಾಮನು, ಶ್ವತೃವಿಭೀಷಣ ತ್ವಾತ್ = ಶತ್ರುಗಳಿಗೆ ಭಯಪ್ರದನಾದ್ದರಿಂದಲೇನೇ, ವಿಭೀಷಣೇತ್ಯೇವ= ಭಯಂಕರನೆಂಬ ಹೆಸರಿನಿಂದಲೇನೇ, ಸುರೈಃ=ದೇವತೆಗಳಿಂದ, ಅಭಿಷ್ಟುತಃ ಸ = ಸ್ತೋತ್ರ ಮಾಡಿಸಿಕೊಂಡವನಾಗಿ, ಸ್ವಸೈನ್ಯೆ = ತನ್ನ ಸೈನ್ಯದಲ್ಲಿ, ವಿಜ್ಞಾನಂ=ವಿಜ್ಞಾನ ಸಂಜ್ಞಿಕವಾದ, ಅಸ್ತ್ರಂ=ಅಭಿಮಂತ್ರಿತವಾದ ಬಾಣ ವನ್ನು, ಸ್ವಮುಚತ್=ಪ್ರಯೋಗಮಾಡಿದನು.

**ತಾತ್ಪರ್ಯ:—**ಇಂದ್ರಜಿತುವು ರಾಮನ ಅತ್ಯುಗ್ರವಾದ ಬಲವನ್ನೂ ಮನೋನಿಶ್ಚಯವನ್ನೂ ನೋಡಿ ತಿಳಿದುಕೊಂಡು ಪ್ರಾಣ ಭಯದಿಂದ ಓಡಿ ಹೋಗುತ್ತಲೇ ಅವನ ಸಹಾಯಕ್ಕಾಗಿ ಬಂದಿದ್ದ ರಾಕ್ಷಸ ಸೈನ್ಯವು ಹಾಹಾ ಕಾರದಿಂದ ಕೋಲಾಹಲವಾಡಿತು. ಶ್ರೀರಾಮನು ಶತ್ರುಗಳಿಗೆ ಮಹಾ ಭಯಪ್ರದಾತೃವಾದ್ದರಿಂದ ವಿಭೀಷಣನೆಂದು ದೇವತೆಗಳು ಆತನನ್ನು ಸ್ತೋತ್ರಮಾಡಿದರು. ಇಂತಹ ಶ್ರೀರಾಮನು ಇಂದ್ರಜಿತುವಿಗೆ ಭಯಂಕ ರಾರ್ಥವಾಗಿ ತೆಗೆದುಕೊಂಡಿದ್ದ ಬಾಣವನ್ನು ಜ್ಞಾನಾಸ್ತ್ರದಿಂದ ಅಭಿಮಂ ತ್ರಿಸಿ ತನ್ನ ಸೈನ್ಯ (ವಾನರ ಸೈನ್ಯ) ದಲ್ಲಿಯೇ ಪ್ರಯೋಗ ಮಾಡಿದನು.

**ಶ್ಲೋಕ॥ ನಿಶಾಚರಾಸ್ತ್ರಂ ಹ್ಯಗಮತ್ಕ್ಷಣೇನ । ರಾಮಾಸ್ತ್ರವೀರ್ಯಾ ದ್ಧರ ಯೋನದಂತಃ ॥ ಉತ್ತಸ್ಥುರುಚ್ಚೋರು ಗಿರೀನ್ಪ್ರಗೃಹ್ಯ । ಪ್ರಶಂಸ ಮಾನಾ ರಘುವೀರ ಮುಚ್ಚೈಃ ॥ ಸುರೈಶ್ಚ ಪುಷ್ಪಂಚ ವೃಷದ್ಭಿರೀ ಡಿತಃ । ಸ್ತಸ್ಥೌ ಧನುಷ್ಪಾಣಿ ರನಂತವೀರ್ಯಃ ॥ ಸರಾವಣಸ್ಯಾಥ ಸುತೋನಿಕುಂಭಿಲಾಂ । ಪುನಃ ಸಮಾಸಾದ್ಯ ಜುಹಾವಪಾವಕಂ ॥ ೧೬೮.೧೬೯ ॥**

**ಅರ್ಥ:—**ನಿಶಾಚರಾಸ್ತ್ರಂ=ನಿಶಾಚರ=ಇಂದ್ರಜಿತುವಿನಿಂದ ಪ್ರಯೋ ಗಿಸಲ್ಪಟ್ಟದ್ದು, ಅಸ್ತ್ರಂ = ಸಮ್ಮೋಹನಾಸ್ತ್ರವು, ಕ್ಷಣೇನ = ಒಂದು ಕ್ಷಣ ದಲ್ಲಿಯೇ, ರಾಮಾಸ್ತ್ರವೀರ್ಯಾತ್ = ರಾಮಾಸ್ತ್ರ=ರಾಮನಿಂದ ಬಿಡಲ್ಪಟ್ಟ ವಿಜ್ಞಾನಾಸ್ತ್ರದ, ವೀರ್ಯಾತ್ = ಬಲದಿಂದ, ಅಗಮತ್ = ಬಿಟ್ಟುಹೋ ಯಿತು, ಹರಯಃ=ಕಪಿಗಳು, ನದಂತಃಸಂತಃ = ಸಂತೋಷಪಟ್ಟವರಾಗಿ, ಉಚ್ಚೋರುಗಿರೀ = ಉನ್ನತವಾದ ಪರ್ವತಗಳನ್ನು, ಪ್ರಗೃಹ್ಯ=ಹಿಡಿದು ಕೊಂಡು, ರಘುವೀರಂ=ಶ್ರೀರಾಮನನ್ನು, ಉಚ್ಚೈಃ=ಗಟ್ಟಿಯಾಗಿ, ಪ್ರಶಂಸ ಮಾನಾಃ=ಹೊಗಳುತ್ತಾ, ಉತ್ತಸ್ಥುಃ=ಯುದ್ಧಸನ್ನದ್ಧರಾಗಿ ಎದ್ದರು. ಅನಂತ

ವೀರ್ಯಃ=ಅಪರಿಮಿತ ಪರಾಕ್ರಮಿಯಾದ ಶ್ರೀರಾಮನು, ಪುಷ್ಪಂಚ=ಪುಷ್ಪಗಳಿಂದ, ವೃಷದ್ಭಿಃ=ಮಳೆ ಕರೆಯುತ್ತಿರುವ, ಸುರೈಶ್ಚ = ದೇವತೆಗಳಿಂದ, ಈಡಿತಃಸರ್=ಸ್ತುತಿಸಲ್ಪಟ್ಟವನಾಗಿ, ಧನುಷ್ಪಾಣಿಃಸರ್=ಕೈಯಲ್ಲಿ ಧಾರಣ ಮಾಡಲ್ಪಟ್ಟ ಧನುಸ್ಸುಳ್ಳವನಾಗಿ, ತಸ್ಥೌ = ಆವನು (ಯುದ್ಧಸನ್ನದ್ಧನಾಗಿ ನಿಂತನು.) ಅಥ=ಅನಂತರ, ರಾವಣಸ್ಯ = ರಾವಣನ, ಸುತಃ–ಪುತ್ರನಾದ, ಸಃ=ಆ ಇಂದ್ರಜಿತುವು, ನಿಕುಂಭಿಲಾಂ=ನಿಕುಂಭಿಲಾ ನಾಮುಕವಾದ ಶಿವಸ್ಥಳವನ್ನು, ಸಮಾಸಾದ್ಯ=ಹೊಂದಿ, ಪುನಃ=ತಿರಿಗೀ, ಪಾವಕಂ=ಅಗ್ನಿಯನ್ನು, ಜುಹಾವ=ಅರ್ಚನ ಹೋಮಾದಿಗಳನ್ನು ಮಾಡಿದನು.

**ತಾತ್ಪರ್ಯ:—**ಶ್ರೀರಾಮನು ಪ್ರಯೋಗಮಾಡಿದ ವಿಜ್ಞಾನಾಸ್ತ್ರದಿಂದ ಇಂದ್ರಜಿತುವಿನ ಸಮ್ಮೋಹನಾಸ್ತ್ರವು ನಿವಾರಿತವಾಗಿ, ವಾನರರು ಮೋಹದಿಂದ ಎಚ್ಚೆತ್ತರು. ನಂತರ ಕಪಿಗಳು ಆನಂದ ಭರಿತರಾಗಿ ಶ್ರೀರಾಮನನ್ನು ಉಚ್ಚಸ್ವರದಿಂದ ಹೊಗಳುತ್ತಾ ಗಿರಿ ಪರ್ವತ ಗಳನ್ನು ತೆಗೆದುಕೊಂಡು ಯುದ್ಧಕ್ಕೆ ನಿಂತರು. ದೇವತೆಗಳಾದರೋ ಅನಂತ ವೀರ್ಯವುಳ್ಳ ಶ್ರೀರಾಮನನ್ನು ಸ್ತೋತ್ರಮಾಡಿ ಪುಷ್ಪಗಳನ್ನು ಮಳೆಕರೆಯುತ್ತಿರಲಾಗಿ ಶ್ರೀರಾಮನು ಧನುರ್ಬಾಣಗಳನ್ನು ತೆಗೆದುಕೊಂಡು ಯುದ್ಧಸನ್ನದ್ಧನಾಗಿ ನಿಂತನು. ಅನಂತರ ಇಂದ್ರಜಿತುವು ನಿಕುಂಭಿಳಾ ಎಂಬ ಶಿವಸ್ಥಾನಕ್ಕೆ ಹೋಗಿ ಅಲ್ಲಿ ಪುನಃ ಅಗ್ನಿಯನ್ನು ಪೂಜಿಸಿ ಹೋಮಾದಿಗಳನ್ನು ಮಾಡತೊಡಗಿದನು.

**ಶ್ಲೋಕ॥ ವಿಭೀಷಣೋಽಥಾಹ ರಘೂತ್ತಮಂ ಪ್ರಭುಂ । ನಿಯೋಜಯಾದ್ಯೈವ ವಧಾಯ ದುರ್ಮತೇಃ ॥ ಕೃತಾಗ್ನಿಪೂಜೋ ನಹಿವಧ್ಯಏಷ । ವರೋವಿಧಾತುಃ ಪ್ರಥಿತೋಽಸ್ಯ ತಾದೃಶಃ ॥ ೧೭೦ ॥**

**ಅರ್ಥ:—**ಅಥ=ಅನಂತರ, ಕೃತಾ=ಮಾಡಲ್ಪಟ್ಟ, ಅಗ್ನಿಪೂಜಃ=ಅಗ್ನಿಪೂಜೆಯುಳ್ಳ, ಏಷಃ=ಈ ಇಂದ್ರಜಿತುವು, ವಧ್ಯಃ=ವಧಾರ್ಹನು, ನ=ಆಗುವದಿಲ್ಲವು. ಇತಿ=ಹೀಗೆಂಬು, ಅಸ್ಯ=ಇವನಿಗೆ, ವಿಧಾತುಃ=ಬ್ರಹ್ಮದೇವರ, ವರಃ=ವರವು, ಹಿ=ಪ್ರಸಿದ್ಧವಾಗಿ, ತಾದೃಶಃ=ಅಂತಹದ್ದಾಗಿ, ಪ್ರಸಿದ್ಧಃ=ಪ್ರಸಿದ್ಧವಾಗಿದೆಯೋ, ತಸ್ಮಾತ್=ಆ ಕಾರಣದಿಂದ, ದುರ್ಮತೇಃ=ದುಷ್ಟನಾದ, ಅಸ್ಯ=ಈ ಇಂದ್ರಜಿತುವಿನ, ವಧಾಯ = ಸಂಹಾರಕ್ಕಾಗಿ, ಅದ್ಯೈವ= ಈಗಲೇ, ನಿಯೋಜಯ=ನೇಮಕಮಾಡು, ಇತಿ=ಹೀಗೆಂದು ವಿಭೀಷಣಃ=

ವಿಭೀಷಣನು, ಪ್ರಭುಂ=ಸ್ವಾಮಿಯನಾದ, ರಘೋತ್ತಮಂಪ್ರತಿ= ರಘುವರ ನಾದ ಶ್ರೀರಾಮನನ್ನು ಕುರಿತು, ಆಹ=ಹೇಳಿದನು.

**ತಾತ್ಪರ್ಯ:—**ಇಂದ್ರಜಿತುವು ನಿಕುಂಭಿಳಾಖ್ಯ ಶಿವಸ್ಥಾನದಲ್ಲಿ ವಿಶೇಷ ವಾಗಿ ಅಗ್ನಿ ಪೂಜಾ ಪ್ರಾರಂಭ ಮಾಡಿದ ನಂತರ ವಿಭೀಷಣನು ಪ್ರಭುವಾದ ಶ್ರೀರಾಮನನ್ನು ಕುರಿತು ಏನು ಹೇಳಿದನೆಂದರೆ:—ಈ ಇಂದ್ರಜಿತುವಿಗೆ "ನೀನು ವಿಶೇಷವಾಗಿ ಅಗ್ನಿಪೂಜೆ ಮಾಡಿದವನೇ ಆದರೆ ಯಾರಿಂದಲೂ ಸಂ ಹರಿಸಲ್ಪಡುವದಿಲ್ಲ, ಅವಧ್ಯನಾಗುತ್ತೀಯೆ" ಹೀಗೆಂದು ಬ್ರಹ್ಮದೇವರ ವರವು ಪ್ರಸಿದ್ಧವಾಗಿದೆ. ಆದ್ದರಿಂದ (ಅಗ್ನಿಪೂಜಾ ಪೂರ್ಣವಾಗುವದಕ್ಕೆ ಮುಂಚೆಯೇ) ಈ ದುರ್ಮತಿಯಾದ ಇಂದ್ರಜಿತುವನ್ನು ಸಂಹರಿಸುವದಕ್ಕೆ (ಏರ್ಪಾಡು ಮಾಡು ಎಂದು ಸಲಹೆ ಕೊಟ್ಟನು.)

**ಶ್ಲೋಕ॥ ನವೈವಧಂ ರಾಮಇಯೇಷ ತಸ್ಯ । ಪಲಾಯಿತಸ್ಯಾತ್ಮಸಮೀಕ್ಷಣಾ ತ್ಪುನಃ ॥ ಸತ್ವೋಜ್ಝಿತೋಽಸಾ ವಿತಿ ಕೂಟಯೋಧೀ । ನಮೇ ವಧಾರ್ಹೋಽಯ ಮಿತಿಸ್ಮ ಸಪ್ರಭುಃ ॥ ೧೭೧ ॥**

**ಅರ್ಥ:—**ಅಸಾ=ಈ ಇಂದ್ರಜಿತುವು, ಸತ್ವೋಜ್ಝಿತಃ=ಹೋಗಲ್ಪಟ್ಟ ಸಾಮರ್ಥ್ಯವುಳ್ಳವನು, ಕೂಟಯೋಧೀ= ಕಪಟದಿಂದ ಯುದ್ಧಮಾಡತಕ್ಕ ವನು, ಹಿ=ಈ ಕಾರಣದಿಂದ, ಅಯಂ=ಈ ಇಂದ್ರಜಿತುವು, ಮೇ=ನನಿಗೆ (ನನ್ನಿಂದ) ನವಧಾರ್ಹಃ=ಸಂಹರಿಸಲ್ಪಡಲು ಅರ್ಹನಲ್ಲ. ಇತಿಸ್ಮ=ಈ ರೀತಿ ಭಾವಿಸಿ, ಪುನಃ, ಆತ್ಮಸಮೀಕ್ಷಣಾತ್=ತನ್ನನ್ನು ನೋಡಿದಮಾತ್ರದಿಂದಲೇ, ಪಲಾಯಿತಸ್ಯ=ಓಡಿಹೋದ, ತಸ್ಯ=ಆ ಇಂದ್ರಜಿತುವಿನ, ವಧಂ=ಸಂಹಾರ ವನ್ನ, ಪ್ರಭುಃ=ಸ್ವಾಮಿಯಾದ, ಸಃ=ಆ, ರಾಮಃ=ಶ್ರೀರಾಮಚಂದ್ರನು ನವೈಇಯೇಷ=ಇಚ್ಛಿಸಲಿಲ್ಲವು.

**ತಾತ್ಪರ್ಯ:—**ಬಲಹೀನನಾದ ಅತಿ ಕಪಟದಿಂದ ಯುದ್ಧಮಾಡುವ ಈ ಇಂದ್ರಜಿತುವನ್ನು ಸಂಹರಿಸುವದು ನನಿಗೆ ಯುಕ್ತವಲ್ಲವು ಎಂದು ಭಾವಿಸಿ ತನ್ನ ದೃಷ್ಟಿಗೆ ಬೀಳದೆ ತಪ್ಪಿಸಿಕೊಂಡು ಓಡಿಹೋದ ಆ ಇಂದ್ರಜಿತು ವನ್ನು ಸಂಹರಿಸಲು ಇಷ್ಟಪಡಲಿಲ್ಲ.

**ಶ್ಲೋಕ॥ ಸ ಆದಿದೇಶಾ ವರಜಂ ಜನಾರ್ದನೋ । ಹನೂಮತಾಚೈವ ವಿಭೀ ಷಣೇನ ॥ ಸಹೈವಸರ್ವೈ ರಪಿ ವಾನರೇಂದ್ರೈ । ರ್ಯಯೌ ಮಹಾ ತ್ಮಾ ಸಚತದ್ವ ಧಾಯ ॥ ೧೭೨ ॥**

**ಅರ್ಥ** :—ಸಃ=ಆ, ಜನಾರ್ದನಃ = ಸರ್ವಜಗತ್ಸಂಹಾರಕನಾದ ಶ್ರೀ ರಾಮಚಂದ್ರನು, ಅವರಜಂ=ತಮ್ಮನಾದ ಲಕ್ಷ್ಮಣನಿಗೆ; ಆದಿದೇಶ=ಅಪ್ಪಣೆ ಮಾಡಿದನು. ಮಹಾತ್ಮಾ=ಮಹಾ ಧೈರ್ಯಶಾಲಿಯಾದ, ಸಚ=ಲಕ್ಷ್ಮ ಣನು, ಹನೂಮತಾಚ = ಹನುಮಂತನಿಂದಲೂ, ವಿಭೀಷಣೇನ=ವಿಭೀಷಣ ನಿಂದಲೂ, ಸರ್ವೈಃ=ಸಮಸ್ತರಾದ, ವಾನರೇಂದ್ರೈರಪಿ=ಕಪಿಗಳಿಂದಲೂ, ಸಹೈವ=ಕೂಡಿಕೊಂಡು, ತದ್ವಧಾಯ=ಆ ಇಂದ್ರಜಿತುವಿನ ಸಂಹಾರಕ್ಕೋ ಸ್ಕರ, ಯಯೌ=ಹೊರಟನು.

**ತಾತ್ಪರ್ಯ** :—ಸರ್ವಜಗತ್ಸಂಹಾರಕನಾದ ಶ್ರೀರಾಮನು ತಮ್ಮನಾದ ಲಕ್ಷ್ಮಣನಿಗೆ ಆಜ್ಞಾಪಿಸಿದನು. ಆ ಲಕ್ಷ್ಮಣನು ಹನುಮಂತ ವಿಭೀಷಣ ಮತ್ತು ಸಮಸ್ತ ಕಪಿಶ್ರೇಷ್ಠರ ಸೈನ್ಯದಿಂದ ಸಹಿತನಾಗಿ ಇಂದ್ರಜಿತುವಿನ ವಧೆಗೆ ಹೊರಟನು.

**ಶ್ಲೋಕ॥ ಸಜುಹ್ವತ ಸ್ತಸ್ಯ ಚಕಾರವಿಘ್ನಂ । ಪ್ಲವಂಗಮೈಃ ಸೋಥ ಯುಯು ತ್ಸಯಾರಥಂ ॥ ಸಮಾಸ್ಥಿತಃ ಕಾರ್ಮುಕ ಬಾಣಪಾಣಿಃ । ಪ್ರತ್ಯು ದ್ಯಯೌ ಲಕ್ಷ್ಮಣ ಮಾಶುಗರ್ಜನ್ ॥ ೧೭೩ ॥**

**ಅರ್ಥ**:—ಸಃ=ಆ ಲಕ್ಷ್ಮಣನು, ಪ್ಲವಂಗಮೈಃಸಹಃ = ಕಪಿಗಳಿಂದ ಕೂಡಿಕೊಂಡು, ಜುಹ್ವತಃ=ಹೋಮಮಾಡುತ್ತಿರುವ, ತಸ್ಯ=ಆ ಇಂದ್ರಜಿತು ವಿಗೆ, ವಿಘ್ನಂ=ವಿಘ್ನವನ್ನು, ಚಕಾರ=ಮಾಡಿದನು. ಅಥ=ಅನಂತರ, ಸಃ= ಆ ಇಂದ್ರಜಿತುವು, ಯುಯುತ್ಸಯಾ=ಯುದ್ಧಾಪೇಕ್ಷೆಯಿಂದ, ಕಾರ್ಮುಕ ಬಾಣಪಾಣಿಃ=ಬಿಲ್ಲುಬಾಣಗಳನ್ನು ಧರಿಸಿ, ರಥಂ=ರಥವನ್ನು, ಸಮಾಸ್ಥಿತಃ= ಆರೋಹಣಮಾಡಿ, ಲಕ್ಷ್ಮಣಂಪ್ರತಿ = ಲಕ್ಷ್ಮಣನನ್ನು ಎದುರಿಸಿಕೊಂಡು, ಗರ್ಜನ್=ಸಿಂಹನಾದ ಮಾಡುತ್ತಾ, ಆಶು=ಶೀಘ್ರವಾಗಿ, ಪ್ರತ್ಯುದ್ಯಯೌ= ಯುದ್ಧಕ್ಕೆ ಬಂದನು.

**ತಾತ್ಪರ್ಯ**:—ಅನಂತರ ಲಕ್ಷ್ಮಣನು ಇಂದ್ರಜಿತುವು ಹೋಮಮಾ ಡುತ್ತಿದ್ದ ನಿಕುಂಭಿಳಾ ಸ್ಥಾನಕ್ಕೆ ಹೋಗಿ ಕಪಿಗಳಿಂದ ಕೂಡಿ ಅವನ ಅರ್ಚನ ಹೋಮಾದಿಗಳಿಗೆ ವಿಘ್ನಮಾಡಿದನು. ಆ ಇಂದ್ರಜಿತುವು ಮಹಾ ಕುಪಿತ ನಾಗಿ ಯುದ್ಧಮಾಡಲಪೇಕ್ಷೆಯಿಂದ ಧನುರ್ಬಾಣಗಳನ್ನು ಕೈಯಲ್ಲಿ ಹಿಡಿದು ರಥಾರೂಢನಾಗಿ ಸಿಂಹನಾದ ಮಾಡುತ್ತಾ ಲಕ್ಷ್ಮಣನ ಎದುರಿಗೆ ಬಂದನು.

ಶ್ಲೋಕ॥ ಉಭೌಚತಾ ವಸ್ತ್ರವಿದಾಂವರಿಷ್ಠೌ । ಶರೈಃ ಶರೀರಾಂತಕರೈಃ ಸ್ತತಕ್ಷತುಃ ॥ ದಿಶಶ್ಚ ಸರ್ವಾಃ ಪ್ರದಿಶಶ್ಚರೋತ್ತಮೈ । ರ್ವಿಧಾಯ ಶಿಕ್ಷಾಸ್ತ್ರಬಲೈ ರ್ನಿರಂತರಾಃ ॥ ೧೭೪ ॥

ಅರ್ಥ:—ಅಸ್ತ್ರವಿದಾಂ=ಅಸ್ತ್ರಶಾಸ್ತ್ರವನ್ನು ತಿಳಿದವರಲ್ಲಿ ವರಿಷ್ಠೌ=ಅಗ್ರಗಣ್ಯರಾದ, ತೌ=ಆ ಲಕ್ಷ್ಮಣೇಂದ್ರಜಿತುರುಗಳು, ಉಭೌಚ=ಉಭಯತ್ರರೂ, ಶಿಕ್ಷಾಸ್ತ್ರಬಲೈಃ=ಶಿಕ್ಷಾಸ್ತ್ರ=ಅಭ್ಯಸಿಸಲ್ಪಟ್ಟ, ಅಸ್ತ್ರ=ಅಸ್ತ್ರಶಾಸ್ತ್ರದ, ಬಲೈಃ = ಮಹತ್ತಿನಿಂದಲೂ, ಶರೋತ್ತಮೈಃ = ಉತ್ತಮವಾದ ಬಾಣಗಳಿಂದ, ದಿಶಶ್ಚ ಸರ್ವಾಃ=ಚತುರ್ದಿಕ್ಕುಗಳನ್ನೂ, ಪ್ರದಿಶಶ್ಚ = ಅಷ್ಟವಿದಿಕ್ಕುಗಳನ್ನೂ ಸಹ, ನಿರಂತರಾಃ = ಸ್ವಲ್ಪವೂ ಅವಕಾಶವಿಲ್ಲದವುಗಳನ್ನಾಗಿ, ವಿಧಾಯ = ಮಾಡಿ, ಶರೀರಾಂತಕರೈಃ = ದೇಹಗಳನ್ನು ನಾಶಮಾಡತಕ್ಕ, ಶರೈಃ=ಬಾಣಗಳಿಂದ, ತತಕ್ಷತುಃ=ಹೊಡೆದಾಡಿದರು.

ತಾತ್ಪರ್ಯ:—ಅಸ್ತ್ರಜ್ಞರಲ್ಲಿ ಶ್ರೇಷ್ಠರಾದ ಲಕ್ಷ್ಮಣನು ಮತ್ತು ಇಂದ್ರಜಿತುವು ಸುಶಿಕ್ಷಿತವಾದ ಅಸ್ತ್ರಶಾಸ್ತ್ರದ ಮಹತ್ವದಿಂದ ಸಮಸ್ತ ದಿಕ್ಕುಗಳನ್ನೂ ಬಾಣಗಳಿಂದ ಸ್ವಲ್ಪವೂ ಅವಕಾಶವಿಲ್ಲದಂತೆ ತುಂಬಿಸಿ ಪ್ರಾಣಾಂತಕಗಳಾದ ಬಾಣಗಳಿಂದ ಹೊಡೆದಾಡಿದರು.

ಅವತಾರಿಕೆ:—ಇಂದ್ರಜಿತುವನ್ನು ಲಕ್ಷ್ಮಣನು ಸಂಹರಿಸಿದನೆಂದು ಈ ಶ್ಲೋಕದಲ್ಲಿ ನಿರೂಪಿತವಾಗಿದೆ.

ಶ್ಲೋಕ॥ ಅಸ್ತ್ರಾಣಿ ತಸ್ಯಾಸ್ತ್ರವರೈಃ ಸಲಕ್ಷ್ಮಣೋ । ನಿವಾರ್ಯಶತ್ರೋಶ್ಚಲಕುಂಡಲೋಜ್ವಲಂ ॥ ಶಿರಃಶರೇಣಾಶು ಸಮುನ್ಮಮಾಥ । ಸುರೈಃ ಪ್ರಸೂನೈ ರಥವಾಭಿವೃಷ್ಟಃ ॥ ೧೭೫ ॥

ಅರ್ಥ:—ಸಲಕ್ಷ್ಮಣಃ=ಆ ಲಕ್ಷ್ಮಣನು, ತಸ್ಯ=ಆ ಇಂದ್ರಜಿತುವಿನ, ಅಸ್ತ್ರಾಣಿ=ಅಸ್ತ್ರಗಳನ್ನು, ಅಸ್ತ್ರವರೈಃ=ತನ್ನ ಶ್ರೇಷ್ಠವಾದ ಅಸ್ತ್ರಗಳಿಂದ, ನಿವಾರ್ಯ=ತಡೆದು (ಪರಿಹರಿಸಿ), ಶತ್ರೋಃ=ಶತ್ರುವಾದ ಇಂದ್ರಜಿತುವಿನ ಚಲ=ಚಲಿಸುತ್ತಿರುವ, ಕುಂಡಲ=ಕರ್ಣಾಭರಣಗಳಿಂದ, ಉಜ್ವಲ=ಅತ್ಯಂತ ಪ್ರಕಾಶಮಾನವಾದ, ಶಿರಃ=ಶಿರಸ್ಸನ್ನು, ಆಶು=ತಕ್ಷಣವೇ, ಶರೇಣ=ಬಾಣದಿಂದ, ಸಮುನ್ಮಮಾಥ=ಕತ್ತರಿಸಿದನು. ಅಥ=ಅನಂತರ, ಸುರೈಃ=ದೇವತೆ

ಗಳಿಂದ, ಪ್ರಸೂನೈಃ = ಪುಷ್ಪಗಳಿಂದ, ಅಭಿವೃಷ್ಟಃ = ಮಳೆ ಗರಿಯಲ್ಪಟ್ಟಿತು.

**ತಾತ್ಪರ್ಯ:**—ಲಕ್ಷ್ಮಣೇಂದ್ರಜಿತುಗಳು ಯುದ್ಧ ಮಾಡುತ್ತಿರುವಲ್ಲಿ ಲಕ್ಷ್ಮಣನು ಇಂದ್ರಜಿತುವಿನ ಅಸ್ತ್ರಗಳನ್ನು ತನ್ನ ಶ್ರೇಷ್ಠವಾದ ಅಸ್ತ್ರಗಳಿಂದ ಪರಿಹರಿಸಿಕೊಂಡು ಇಂದ್ರಜಿತುವಿನ ಚಂಚಲವಾದ ಕುಂಡಲಗಳಿಂದ ಪ್ರಕಾಶಿಸುವ ತಲೆಯನ್ನು ತನ್ನ ಶ್ರೇಷ್ಠವಾದ ಬಾಣದಿಂದ ಜಾಗ್ರತೆಯಾಗಿ ಕತ್ತರಿಸಿದನು. ದೇವತೆಗಳು ಪುಷ್ಪವೃಷ್ಟಿಯನ್ನು ಕರೆದರು.

**ಶ್ಲೋಕ॥ ನಿಪಾತಿತೇಽಸ್ಮಿನ್ನಿತರಾಂ ನಿಶಾಚರಾನ್ । ಪ್ಲವಂಗಮಾ ಜಘ್ನು ರನೇಕಕೋಟಿಶಃ ॥ ಹತಾ ವಶಿಷ್ಟಾಸ್ತು ದಶಾನನಾಯ । ಶಶಂಸು ರತ್ಯಾಪ್ತ ಸುತ ಪ್ರಣಾಶಂ ॥ ೧೭೬ ॥**

**ಅರ್ಥ:**—ಅಸ್ಮಿನ್ = ಈ ಇಂದ್ರಜಿತುವು, ನಿಪಾತಿತೇಸತಿ = ಸಂಹರಿಸಲ್ಪಟ್ಟು ಕೆಳಗೆ ಬೀಳುತ್ತಲೇ, ಅನೇಕ ಕೋಟಿಶಃ=ಅನೇಕ ಕೋಟಿ ಸಂಖ್ಯಾಕರಾದ, ನಿತರಾಂ—ಮಿಕ್ಕ ಎಲ್ಲಾ, ನಿಶಾಚರಾನ್—ರಾಕ್ಷಸರನ್ನು, ಪ್ಲವಂಗಮಾಃ—ವಾನರರು, ಜಘ್ನುಃ—ಸಂಹಾರಮಾಡಿದರು. ಹತಾವಶಿಷ್ಟಾಸ್ತು—ಸಂಹರಿಸಲ್ಪಟ್ಟು ಬಾಕಿ ಉಳಿದ ರಾಕ್ಷಸರು, ದಶಾನನಾಯ- ರಾವಣನಿಗೆ, ಅತ್ಯಾಪ್ತ—ಅತ್ಯಂತ ಪ್ರೀತಿಪಾತ್ರನಾದ, ಸುತ—ಮಗನಾದ ಇಂದ್ರಜಿತುವಿನ, ಪ್ರಣಾಶಂ—ಮರಣದ ವಾರ್ತೆಯನ್ನು, ಶಶಂಸುಃ—ತಿಳಿಸಿದರು.

**ತಾತ್ಪರ್ಯ:**—ಇಂದ್ರಜಿತುವು ಲಕ್ಷ್ಮಣನಿಂದ ಮೃತಪಟ್ಟು ಬಿದ್ದು ಹೋದ ನಂತರ ಅವನ ಸೈನ್ಯದಲ್ಲಿದ್ದ ಸಮಸ್ತ ರಾಕ್ಷಸರನ್ನು ಕಪಿಪ್ರಮುಖರು ನಾಶಮಾಡಿದರು. ಅದರಲ್ಲಿ ಕಳೆದು ಉಳಿದ ಅಲ್ಪಸ್ವಲ್ಪ ರಾಕ್ಷಸರು ತಪ್ಪಿಸಿಕೊಂಡು ರಾವಣನ ಬಳಿಗೆ ಓಡಿಹೋಗಿ ಅವನ ಅತ್ಯಂತ ಪ್ರೀತಿಪಾತ್ರನಾದ ಇಂದ್ರಜಿತುವಿನ ಮರಣದ ಸುದ್ಧಿಯನ್ನು ಹೇಳಿದರು.

**ಶ್ಲೋಕ॥ ಸತಂ ನಿಶಮ್ಯಾ ಪ್ರಿಯ ಮುಗ್ರರೂಪಂ । ಭೃಶಂ ವಿನಿಶ್ವಸ್ಯ ವಿಲಪ್ಯ ದುಃಖಾತ್ ॥ ಸಂಸ್ಥಾಪಯಾಮಾಸ ಮತಿಂಪುನಶ್ಚ । ಮರಿಷ್ಯ ಇತ್ಯೇವ ಸುನಿಶ್ಚಿತಾರ್ಥಃ ॥ ೧೭೭ ॥**

**ಅರ್ಥ:**—ಸಃ- ರಾವಣನು, ಅಪ್ರಿಯಂ- ದುಃಖರೂಪವಾದ, ಉಗ್ರರೂಪಂ- ಕಠಿನವಾದ, ತಂ- ಇಂದ್ರಜಿತುವಿನ ಮರಣದವಾರ್ತೆಯನ್ನು, ನಿಶಮ್ಯ—

ಕೇಳಿ, ಭೃಶಂ=ದುಃಖದಿಂದ ಅತ್ಯಂತ ಗಟ್ಟಿಯಾಗಿ, ವಿನಿಶ್ವಸ್ಯ-ನಿಟ್ಟುಸಿರು ಬಿಟ್ಟು, ದುಃಖಾತ್-ದುಃಖದಿಂದ, ವಿಲಪ್ಯ-ಪ್ರಲಾಪಮಾಡಿ, ಪುನಶ್ಚ-ತಿರಿಗಿಯೂ ಸುನಿಶ್ಚಿತ-ದೃಢೀಕರಿಸಲ್ಪಟ್ಟ, ಅರ್ಥಃಸರ್ಗ=ಮರಣಲಕ್ಷಣವಾದ ಪ್ರಯೋಜನವುಳ್ಳವನಾಗಿ, ಅಹಂಮರಿಷ್ಯೇವ - ನಾನೂ ಮೃತನಾಗುತ್ತೇನೆ, ಇತಿ= ಹೀಗೆಂದು, ಮತಿಂ-ಮನಸ್ಸನ್ನು, ಸಂಸ್ಥಾಪಯಾಮಾಸ-ಸ್ಥಿರಪಡಿಸಿಕೊಂಡನು.

ತಾತ್ಪರ್ಯ:—ರಾವಣನು ದುಃಖಕರವಾದ ಅತಿಕ್ರೂರವಾದ ಪುತ್ರನು ನಾಶವಾದ ವರ್ತಮಾನವನ್ನು ಕೇಳಿ, ಮಹಾದುಃಖದಿಂದ ಅತ್ಯುಚ್ಚವಾಗಿ ನಿಟ್ಟುಸಿರುಬಿಟ್ಟು ಪ್ರಲಾಪಮಾಡಿದನು. ಅನಂತರ ತಾನು ಬದುಕಿರುವದಕ್ಕಿಂತಲೂ ಮೃತನಾಗುವದೇ ಉತ್ತಮವೆಂದು ತಿಳಿದನು. ಹೇಗಾದರೂ ಮೃತನಾಗುತ್ತೇನೆಂದು ಮನಸ್ಸನ್ನು ಸಮಾಧಾನ ಮಾಡಿಕೊಂಡನು.

**ಶ್ಲೋಕ॥ ಮರಣಾಭಿಮುಖಃ ಶೀಘ್ರಂ । ರಾವಣೋ ರಣಕರ್ಮಣಿ ॥ ಸಜ್ಜೀಭವನ್ನಂತರ್ಥೈವ । ದಿದೇಶ ಬಲಮೂರ್ಜಿತಂ ॥ ೧೭೪ ॥**

ಅರ್ಥ:—ಮರಣಾಭಿಮುಖಃ - ಮರಣೋನ್ಮುಖನಾದ, ರಾವಣಃ-ರಾವಣನು, ಶೀಘ್ರಂ-ಜಾಗ್ರತೆಯಾಗಿ, ರಣಕರ್ಮಣಿ-ಯುದ್ಧಕಾರ್ಯದಲ್ಲಿ, ಸಜ್ಜೀಭವನ್-ಸಿದ್ಧನಾದನು. ಅಂತರ್ಥೈವ-ಅಷ್ಟರೊಳಗಾಗಿಯೇ, ಊರ್ಜಿತಂ-ಶಸ್ತ್ರ ಮತ್ತು ಬಲಾದಿಗಳಿಂದ ಉತ್ಕೃಷ್ಟವಾದ, ಬಲಂ-ಮೂಲಬಲವನ್ನು, ದಿದೇಶ-ಅಪ್ಪಣೆಮಾಡಿ ಕಳುಹಿಸಿದನು.

ತಾತ್ಪರ್ಯ:—ಮೃತ್ಯುವಿಗೆ ಅಭಿಮುಖನಾದ ರಾವಣನು ತಾನು ಸಾಯುವುದೇ ಉತ್ತಮವೆಂದು ನಿಶ್ಚಯಿಸಿ ಯುದ್ಧಕ್ಕೆ ಬೇಕಾದ ಸಲಿಕರಣೆಗಳನ್ನು ಸರಿಪಡಿಸಿಕೊಂಡು ಸಿದ್ಧನಾದನು, ಮತ್ತು ಅಷ್ಟರೊಳಗಾಗಿಯೇ ಸಂಖೆಯಿಂದಲೂ ಬಲದಿಂದಲೂ ಉತ್ಕೃಷ್ಟವಾದ ಮೂಲಬಲವನ್ನು ಅಪ್ಪಣೆಮಾಡಿ ಕಳುಹಿಸಿದನು.

**ಶ್ಲೋಕ॥ ತ್ರಿಂಶತ್ಸಹಸ್ರಾಣಿ ಮಹಾಘೋಕಾನಾಂ । ಅಕ್ಷೋಹಿಣೀನಾಂ ಸಹಷಟ್ಸಹಸ್ರಂ ॥ ಕ್ರಮೇಣ ಸಂಯೋಜಯತಾಮರೇಣ । ಸಜ್ಜೀಭವಾನೀತಿ ದಿದೇಶ ರಾವಣಃ ॥ ೧೭೯ ॥**

**ಅರ್ಥ:**—ರಾವಣನು ಅಕ್ಷೋಹಿಣೀನಾಂ – ಅಕ್ಷೋಹಿಣಿಗಳ, ಷಟ್ಸಹಸ್ರಂ–ಆರು ಸಹಸ್ರ ಬಲವನ್ನು, ಸಹ-ಸೇರಿಸಿ, ಮಹೌಘಕಾನಾಂ–ಮಹೌಘಸಂಕೇತವಾದ ಬಲದ, ತ್ರಿಂಶತ್ಸಹಸ್ರಾಣಿ – ಮೂವತ್ತುಸಾವಿರ ಸೈನ್ಯವನ್ನು, ಕ್ರಮೇಣ–ಕಷ್ಟದಿಂದ, ಆಶು–ಜಾಗ್ರತೆಯಾಗಿ, ಸಂಯೋಜಯಾತ್ – ಸೇರಿಸಿದನು, ಮತ್ತು ರಾಮಂಪ್ರತಿ – ರಾಮನನ್ನು, ಸಜ್ಜೀಭವಾಮಿ– ಯುದ್ಧಕ್ಕೆ ಸಿದ್ಧಪಡಿಸಿರಿ. ಇತಿ–ಹೀಗೆಂದು, ಉದೇಶ–ಹೇಳಿದನು.

**ತಾತ್ಪರ್ಯ:**—ರಾವಣನು ರಾಮರ ಸಂಗಡ ಯುದ್ಧಕ್ಕಾಗಿ ಮೂವತ್ತಾರುಸಹಸ್ರ ಮಹೌಘಸಂಜ್ಞಕವಾದ ಅಕ್ಷೋಹಿಣಿ ಬಲವನ್ನು ಕ್ರಮದಿಂದ ಬಹು ಜಾಗ್ರತೆಯಾಗಿ ಸೇರಿಸಿ ಅವರನ್ನು ಕುರಿತು ನೀವು ಶೀಘ್ರವಲ್ಲಿ ಹೋಗಿ ರಾಮನನ್ನು ಬಾಧಿಸರಿ ನಾನು ಯುದ್ಧಕ್ಕೆ ಸಿದ್ಧನಾಗುತ್ತೇನೆ ಎಂದು ಹೇಳಿದನು.

**ಶ್ಲೋಕ॥ ತದಪ್ರಧೃಷ್ಯಂ ವರತಃಸ್ವಯಂಭುವೋ । ಯುಗಾಂತಕಾಲಾರ್ಣವ ಘೂರ್ಣಿತೋಪಮಂ ॥ ಪ್ರಗೃಹ್ಯನಾನಾವಿಧ ಮಸ್ತ್ರಶಸ್ತ್ರಂ । ಬಲಂ ಕಪೀಂ ಶೀಘ್ರತಮಂಜಗಾಮ ॥ ೧೮೦ ॥**

**ಅರ್ಥ:**—ಸ್ವಯಂಭುವಃ–ಬ್ರಹ್ಮದೇವರ, ವರತಃ–ವರದಿಂದ, ಅಪ್ರಧೃಷ್ಯಂ–ಸಹಿಸಲಸಾಧ್ಯವಾದ, ಯುಗಾಂತಕಾಲ–ಪ್ರಲಯಕಾಲದ, ಅರ್ಣವ–ಸಮುದ್ರದೋಪಾದಿಯಲ್ಲಿ, ಘೂರ್ಣಿತೋಪಮಂ– ಉಕ್ಕಿಬರುತ್ತಿರುವ, ತತ್–ರಾವಣನಿಂದ ಕಳುಹಿಸಲ್ಪಟ್ಟ, ಬಲಂ–ಸೈನ್ಯವು, ನಾನಾವಿಧಂ–ಅನೇಕ ವಿಧಗಳಾದ, ಅಸ್ತ್ರಶಸ್ತ್ರಂ–ಅಸ್ತ್ರಶಸ್ತ್ರಗಳನ್ನು, ಪ್ರಗೃಹ್ಯ–ತೆಗೆದುಕೊಂಡು, ಕಪೀಃಪ್ರತಿ–ವಾನರರನ್ನು ಕುರಿತು, ಶೀಘ್ರತಮಂ–ಬಹು ಜಾಗ್ರತೆಯಿಂದ, ಜಗಾಮ–ಬಂದು ಸೇರಿತು.

**ತಾತ್ಪರ್ಯ.**—ಆ ಸೈನ್ಯವು ಬ್ರಹ್ಮದೇವರ ವರದ ಮಹಿಮೆಯಿಂದ ಯಾರಿಂದಲೂ ಸಹಿಸಲಸಾಧ್ಯವಾಗಿದ್ದಿತು. ಜಗತ್ಪ್ರಲಯದಲ್ಲಿ ಉಕ್ಕಿಬರುತ್ತಲಿರುವ ಸಮುದ್ರಕ್ಕೆ ಸದೃಶವಾದ ಆ ಸೈನ್ಯವು ಅನೇಕ ವಿಧವಾದ ಅಸ್ತ್ರಗಳನ್ನೂ ಶಸ್ತ್ರಗಳನ್ನೂ ತೆಗೆದುಕೊಂಡು ವಾನರರ ಸಂಗಡ ಯುದ್ಧಕ್ಕಾಗಿ ಬಂದು ಸೇರಿತು.

**ಶ್ಲೋಕ॥ ಆಗಚ್ಛಮಾನಂ ತದಪಾರಮೇಯಂ । ಬಲಂ ಸುಘೋರಂ ಪ್ರಲಯಾರ್ಣವೋಪಮಂ ॥ ಭಯಾತ್ಸಮುದ್ವೀಕ್ಷ್ಯ ವಿಷಣ್ಣಚೇತಸಃ । ಕಪಿಪ್ರವೀರಾ ನಿತರಾಂ ಪ್ರದುದ್ರುವುಃ ॥ ೧೮೧ ॥**

**ಅರ್ಥ:—** ತತ್=ಆ ರಾವಣನಿಂದ ಕಳುಹಿಸಲ್ಪಟ್ಟ, ಆಗಚ್ಛಮಾನಂ=ತಮ್ಮ ಸಂಗಡ ಯುದ್ಧಕ್ಕಾಗಿ ಬರುತ್ತಲಿರುವ, ಅಪಾರಮೇಯಂ=ಕೊನೆ ಮೊದಲಿಲ್ಲದೇ ಇರುವ, ಪ್ರಲಯಾರ್ಣವೋಪಮಂ = ಪ್ರಲಯಕಾಲದಲ್ಲಿ ಉಕ್ಕಿ ಬರುತ್ತಿರುವ ಸಮುದ್ರದೋಪಾದಿಯಲ್ಲಿ, ಸುಘೋರಂ = ಅತ್ಯಂತ ಭಯಂಕರವಾದ, ಬಲಂ = ರಾವಣನ ಸೈನ್ಯವನ್ನು ಸಮುದ್ವೀಕ್ಷ್ಯ ನೋಡಿ, ವಿಷಣ್ಣಚೇತಸಃ = ಖೇದಮನಸ್ಕರಾದ, ಕಪಿಪ್ರವೀರಾಃ=ವಾನರವೀರರು, ಭಯಾತ್=ಭಯಪಟ್ಟು, ನಿತರಾಂ=ಸಮಸ್ತರೂ, ಪ್ರದುದ್ರುವುಃ=ಓಡಿಹೋದರು.

**ತಾತ್ಪರ್ಯ:—** ತಮ್ಮ ಸಂಗಡ ಯುದ್ಧಾರ್ಥವಾಗಿ ಬರುತ್ತಿರುವ ಅಪಾರವಾದ ಪ್ರಲಯಕಾಲದಲ್ಲಿ ಉಕ್ಕಿಬರುತ್ತಿರುವ ಸಮುದ್ರದ ಹಾಗೆ ಅತ್ಯಂತ ಭಯಂಕರವಾಗಿರುವ, ಆ ರಾವಣನ ಬಲವನ್ನು ನೋಡಿ ಸಮಸ್ತ ಕಪಿವೀರರೂ ಖಿನ್ನಮನಸ್ಕರಾಗಿ ಭಯಪಟ್ಟು ಓಡಿಹೋದರು.

**ಅವತಾರಿಕೆ:—** ಅಪಾರವಾದ ರಾವಣನ ಸೈನ್ಯವು ಬಹು ಸ್ವಲ್ಪ ವಿಸ್ತೀರ್ಣವುಳ್ಳ ಆ ಲಂಕೆಯಲ್ಲಿ ಹೇಗೆ ಇತ್ತು, ಮತ್ತು ಆ ಕಪಿವೀರರು ಯುದ್ಧ ಮಾಡುವದನ್ನು ಬಿಟ್ಟು ಏಕೆ ಓಡಿಹೋದರು, ಎಂಬ ಶಂಕಾಪ್ರಾಪ್ತವಾಗುವದರಿಂದ, ಆ ಶಂಕಾವನ್ನು ಈ ಶ್ಲೋಕದಿಂದ ಪರಿಹಾರ ಮಾಡುತ್ತಾರೆ.

**ಶ್ಲೋಕ॥ ವರೋಹಿ ದತ್ತೋಽಸ್ಯ ಪುರಾಸ್ವಯಂಭುವಾ । ಧರಾತಲೇಽಲ್ಪೇಽಪಿ ನಿವಾಸಶಕ್ತಿಃ । ಅಜೇಯತಾಚೇ ತ್ಯತಯೇವ ಸಾರ್ಕಜಾಃ । ಪ್ಲವಂಗಮಾ ದ್ರಷ್ಟುಮಪಿಸ್ಮನಾಶಕನ್ ॥ ೧೮೨ ॥**

**ಅರ್ಥ:—** ಪುರಾ=ಪೂರ್ವದಲ್ಲಿ, ಅಸ್ಯ=ಈ ಮೂಲ ಬಲಕ್ಕೆ, ಸ್ವಯಂಭುವಾ=ಬ್ರಹ್ಮದೇವರಿಂದ, ಧರಾತಲೇ=ಈ ಭೂಮಿಯಲ್ಲಿ ಲಂಕೆಯು, ಅಲ್ಪೇಽಪಿ=ಬಹಳ ಸ್ವಲ್ಪ ಪ್ರದೇಶವಾದಾಗ್ಯೂ, ನಿವಾಸಶಕ್ತಿಃ=ವಾಸಮಾಡತಕ್ಕ ಸಾಮರ್ಥ್ಯವನ್ನೂ, ಅಜೇಯತಾಚ=ಯಾರಿಂದಲೂ ಜಯಿಸಲಸಾಧ್ಯವಾಗಿರೋಣವನ್ನೂ ಸಹ, ಹಿ=ಯಾವ ಕಾರಣದಿಂದ. ವರಃ = ವರವು,

ದತ್ತಃ=ಕೊಡಲ್ಪಟ್ಟದ್ದೀತೋ, ಅತಯೋವ=ಆ ಕಾರಣದಿಂದ, ಸಾರ್ಕಜಾಃ=ಸುಗ್ರೀವನಿಂದ ಸಹಿತರಾದ, ಪ್ಲವಂಗಮಾಃ=ಕಪಿಗಳು, ತಂ=ಆ ಬಲವನ್ನು, ದ್ರಷ್ಟುಮಪಿ=ದೃಷ್ಟಿಸಿ ನೋಡುವುದಕ್ಕೂ ಸಹ, ನಾಶಕನ್ಸ್ಮ=ಶಕ್ತರಾಗಲಿಲ್ಲ.

**ತಾತ್ಪರ್ಯ:—** ಪೂರ್ವದಲ್ಲಿ ಬ್ರಹ್ಮದೇವರಿಂದ ಈ ಬಲವು ಬಹು ವಿಸ್ತಾರವಾಗಿದ್ದಾಗ್ಯೂ ಈ ಭೂಲೋಕದಲ್ಲಿ ಲಂಕೆಯು ಬಹಳ ಸ್ವಲ್ಪ ಪ್ರದೇಶವಾಗಿದ್ದಾಗ್ಯೂ ಅಷ್ಟರಲ್ಲೇ ವಾಸಮಾಡುವ ಮತ್ತು ಯಾರಿಂದಲೂ ಅಪಜಯವಿಲ್ಲದಿರುವ ಹಾಗೆ ವರವು ಕೊಡಲ್ಪಟ್ಟಿತ್ತು. ಆ ವರದ ಮಹತ್ವದ್ದೆಶೆಯಿಂದ ಯುದ್ಧಕ್ಕೆ ಬರುತ್ತಿರುವ ಆ ಬಲವನ್ನು ಸುಗ್ರೀವಾದಿ ಸರ್ವ ಕಪಿಗಳೂ ಕಣ್ಣಿನಿಂದ ದೃಷ್ಟಿಸಿ ನೋಡುವುದಕ್ಕೂ ಸಹ ಶಕ್ತರಾಗಲಿಲ್ಲ.

**ಅವತಾರಿಕೆ:—** ಈ ಅಪರಿಮಿತವಾದ ಬಲವನ್ನು ಶ್ರೀರಾಮರೇ ಸಂಹಾರ ಮಾಡಿದರೆಂಬುದನ್ನು ಮುಂದಿನ ಶ್ಲೋಕದಿಂದ ತಿಳಿಯಪಡಿಸುತ್ತಾರೆ.

**ಶ್ಲೋಕ॥ ಪ್ರಗೃಹ್ಯರಾಮೋಽಪಿ ಧನುಃ ಶರಾಂಶ್ಚ । ಸಮಂತತಸ್ತಾ ನವಧೀಚ್ಛರೋಘೈಃ ॥ ಸಏವಸರ್ವತ್ರಚ ದೃಶ್ಯಮಾನೋ । ವಿದಿಕ್ಷುದಿಕ್ಷು ಪ್ರಜಘಾನಸರ್ವಶಃ ॥ ೧೮೩ ॥**

**ಅರ್ಥ:—** ರಾಮೋಽಪಿ = ಶ್ರೀರಾಮಚಂದ್ರನೇ, ಧನುಃ=ಧನುಸ್ಸನ್ನೂ ಶರಾಂಶ್ಚ=ಬಾಣಗಳನ್ನೂ, ಪ್ರಗೃಹ್ಯ=ಧಾರಣಮಾಡಿ, ತಾನ್=ಆ ರಾಕ್ಷಸರನ್ನು, ಶರೋಘೈಃ=ಬಾಣಗಳ ಸಮೂಹದಿಂದ, ಸಮಂತತಃ=ಸರ್ವತ್ರ, ಅವಧೀತ್=ಸಂಹಾರ ಮಾಡಿದನು. (ಹೇಗೆ ಸಂಹಾರ ಮಾಡಿದನೆಂದರೆ) ಸಯೇವಚ=ಆ ಒಬ್ಬ ರಾಮದೇವನೇ, ದಿಕ್ಷುವಿದಿಕ್ಷು=ದಿಕ್ಕುದಿಕ್ಕುಗಳಲ್ಲಿಯೂ, ಸರ್ವತ್ರ=ಸಮಸ್ತ ಪ್ರದೇಶದಲ್ಲಿಯೂ, ದೃಶ್ಯಮಾನಃಸನ್ = ಈ ರಾಕ್ಷಸರಿಗೆ ಅನಂತ ರಾಮರೂಪಗಳಿಂದ ಕಾಣಿಸಿಕೊಳ್ಳಲ್ಪಟ್ಟವನಾಗಿ, ಸರ್ವಶಃ = ಸಮಸ್ತರನ್ನೂ, ಪ್ರಜಘಾನ=ಸಂಹರಿಸಿದನು.

**ತಾತ್ಪರ್ಯ:—** ಶ್ರೀರಾಮನೇ ಸ್ವತಃ ಧನುರ್ಬಾಣಗಳನ್ನು ತೆಗೆದು ಕೊಂಡು, ಆ ರಾಕ್ಷಸ ಸೈನ್ಯದಲ್ಲಿ ದಿಕ್ಕು ವಿದಿಕ್ಕುಗಳೂ ಸರ್ವತ್ರ ಸ್ಥಳ

ದಲ್ಲಿಯೂ ಅನಂತ ರಾಮರೂಪದಿಂದ ಸಮಸ್ತ ರಾಕ್ಷಸರನ್ನೂ ಸಂಹಾರ ಮಾಡಿದನು.

**ಶ್ಲೋಕ॥ ಕ್ಷಣೇನಸರ್ವಾಂಶ್ಚ ನಿಹತ್ಯರಾಘವಃ । ಪ್ಲವಂಗಮಾನಾ ಮೃಷಭೈಃ ಸುಪೂಜಿತಃ ॥ ಅಭಿಷ್ಟುತಃಸರ್ವ ಸುರೋತ್ತಮೈರ್ಮುದಾ । ಭೃಶಂ ಪ್ರಸೂನೋ ತ್ಕರವರ್ಷಿಭಿಃ ಪ್ರಭುಃ ॥ ೧೮೪ ॥**

**ಅರ್ಥ:—** ರಾಘವಃ = ಶ್ರೀರಾಮನು, ಕ್ಷಣೇನ = ನಿಮಿಷಮಾತ್ರದಲ್ಲಿ, ಸರ್ವಾಂಶ್ಚ=ಸಮಸ್ತ ರಾಕ್ಷಸರನ್ನೂ, ನಿಹತ್ಯ=ಸಂಹಾರಮಾಡಿ, ಪ್ಲವಂಗಮಾನಾಂ=ಕಪಿಗಳ, ವೃಷಭೈಃ = ಶ್ರೇಷ್ಠರಿಂದ, ಸುಪೂಜಿತಃ=ಚೆನ್ನಾಗಿ ಪೂಜಿಸಲ್ಪಟ್ಟನು. ಮತ್ತು, ಪ್ರಭುಃ = ಜಗತ್ಪ್ರಭುವಾದ ಶ್ರೀರಾಮನು, ಪ್ರಸೂನ=ಪುಷ್ಪಗಳಂದ, ಉತ್ಕರ = ಅತ್ಯಂತವಾಗಿ, ವರ್ಷಿಭಿಃ=ಮಳೆಗರೆಯುತ್ತಲಿರುವ, ಸರ್ವಸುರೋತ್ತಮೈಃ=ಸಮಸ್ತ ದೇವತಾಶ್ರೇಷ್ಠರಿಂದಲೂ, ಮುದಾ = ಸಂತೋಷದಿಂದ, ಭೃಶಂ = ಅತ್ಯಂತವಾಗಿ, ಅಭಿಷ್ಟುತಃ = ಸ್ತುತಿಸಲ್ಪಟ್ಟನು.

**ತಾತ್ಪರ್ಯ :—** ಶ್ರೀರಾಮಚಂದ್ರನು ಅನಂತರಾಮರೂಪದಿಂದ ಸಮಸ್ತ ರಾಕ್ಷಸರನ್ನೂ ಕ್ಷಣಮಾತ್ರದಲ್ಲಿ ಸಂಹಾರ ಮಾಡಿದನು. ನಂತರ ಸಮಸ್ತ ಕಪಿವೀರರೂ ಇವನನ್ನು ಪೂಜಿಸಿದರು. ಮತ್ತು ಸಮಸ್ತ ದೇವೋತ್ತಮರೂ ವಿಶೇಷವಾಗಿ ಪುಷ್ಪವೃಷ್ಟಿಮಾಡುತ್ತಾ ಬಹು ಸಂತೋಷದಿಂದ ಜಗತ್ಪ್ರಭುವಾದ ಶ್ರೀರಾಮನನ್ನು ಬಹಳವಾಗಿ ಸ್ತೋತ್ರಮಾಡಿದರು.

**ಅವತಾರಿಕಾ:—** ಇಷ್ಟೆಲ್ಲಾ ಆದ ನಂತರ ರಾವಣನು ತಾನೇ ಯುದ್ಧಕ್ಕೆ ಹೊರಟನೆಂದು ವಕ್ಷ್ಯಮಾಣ ಶ್ಲೋಕಗಳಿಂದ ತಿಳಿಸುತ್ತಾರೆ.

**ಶ್ಲೋಕ॥ ಅಥಾಯಯೌ ಸರ್ವನಿಶಾಚರೇಶ್ವರೋ । ಹತಾವಸಿಷ್ಟೇನ ಬಲೇನ ಸಂವೃತಃ ॥ ವಿಮಾನಮಾರುಹ್ಯಚ ಪುಷ್ಪಕಂತ್ವರನ್ । ಶರೀರನಾಶಾಯ ಮಹಾಯುಧೋದ್ಧತಃ ॥ ೧೮೫ ॥**

**ಅರ್ಥ:—** ಅಥ=ಅನಂತರ, ಸರ್ವನಿಶಾಚರೇಶ್ವರಃ=ಸಮಸ್ತ ರಾಕ್ಷಸರಿಗೂ ರಾಜನಾದ ರಾವಣನು, ಹತಾವಸಿಷ್ಟೇನ=ಸಂಹೃತರಾಗಿ ಕಳೆದು ಉಳಿದಿರತಕ್ಕ, ಬಲೇನ=ರಾಕ್ಷಸ ಬಲದಿಂದ, ಸಂವೃತಃ=ಕೂಡಿದವನಾಗಿ, ಪುಷ್ಪಕಂ= ಪುಷ್ಪಕ ವಿಮಾನವೆಂದು ಹೆಸರುಳ್ಳ, ವಿಮಾನಂಚ=ವಿಮಾನವನ್ನೇ,

ಆರುಹ್ಯ=ಏರಿ, ಮಹಾಯುಧ=ಶ್ರೇಷ್ಟತರವಾದ ಆಯುಧಗಳಿಂದ, ಉದ್ಧತಃ ಸನ್ = ಉನ್ಮತ್ತನಾಗಿ, ಶರೀರನಾಶಾಯ = ತನ್ನ ದೇಹನಾಶಕ್ಕೋಸ್ಕರ, ತ್ವರ್=ಜಾಗ್ರತೆಯಾಗಿ ಯುದ್ಧಕ್ಕೆ ಬಂದನು.

**ತಾತ್ಪರ್ಯ:—**ಶ್ರೀರಾಮನು ಅಪರಿಮಿತವಾದ ರಾಕ್ಷಸ ಬಲವನ್ನು ಸಂಹಾರ ಮಾಡಿದ ನಂತರ ಕಳೆದು ಉಳಿದು ತಪ್ಪಿಸಿಕೊಂಡಿದ್ದ ಬಾಕಿ ಸೈನ್ಯದಿಂದ ಯುಕ್ತನಾಗಿ ಮಹಾ ಆಯುಧಗಳಿಂದ ಉನ್ಮತ್ತನಾದ ರಾವಣೇಶ್ವರನು ಪುಷ್ಪಕ ವಿಮಾನದಲ್ಲಿ ಕುಳಿತು ತನ್ನ ದೇಹನಾಶಕ್ಕಾಗಿ ಶ್ರೀರಾಮನ ಸಂಗಡ ಯುದ್ಧಕ್ಕೆ ಬಂದನು.

**ವಿಶೇಷಾಂಶ:—** ಇಲ್ಲಿ ಪುಷ್ಪಕ ವಿಮಾನದಲ್ಲಿ ಕುಳಿತು ಬಂದನೆಂದು ಹೇಳಿರುವದರಿಂದ ಆ ವಿಮಾನದ ವಿಚಾರವಾಗಿ ಒಂದು ಐತಿಹ್ಯವಿದೆ ಅದು ಏನೆಂದರೆ :—"ಶಶಾಪತಂ ವೈಶ್ರವಣೋ । ನತ್ವಾಮೇತದ್ವಹಿಷ್ಯತಿ ॥ ಯಸ್ತುತ್ವಾಂ ಸಮರೇಹಂತಾ । ತಮೈವೈತದ್ವಹಿಷ್ಯತಿ ॥ ಅವಮನ್ಯ ಗುರುಂ ಮಾಂಚ । ಕ್ಷಿಪ್ರಂತ್ವಂ ನಭವಿಷ್ಯಸಿ" ಎಂದು ವೈಶ್ರವಣರಿಂದ ಶಾಪ ಪ್ರಾಪ್ತವಾಗಿದ್ದರೂ ಅದು ಇವನಿಗೆ ತಿಳಿದಿದ್ದರೂ ಶ್ರೀ ಪರಮಾತ್ಮನ ಸಂಕಲ್ಪದಿಂದ ತನ್ನ ಮರಣಕ್ಕಾಗಿಯೇ ಈಗ ಅದನ್ನು ಏರಿ ಯುದ್ಧಕ್ಕೆ ಬಂದನು. ಮತ್ತು ಈ ಪುಷ್ಪಕ ವಿಮಾನವು "ಚಕ್ರಯಾನಂ" ಅಂದರೆ ವೈಭವದಿಂದ ಸಂಚಾರ ಮಾಡತಕ್ಕ ವಾಹನವೇ ಹೊರತು "ನಸಮರಾಯ" ಯುದ್ಧ ಮಾಡುವದಕ್ಕೆ ಅರ್ಹವಲ್ಲವೆಂದು ಉಕ್ತವಾಗಿದೆ. ("ಪುಷ್ಪಕಂ ಪುಷ್ಟಿವರ್ಧನಂ") ಎಂದು ಸಂಗ್ರಹದಲ್ಲಿ ಉಕ್ತವಾಗಿರೋಣದರಿಂದ ಪುಷ್ಟಿಯನ್ನು ಅಭಿವೃದ್ಧಿಮಾಡತಕ್ಕ ವಿಮಾನವೆಂದೇ ಅರ್ಥ. ಏತೇನ ಪುಷ್ಪಕ ವಿಮಾನವೆಂದರೆ ಪುಷ್ಟಿಯನ್ನು ಕೊಡತಕ್ಕ ರಥವೆಂತ ಹೆಸರಾಯಿತು.

**ಶ್ಲೋಕ॥ ವಿರೂಪನೇತ್ರೋ ಥಚಯೂಪನೇತ್ರ । ಸ್ತಥಾ ಮಹಾಪಾರ್ಶ್ವ ಮಹೋದರೌಚ ॥ ಯಯುಸ್ತಮಾವೃತ್ಯ ಸಹೈವಮಂತ್ರಿಣೊ । ಮೃತಿಂ ಪುರೋಧಾಯ ರಣಾಯಯಾಂತಂ ॥ ೧೮೩ ॥**

**ಅರ್ಥ:—**ಮೃತಿಂ=ಮೃತ್ಯುವನ್ನು, ಪುರೋಧಾಯ=ಮುಂದುಮಾಡಿಕೊಂಡು, ರಣಾಯ=ಯುದ್ಧಕ್ಕಾಗಿ, ಯಾಂತಂ=ಹೋಗುತ್ತಿರುವ, ತಂ=ಆ ರಾವಣನನ್ನು, ವಿರೂಪನೇತ್ರಃ = ವಿರೂಪನೇತ್ರನು, ಯೂಪನೇತ್ರಃ=

ಯೂಪನೇತ್ರನು, ತಥಾ=ಹಾಗೆಯೇ, ಮಹಾಪಾರ್ಶ್ವ = ಮಹಾಪಾರ್ಶ್ವನು ಮತ್ತು ಮಹೋದರೌ=ಮಹೋದರನು ಇವರೇ ಮೊದಲಾದ ಮಂತ್ರಿಗಳು, ಸಮಾವೃತ್ಯ=ಸುತ್ತಿಕೊಂಡು, ಸಹೈವ=ಅವನ ಸಂಗಡಲೇ, ಯಯೌ = ಹೊರಟರು.

**ತಾತ್ಪರ್ಯ.**—ವಿರೂಪನೇತ್ರ, ಯೂಪನೇತ್ರ, ಮಹಾಪಾರ್ಶ್ವ, ಮಹೋದರ ಎಂಬ ಮಂತ್ರಿಗಳು ಮೃತ್ಯುವನ್ನು ಮುಂದು ಮಾಡಿಕೊಂಡು ಯುದ್ಧಕ್ಕೆ ಹೋಗುತ್ತಿರುವ ರಾವಣನನ್ನು ಸುತ್ತಿಕೊಂಡು ಅವನ ಸಂಗಡಲೆ ಹೋದರು.

**ಶ್ಲೋಕ॥ ಅಥಾಸ್ಯ ಸೈನ್ಯಾನಿ ನಿಜಘ್ನುರೋಜಸಾ । ಸಮಂತತಃ ಶೈಲಶಿಲಾಭಿ ವೃಷ್ಟಿಭಿಃ ॥ ಪ್ಲವಂಗಮಾಸ್ತಾ ನಭಿವೀಕ್ಷ್ಯ ವೀರ್ಯವಾನ್ । ಸಸಾರವೇಗೇನ ಮಹೋದರೋರುಷಾ ॥೧೮೭॥**

**ಅರ್ಥ.**—ಅಥ=ಅನಂತರ, ಪ್ಲವಂಗಮಾಃ=ವಾನರರು, ಅಸ್ಯ=ರಾವಣನ, ಸೈನ್ಯಾನಿ=ಸೈನ್ಯವನ್ನು ಶೈಲ ಶಿಲಾಭಿವೃಷ್ಟಿಭಿಃ=ಪರ್ವತ ಶಿಲಾ ವೃಷ್ಟಿಯಿಂದ, ಓಜಸಾ=ಪರಾಕ್ರಮದಿಂದ, ಸಮಂತತಃ=ಸರ್ವತೋಮುಖವಾಗಿ, ನಿಜಘ್ನುಃ=ನಾಶಮಾಡಿದರು. ತಾನ್=ಆ ಕಪಿಗಳನ್ನು, ಅಭಿವೀಕ್ಷ್ಯ=ನೋಡಿ, ವೀರ್ಯವಾನ್ = ಪರಾಕ್ರಮಶಾಲಿಯಾದ, ಮಹೋದರಃ = ಮಹೋದರನು, ರುಷಾ=ಕೋಪದಿಂದ, ವೇಗೇನ=ವೇಗದಿಂದ, ಸಸಾರ= ಯುದ್ಧಕ್ಕೆ ಮುಂದುವರಿದನು.

**ತಾತ್ಪರ್ಯ.**—ರಾವಣನ ಸೈನ್ಯವನ್ನು ವಾನರರು ಪರ್ವತ, ಶಿಲಾ ವರ್ಷಗಳಿಂದ ಪರಾಕ್ರಮದಿಂದ ನಾಶಮಾಡುತ್ತಾ ಬಂದರು. ನಂತರ ಪರಾಕ್ರಮಿಯಾದ ಮಹೋದರ ನಾಮಕ ರಾಕ್ಷಸನು ತನ್ನ ಸೈನ್ಯವನ್ನು ನಾಶಮಾಡುತ್ತಿರುವ ಆ ಕಪಿಗಳನ್ನು ನೋಡಿ ಅತಿ ವೇಗದಿಂದ ತಾನು ಯುದ್ಧಕ್ಕಾಗಿ ಮುಂದುವರಿದು ಬಂದನು.

**ಶ್ಲೋಕ॥ ವೀಕ್ಷ್ಯಾತಿಕಾಯಂ ತಮಭಿದ್ರುವಂತಂ । ಸಕುಂಭಕರ್ಣೋಯ ಮಿತಿಬ್ರುವಂತಃ ॥ ಪ್ರದುದ್ರುವು ರ್ವಾನರವೀರಸಂಘಾ । ಸ್ತಮಾಸಸಾದಾಶು ಸುತೋಥವಾಲಿನಃ ॥ ೧೮೮ ॥**

**ಅರ್ಥ.**—ಅಭಿದ್ರುವಂತಂ=ಅಭಿಮುಖವಾಗಿ ಯುದ್ಧಕ್ಕೆ ಬರುತ್ತಿರುವ, ಅತಿಕಾಯಂ=ದೊಡ್ಡ ಶರೀರವುಳ್ಳ, ತಂ=ಆ ಮಹೋದರನನ್ನು,

ವೀಕ್ಷ್ಯ=ನೋಡಿ, ವಾನರವೀರ=ಕಪಿವೀರರ, ಸಂಘಾಃ = ಸಮೂಹಗಳು, ಅಯಂ=ಈ ಎದುರಿಗೆ ಬರುತ್ತಿರುವವನು, ಸಃ=ಹಿಂದೆ ರಣದಲ್ಲಿ ಸಂಹೃತನಾದ, ಕುಂಭಕರ್ಣಃ=ಕುಂಭಕರ್ಣನೇ, ಇತಿ=ಹೀಗೆಂದು, ಬ್ರುವಂತಃ ಸಂತಃ=ಒಬ್ಬರಿಗೊಬ್ಬರು ಹೇಳಿಕೊಂಡವರಾಗಿ. ಪ್ರದುದ್ರುವುಃ = ಭಯ ಓಂದ ಓಡಿದರು. ಅಥ=ಅನಂತರದಲ್ಲಿ, ವಾಲಿನಃ=ವಾಲಿಯ, ಸುತಃ=ಮಗನಾದ ಅಂಗದನು. ಆಶು = ಶೀಘ್ರವಾಗಿ, ತಂ=ಆ ಮಹೋದರನನ್ನು ಕುರಿತು, ಅಸಸಾದ=ಯುದ್ಧಕ್ಕೆ ಮುಂದುವರಿದನು.

**ತಾತ್ಪರ್ಯ.**–ಯುದ್ಧಕ್ಕಾಗಿ ಮುಂದುವರಿದು ಬರುತ್ತಿರುವ ಮಹೋದರನನ್ನು ಈ ಕಪಿವೀರರು ನೋಡಿ, ಎದುರಿಗೆ ಬರುತ್ತಿರುವವನು ಹಿಂದೆ ರಣದಲ್ಲಿ ಸಂಹೃತನಾದ ಕುಂಭಕರ್ಣನೇ, ಎಂದು ಪರಸ್ಪರ ಮಾತನಾಡುತ್ತ ಭಯದಿಂದ ಓಡಿಹೋದರು. ಅನಂತರ ವಾಲಿಯ ಸುತನಾದ ಅಂಗದನು ಓಡಿಹೋಗುತ್ತಿರುವ ಕಪಿವೀರರನ್ನು ಸಮುದಾಯಿಸಿ, ಆ ಮಹೋದರನೊಡನೆ ತಾನು ಯುದ್ಧಕ್ಕೆ ಮುಂದುವರಿದು ನಿಂತನು.

**ಶ್ಲೋಕ॥ ವದನ್ಸತಿಷ್ಟಧ್ವ ಮಿತಿಸ್ಮವೀರೋ । ಬಿಭೀಷಿಕಾಮಾತ್ರ ಮಿದಂನ ಯಾತ ॥ ಇತೀರಯನ್ನಗ್ರತಏವ ಪುಪ್ಲುವೇ । ಮಹೋದರಸ್ಯೇಂದ್ರ ಸುತಾತ್ಮಜೋಬಲೀ ॥೧೪೯॥**

**ಅರ್ಥ.**— ಬಲೀ=ಪರಾಕ್ರಮಿಯಾದ, ಇಂದ್ರಸುತಾತ್ಮಜಃ = ಅಂಗದನು, ತಾನ್=ಓಡಿಹೋಗುತ್ತಿರುವ ಕಪಿಗಳನ್ನು ಕುರಿತು, ತಿಷ್ಟಧ್ವಂ=ನಿಲ್ಲಿರಿಯೆಂದು, ವದನ್ಸನ್=ಹೇಳಿ, ಇದಂ=ಈ ಪುರೋವೃತ್ತಿಯಾದ ಶರೀರವು ಹೊಲಗಳಲ್ಲಿ ಪ್ರಾಣಿಗಳಿಗೆ ಭಯಪಡಿಸುವದಕ್ಕಾಗಿ ಹುಲ್ಲು ಮೊದಲಾದವುಗಳಿಂದ ಮಾಡಿಟ್ಟ ಮನುಷ್ಯಾಕಾರ, ಬಿಭೀಷಿಕಾಮಾತ್ರಂ=ಭಯವನ್ನು ಉಂಟುಮಾಡುವದಕ್ಕೋಸ್ಕರವೇ ಹೊರತು ಬಲಯುಕ್ತವಾದದ್ದಲ್ಲ, ನಯಾತ=ಹೆದರಿಕೊಂಡು ಓಡಿಹೋಗಬೇಡಿರಿ. ಇತಿ=ಹೀಗೆಂದು, ವೀರಃ = ಪರಾಕ್ರಮಿಯಾದ ಅಂಗದನು, ಈರಯನ್ಸನ್=ಹೇಳಿದವನಾಗಿ, ಮಹೋದರಸ್ಯ=ಮಹೋದರನ, ಅಗ್ರತಏವ=ಅಭಿಮುಖವಾಗಿ, ಪುಪ್ಲುವೇ=ಹಾರಿದನು.

**ತಾತ್ಪರ್ಯ.**–ಯುದ್ಧಕ್ಕಾಗಿ ಮುಂದುವರಿದು ಬರುತ್ತಿರುವ ಮಹೋದರನ ಆಕೃತಿಯನ್ನು ನೋಡಿ ಭಯಪಟ್ಟು ಓಡಿಹೋಗುತ್ತಿರುವ ಕಪಿಗ

ಳನ್ನು ಕುರಿತು ಮಹಾ ಪರಾಕ್ರಮಿಯಾದ ಅಂಗದನು ಸಿಲ್ಲಿರಿ ಭಯಪಡ ಬೇಡಿ, ಈ ಮಹೋದರನ ಶರೀರವು ಕೇವಲ ಭಯಪ್ರದವೇ ಹೊರತು ಬಲಯುಕ್ತವಾದದ್ದಲ್ಲ ಎಂದು ಹೇಳಿ ತಾನು ಯುದ್ಧಕ್ಕಾಗಿ ಮಹೋದರನ ಮುಂಭಾಗಕ್ಕೆ ಹಾರಿದನು.

**ಶ್ಲೋಕ॥ ಅಥೋಶರಾನಾಶು ವಿಮುಂಚಮಾನಂ । ಶಿರಃಪರಾಮೃಶ್ಯ ನಿಪಾತ್ಯ ಭೂತಲೇ ॥ ಮಮುರ್ದಪದ್ಭ್ಯಾಂ ಮಭವದ್ಗತಾಸು । ರ್ಮಹೋದರೋ ವಾಲಿಸುತೇನ ಚೂರ್ಣಿತಃ ॥೯೦॥**

**ಅರ್ಥ.**—ಸಃ=ಅಂಗದನು, ಶರಾನ್ = ಬಾಣಗಳನ್ನು, ವಿಮುಂಚಮಾನಂ=ಪ್ರಯೋಗ ಮಾಡುತ್ತಿರುವ ಮಹೋದರನ. ಶಿರಃ = ಶಿರಸ್ಸನ್ನು, ಪರಾಮೃಶ್ಯ=ಹಿಡಿದು, ಭೂತಲೇ=ನೆಲದಲ್ಲಿ, ನಿಪಾತ್ಯ=ಕೆಡಹಿ, ಪದ್ಭ್ಯಾಂ ಪಾದಗಳಿಂದ, ಮಮುರ್ದ=ತಿಕ್ಕಿದನು, ಅಥ=ಅನಂತರ, ಮಹೋದರಃ=ಮಹೋದರನು, ವಾಲಿಸುತೇನ=ಅಂಗದನಿಂದ, ಚೂರ್ಣಿತಃಸನ್ = ಪುಡಿ ಪುಡಿ ಮಾಡಲ್ಪಟ್ಟವನಾಗಿ, ಗತಾಸುಃ=ಹೋಗಲ್ಪಟ್ಟ ಪ್ರಾಣವುಳ್ಳವನು, ಅಭವತ್=ಆದನು.

**ತಾತ್ಪರ್ಯ.**—ಬಾಣಪ್ರಯೋಗ ಮಾಡುತ್ತಿರುವ ಮಹೋದರನನ್ನು ಅಂಗದನು ಜುಟ್ಟು ಹಿಡಿದು ನೆಲಕ್ಕೆ ಕೆಡವಿ ತನ್ನ ಪಾದಗಳಿಂದ ಉಜ್ಜಿದನು. ಮಹೋದರನು ಚೂರ್ಣಿತನಾಗಿ ಪ್ರಾಣವನ್ನು ಬಿಟ್ಟನು.

**ಶ್ಲೋಕ॥ ಅಥೋಮಹಾಪಾರ್ಶ್ವ ಉಪಾಜಗಾಮ । ಪ್ರವರ್ಷಮಾಣೋಸ್ಯ ಶರಾಂಬುಧಾರಾಃ ॥ ಪ್ರಸಹ್ಯಚಾಭ್ಭಿದ್ಯ ಧನುಃಕರಸ್ಥಂ । ಸಮಾದದೇಖಡ್ಗ ಮಮುಷ್ಯಸೋಂಗದಃ ॥೯೧॥**

**ಅರ್ಥ.**—ಅಥ=ಅನಂತರ, (ಮಹೋದರನ ಸಂಹಾರಾನಂತರ) ಮಹಾಪಾರ್ಶ್ವಃ=ಮಹಾಪಾರ್ಶ್ವನೆಂಬ ರಾವಣನ ಮಂತ್ರಿಯು, ಅಸ್ಯ=ಅಂಗದನಮೇಲೆ, ಪ್ರವರ್ಷಮಾಣಃಸನ್=ಬಾಣಗಳ ಮಳೆ ಸುರಿಸುತ್ತಾ, ಉಪಾಜಗಾಮ=ಅಂಗದನ ಸಮೀಪಕ್ಕೆ ಬಂದನು. ಸಃ-ಆ, ಅಂಗದಃ = ಅಂಗದನು, ಶರಾಂಬುಧಾರಾಃ-ಬಾಣದ ಮಳೆಯನ್ನು, ಪ್ರಗೃಹ್ಯ=ಸಹಿಸಿಕೊಂಡು, ಅಮುಷ್ಯ=ಈ ಮಹಾಪಾರ್ಶ್ವನ. ಕರಸ್ಥಂ = ಕೈಯಲ್ಲಿದ್ದ, ಧನುಃ-ಧನುಸ್ಸನ್ನು, ಅಭ್ಭಿದ್ಯ = ಛೇದನಮಾಡಿ, ಖಡ್ಗಂ=ಖಡ್ಗಾಯುಧದಿಂದ, ಸಮಾದದೇ=ಹೊಡೆದನು.

**ತಾತ್ಪರ್ಯ**—ಅಂಗದನಿಂದ ಮಹೋದರನು ಹತನಾದ ನಂತರ ರಾವಣನ ಮತ್ತೊಬ್ಬ ಮಂತ್ರಿಯಾದ ಮಹಾಪಾರ್ಶ್ವನೆಂಬ ರಾಕ್ಷಸನು ಅಂಗದನ ಮೇಲೆ ಬಾಣಗಳ ಮಳೆಗರೆಯುತ್ತಾ ಯುದ್ಧಕ್ಕೆ ಬಂದನು, ಅಂಗದನು ಅದನ್ನು ಸಹಿಸಿಕೊಂಡು ಅವನ ಕೈಯ್ಯಲ್ಲಿದ್ದ ಧನುಸ್ಸನ್ನು ಛೇದನ ಮಾಡಿ ಖಡ್ಗದಿಂದ ಪ್ರಹರಿಸಿದನು.

**ಶ್ಲೋಕ॥ ನಿಗೃಹ್ಯಕೇಶೇಷು ನಿಪಾತ್ಯಭೂತಲೇ । ಚಕರ್ತವಾಮಾಂಸತ ಔದರಂ ಪರಂ ॥ ಯಥೋಪವೀತಂ ಸತಥಾ ದ್ವಿಧಾಕೃತೋ । ಮಮಾರಮಂತ್ರೀರಜನೀ ಚರೇಶತುಃ ॥೧೯೨॥**

**ಅರ್ಥ.**—ಸಃ=ಅಂಗದನು. ತಂ=ಆ ಮಹಾಪಾರ್ಶ್ವನನ್ನು, ಕೇಶೇಷು=ಕೂದಲನ್ನು, ನಿಗೃಹ್ಯ=ಹಿಡಿದು. ಭೂತಲೇ-ಭೂಮಿಯಲ್ಲಿ. ನಿಪಾತ್ಯ= ಬೀಳಿಸಿ. ವಾಮಾಂಸತಃ-ಎಡ ಭುಜದಿಂದ. ಪರಂಔದರಂ = ಬಲದ ಹೊಟ್ಟೆ ಪರ್ಯಂತ, ಚಕರ್ತ = ಸೀಳಿದನು. ಸಃ = ಆ ಮಹಾಪಾರ್ಶ್ವನು, ಉಪವೀತಂಯಥಾಭವತಿತಥಾ=ಯಜ್ಞೋಪವೀತದ ಹಾಗೆ. ದ್ವಿಧಾಕೃತಃ= ಎರಡಾಗಿ ಮಾಡಲ್ಪಟ್ಟು, ಅಥ=ಅನಂತರ, ರಜನೀಚರೇಶತುಃ = ರಾಕ್ಷಸೇಶ್ವರನಾದ ರಾವಣನ, ಮಂತ್ರಿ=ಪ್ರಧಾನಿಯಾದ ಮಹಾಪಾರ್ಶ್ವನು, ಮಮಾರ=ಮೃತನಾದನು.

**ತಾತ್ಪರ್ಯ.**—ಅಂಗದನು ಬಾಣದ ಮಳೆಗರೆಯುತ್ತಿದ್ದ ಮಹಾಪಾರ್ಶ್ವನ ಕೂದಲು ಹಿಡಿದು ನೆಲಕ್ಕೆ ಕೆಡಹಿ ಎಡದ ಭುಜದಿಂದ ಬಲದ ಹೊಟ್ಟೆಯಮೂಲಕ ಓರೆಯಾಗಿ ಖಡ್ಗದಿಂದ ಸೀಳಿದನು, ಆ ರಾಕ್ಷಸನಾದರೋ ಯಜ್ಞೋಪವೀತವು ಯಾವ ರೀತಿಯಾಗಿರುತ್ತದೆಯೋ ಆರೀತಿ ಎಡ ಭುಜದಿಂದ ಬಲ ಹೊಟ್ಟೆಯ ವರೆಗೆ ಎರಡು ಭಾಗವಾಗಿ ಕತ್ತರಿಸಲ್ಪಟ್ಟು ಕೂಡಲೇ ಮೃತನಾದನು.

**ಶ್ಲೋಕ॥ ಅಥೈಸಮಾಜಗ್ಮತು ರುದ್ಯತಾಯುಧೌ । ವಿರೂಪನೇತ್ರೋ ಪ್ಯಥಯೂಪನೇತ್ರಃ ॥ ಯಥೈವಮೇಷೋ ದಿವಿತಿಗ್ಮರಶ್ಮಿಂ । ತಥಾ ಸಮಾಛ್ಛಾದಯತಾಂ ಶರೌಘೈಃ ॥೧೯೩॥**

**ಅರ್ಥ.**—ಅಥ=ಮಹಾಪಾರ್ಶ್ವನು ಮೃತನಾದ ನಂತರ, ಏನಂ ಪ್ರತಿ= ಈ ಅಂಗದನನ್ನು ಕುರಿತು, ಉದ್ಯತಾ=ಎತ್ತಲ್ಪಟ್ಟ. ಆಯುಧೌ =

ಆಯುಧಗಳುಳ್ಳ, ವಿರೂಪನೇತ್ರಃ - ವಿರೂಪನೇತ್ರನೆಂಬ ರಾಕ್ಷಸನೂ ತಥಾ=ಮತ್ತು, ಯೂಪನೇತ್ರೋಽಪಿ=ಯೂಪನೇತ್ರನೆಂಬ ರಾಕ್ಷಸನೂ ಸಹ, ಅಜಗ್ಮತುಃ=ಯುದ್ಧಕ್ಕಾಗಿ ಬಂದರು, ತೌ=ಇವರಿಬ್ಬರೂ, ಅಥ = ಅನಂತರ, ಮೇಘಃ=ಮೇಘಗಳು, ದಿವಿ=ಹಗಲಿನಲ್ಲಿ. ತಿಗ್ಮರಶ್ಮಿಂ-ಕ್ರೂರವಾದ ರಶ್ಮಿಗಳುಳ್ಳ ಸೂರ್ಯನನ್ನು. ಯಥಾ = ಹೇಗೆ ಮರೆಮಾಡುವವೋ ಹಾಗೆ, ಏನಂ=ಈ ಅಂಗದನನ್ನು, ಶರೋಘೈಃ = ಬಾಣಗಳಿಂದ, ಸಮಾಚ್ಛಾದಯತಾಂ=ಮುಚ್ಚಿ ಬಿಟ್ಟರು.

**ತಾತ್ಪರ್ಯ.**—ಅಂಗದನಿಂದ ಮಹಾಪಾರ್ಶ್ವನು ಹತನಾದ ನಂತರ ರಾವಣನ ಮಂತ್ರಿ ಶ್ರೇಷ್ಠರಾದ ವಿರೂಪನೇತ್ರ ಯೂಪನೇತ್ರರಿಬ್ಬರೂ ಆಯುಧಗಳನ್ನು ಎತ್ತಿಕೊಂಡು ಯುದ್ಧಕ್ಕಾಗಿ ಬಂದರು. ಮತ್ತು ಅಂಗದನನ್ನು ಬಾಣ ಸಮೂಹಗಳಿಂದ ಸೂರ್ಯನನ್ನು ಮೇಘಗಳು ಹೇಗೆ ಮರೆ ಮಾಡುತ್ತವೆಯೋ ಹಾಗೆ ಮುಚ್ಚಿ ಬಿಟ್ಟರು.

**ಶ್ಲೋ॥ ತಾಭ್ಯಾಂಸಬದ್ಧಃ ಶರಪಂಜರೇಣ । ವಿಚೇಷ್ಟಿತುಂ ನಾಶಕದತ್ರವೀರಃ ॥ ಹರೀಶ್ವರಃಶೈಲ ಮತಿಪ್ರಮಾಣ । ಮುತ್ಪಾಟ್ಯಚಿಕ್ಷೇಪ ತಯೋಃ ಶರೀರೇ ॥ ೧೯ ॥**

**ಅರ್ಥ.**—ತಾಭ್ಯಾಂ=ಆ ವಿರೂಪನೇತ್ರ ಮತ್ತು ಯೂಪನೇತ್ರರುಗಳಿಂದ, ಶರಪಂಜರೇಣ=ಬಾಣಗಳ ಪಂಜರದಿಂದ, ಬದ್ಧಃ-ಕಟ್ಟಲ್ಪಟ್ಟ, ವೀರಃ-ಪರಾಕ್ರಮಶಾಲಿಯಾದ, ಸಃ=ಆ ಅಂಗದನು, ಅತ್ರ-ಯುದ್ಧದಲ್ಲಿ, ವಿಚೇಷ್ಟಿತುಂ-ಕೈಕಾಲುಗಳು ಅಲ್ಲಾಡಿಸುವದಕ್ಕು ಸಹ, ನಾಶಕತ್=ಶಕ್ತನಾಗಲಿಲ್ಲ, ಅಥ=ಅನಂತರ, ಹರೀಶ್ವರಃ = ಕಪಿರಾಜನಾದ ಸುಗ್ರೀವನು, ಅತಿಪ್ರಮಾಣಂ=ಬಹು ಬಲವಾದ, ಶೈಲಂ - ಬೆಟ್ಟವನ್ನು, ಉತ್ಪಾಟ್ಯ = ಕಿತ್ತು, ತಯೋಃ ಶರೀರೇ=ಅವರ ಮೇಲೆ, ಚಿಕ್ಷೇಪ-ಪ್ರಯೋಗಿಸಿದನು.

**ತಾತ್ಪರ್ಯ.**—ವಿರೂಪನೇತ್ರ, ಯೂಪನೇತ್ರರು ಪ್ರಯೋಗಿಸಿದ ಶರ ಪಂಜರದಲ್ಲಿ ಅಂಗದನು ಬದ್ಧನಾಗಿ ಅಲ್ಲಾಡುವುದಕ್ಕು ಸಹ ಶಕ್ತನಾಗದೆ ಹೋದನು. ಇದನ್ನು ನೋಡಿ ಸುಗ್ರೀವನು ದೊಡ್ಡ ಬೆಟ್ಟವನ್ನು ಕಿತ್ತು ಈ ರಾಕ್ಷಸರ ಮೇಲೆ ಪ್ರಯೋಗಿಸಿದನು.

**ಶ್ಲೋಕ || ಉಭೌಚತೌತೇನವಿಚೂರ್ಣಿತೌರಣೇ | ರವೇಃಸುತಸ್ಯೋರು ಬಲೇರಿತೇನ || ನಿಶಾಚರೇಶೋಥಸ ಶರೇಣಸೂರ್ಯಜಂ | ಬಿಭೇದ ವಕ್ಷಸ್ಯಪಿಸೋಪತದ್ಭುವಿ || ೧೯೫ ||**

**ಅರ್ಥ.**—ರವೇಃಸುತಸ್ಯ=ಸುಗ್ರೀವನ, ಉರುಬಲೇನ= ಹೆಚ್ಚಾದ ಬಲದಿಂದ, ಈರಿತೇನ=ಬಿಡಲ್ಪಟ್ಟ, ತೇನ=ಆ ಪರ್ವತದಿಂದ, ತೌ=ಆ ವಿರೂಪನೇತ್ರ, ಯೂಪನೇತ್ರರು, ಉಭೌ = ಇಬ್ಬರೂ, ರಣೇ = ಯುದ್ಧದಲ್ಲಿ, ವಿಚೂರ್ಣಿತೇ=ಪುಡಿಪುಡಿಯಾದರು. ಅಥ=ಅನಂತರ, ನಿಶಾಚರಃ=ರಾಕ್ಷಸನಾದ ರಾವಣನು, ಸೂರ್ಯಜಂ=ಸುಗ್ರೀವನನ್ನು, ಶರೇಣ=ಬಾಣದಿಂದ, ವಕ್ಷಸ್ಯ=ಎದೆಯಲ್ಲಿ, ಬಿಭೇದ=ಭೇದನ ಮಾಡಿದನು. ಸೋಪಿ=ಸುಗ್ರೀವನೂ ಸಹ, ಭುವಿ=ಭೂಮಿಯಲ್ಲಿ, ಪತತ್=ಕೆಳಗೆ ಬಿದ್ದನು.

**ತಾತ್ಪರ್ಯ.**—ಸುಗ್ರೀವನು ಹೊಡೆದ ಬೆಟ್ಟದ ಪೆಟ್ಟಿನಿಂದ ವಿರೂಪನೇತ್ರ, ಯೂಪನೇತ್ರರು ಇಬ್ಬರೂ ಪುಡಿಪುಡಿಯಾದರು. ನಂತರ ರಾವಣನು ಬಾಣದಿಂದ ಸುಗ್ರೀವನ ಎದೆಯನ್ನು ಭೇದಿಸಿದನು. ಆ ಪೆಟ್ಟಿನಿಂದ ಸುಗ್ರೀವನು ಮೂರ್ಛಿತನಾಗಿ ನೆಲಕ್ಕೆ ಬಿದ್ದನು.

**ಶ್ಲೋಕ || ತತಶ್ಚ ಸರ್ವಾಂಶ್ಚ ಕಪಿಪ್ರವೀರಾನ್ | ವಿಧೂಯಬಾಣೈ ರ್ಬಲವಾನ್ ದಶಾನನಃ || ಜಗಾಮರಾಮಾಭಿಮುಖಸ್ತ್ವದೈನಂ | ರುರೋಧ ರಾಮಾ ವರಜಃಶರೋಘೈಃ || ೧೯೬ ||**

**ಅರ್ಥ.**—ತತಶ್ಚ=ಅನಂತರ, ಬಲವಾನ್=ಬಲಶಾಲಿಯಾದ, ದಶಾನನಃ=ದಶಕಂಠನು, ಸರ್ವಾನ್=ಸಮಸ್ತರಾದ, ಕಪಿವೀರಾನ್ಶ್ಚ=ಕಪಿವೀರರನ್ನು ಬಾಣೈಃ=ಬಾಣಪ್ರಯೋಗಗಳಿಂದ, ವಿಧೂಯ=ಓಡಿಸಿ, ರಾಮಾಭಿಮುಖಃ ಸನ್=ರಾಮರ ಅಭಿಮುಖವಾಗಿ, ಜಗಾಮ=ಹೋದನು. ತದಾ = ಆಗ ಏನಂ=ಇವನನ್ನು, ರಾಮಾವರಜಃ=ರಾಮರ ಸಹೋದರನಾದ ಲಕ್ಷ್ಮಣನು, ಶರೋಘೈಃ=ಬಾಣ ಸಮೂಹದಿಂದ, ರುರೋಧ=ತಡೆದನು.

**ತಾತ್ಪರ್ಯ.**—ಅನಂತರ ರಾವಣನು ಸಮಸ್ತ ಕಪಿವೀರರನ್ನೂ ಬಾಣಗಳಿಂದ ಓಡಿಸಿ ಶ್ರೀರಾಮರಿಗೆ ಅಭಿಮುಖವಾಗಿ ಹೊರಟನು. ಆಗ ಅವನನ್ನು ಲಕ್ಷ್ಮಣನು ಬಾಣ ಸಮೂಹದಿಂದ ತಡೆದನು.

**ಶ್ಲೋಕ || ತದಾದಶಾಸ್ಯೋ ತಕದಂಡಕಲ್ಪಾಂ | ಮಯಾಯುದತ್ತಾಂ ಕಮ ಲೋದ್ಭವೇನ || ಮಯಾದ್ಗೃಹೀತಾಂಚ ವಿವಾಹಕಾಲೇ | ಪ್ರಗೃಹ್ಯಶಕ್ತಿಂ ವಿಸಸರ್ಜಲಕ್ಷ್ಮಣೇ || ೧೯೭ ||**

**ಶ್ಲೋಕ || ತದಾಸವೀರಃ ಸುವಿದಾರಿತೋರಃ | ಪಪಾತಭೂವೌ ಸುಭೃಶಂವಿ ಮೂರ್ಛಿತಃ || ಮರುತ್ಸುತಃಶೈಲಮತಿಪ್ರಮಾಣಂ | ಚಿಕ್ಷೇಪ ರಕ್ಷಃಪ್ರತಿ ವಕ್ಷಸಿದ್ರುತಂ || ೧೯೮ ||**

**ಅರ್ಥ.**—ತದಾ=ಆಗ, ದಶಾಸ್ಯಃ=ರಾವಣನು, ಕಮಲೋದ್ಭವೇನ= ಬ್ರಹ್ಮದೇವರಿಂದ, ಮಯಾಯ=ಮಯಾಸುರನಿಗೆ, ದತ್ತಾಂ = ಕೊಡಲ್ಪಟ್ಟಿದ್ದ, ವಿವಾಹಕಾಲೇ=ಮಯನ ಮಗಳಾದ ಮಂಡೋದರಿಯ ವಿವಾಹ ಸಮಯದಲ್ಲಿ, ಮಯಾತ್=ಮಯಾಸುರನಿಂದ, ಗೃಹೀತಾಂಚ = ತಾನು ತಂದಿದ್ದ, ಅಂತಕದಂಡ=ಯಮದಂಡಕ್ಕೆ ಕಲ್ಪಾಂ = ಸಮಾನವಾದ, ಶಕ್ತಿಂ=ಶಕ್ತ್ಯಾಯುಧವನ್ನು, ಪ್ರಗೃಹ್ಯ = ತೆಗೆದುಕೊಂಡು. ಲಕ್ಷ್ಮಣೇ = ಲಕ್ಷ್ಮಣನ ಮೇಲೆ, ವಿಸಸರ್ಜ=ಪ್ರಯೋಗಿಸಿದನು.

**ಅರ್ಥ.**—ತದಾ=ಆಗ, ಸುವಿದಾರಿತ=ಅತ್ಯಂತವಾಗಿ ಘಾಯಪಟ್ಟ, ಉರಃ=ವಕ್ಷಸ್ಥಳವುಳ್ಳ, ಸವೀರಃ=ಪರಾಕ್ರಮಿಯಾದ ಲಕ್ಷ್ಮಣನು, ಸುಭೃಶಂ=ಹೆಚ್ಚಾಗಿ, ವಿಮೂರ್ಛಿತಃಸನ್=ಮೂರ್ಛಾಗತನಾಗಿ, ಭೂಮೌ=ಭೂಮಿಯಲ್ಲಿ, ಪಪಾತ=ಬಿದ್ದನು, ತದಾ=ಆ ಕಾಲದಲ್ಲಿ, ಮರುತ್ಸುತಃ=ಹನುಮಂತದೇವರು, ಅತಿಪ್ರಮಾಣಂ=ಅತ್ಯಂತ ದೊಡ್ಡದಾದ, ಶೈಲಂ=ಪರ್ವತದಿಂದ, ದ್ರುತಂ=ಶೀಘ್ರದಲ್ಲಿಯೇ, ರಕ್ಷಃಪ್ರತಿ=ರಾಕ್ಷಸನ ವಕ್ಷಸಿ = ವಕ್ಷಸ್ಥಳದಲ್ಲಿ ಚಿಕ್ಷೇಪ = ಹೊಡೆದನು.

**ತಾತ್ಪರ್ಯ.**—ಬ್ರಹ್ಮದೇವರು ದೈತ್ಯ ಶಿಲ್ಪಿಯಾದ ಮಯಾಸುರನಿಗೆ ಅವನ ತಪಸ್ಸಿಗೆ ಮೆಚ್ಚಿ ಕೊಟ್ಟಿದ್ದ, ನಂತರ ಆ ಮಯಾಸುರನಿಂದ ಮಂಡೋದರಿಯ ವಿವಾಹಕಾಲದಲ್ಲಿ ರಾವಣನು ಪಡೆದಿದ್ದ ಯಮದೇವರ ದಂಡಾಯುಧಕ್ಕೆ ಸಮಾನವಾಗಿಯೂ ಇರುವ ಶಕ್ತ್ಯಾಯುಧವನ್ನು ಲಕ್ಷ್ಮಣನ ಮೇಲೆ ಪ್ರಯೋಗಿಸಿದನು. ಅದರಿಂದ ಭೇದಿಸಲ್ಪಟ್ಟ ವಕ್ಷಸುಳ್ಳವನಾದ ಲಕ್ಷ್ಮಣನು ಚೆನ್ನಾಗಿ ಮೂರ್ಛೆಯನ್ನು ಹೊಂದಿ ನೆಲಕ್ಕೆ ಬಿದ್ದನು. ಆ ತಕ್ಷಣವೇ ಹನುಮಂತನು ಮಹೋನ್ನತವಾದ ಪರ್ವತವನ್ನೇ ತೆಗೆದು ಕೊಂಡು ರಾವಣನ ವಕ್ಷಸ್ಥಳದಲ್ಲಿ ಹೊಡೆದನು.

**ಶ್ಲೋಕ || ತೇನಾತಿಗಾಢಂ ವ್ಯಥಿತೋದಶಾನನೋ । ಮುಖೈರ್ವಮಂ ಶೋಣಿತ ಪೂರಮಾಶು । ತದಂತರೇಚ ಪ್ರತಿಗೃಹ್ಯಲಕ್ಷ್ಮಣಂ । ಜಗಾಮಶಕ್ತ್ಯಾ ಸಹರಾಮಸನ್ನಿಧಿಂ || ೧೯೯ ||**

**ಅರ್ಥ.**—ತೇನ-ಹನುಮಂತನಿಂದ ಪ್ರಯೋಗಿಸಲ್ಪಟ್ಟ ಪರ್ವತದಿಂದ ಅತಿಗಾಢಂ=ಬಹುಬಲವಾಗಿ, ವ್ಯಥಿತಃ=ಪೀಡಿತನಾದ, ದಶಾನನಃ=ರಾವಣನು, ಆಶು=ತಕ್ಷಣವೇ, ಮುಖೈಃ=ದಶ ಮುಖಗಳಿಂದಲೂ, ಶೋಣಿತ ಪೂರಂ=ರಕ್ತ ಪ್ರವಾಹವನ್ನೇ, ವಮ (ಅಭೂತ್) ವಮನ ಮಾಡಿದನು. ತದಂತರೇ=ಅಷ್ಟರಲ್ಲಿಯೇ, ಹನೂಮಾನ್= ಹನುಮಂತನು, ಲಕ್ಷ್ಮಣಂ= ಲಕ್ಷ್ಮಣನನ್ನು, ಶಕ್ತ್ಯಾ ಸಹ=ಚುಚ್ಚಿಕೊಂಡಿರುವ ಶಕ್ತ್ಯಾಯುಧ ಸಹಿತನಾಗಿ ಪ್ರತಿಗೃಹ್ಯ ಎತ್ತಿಕೊಂಡು, ರಾಮಸನ್ನಿಧಿಂಪ್ರತಿ=ಶ್ರೀರಾಮರ ಸನ್ನಿಧಾನಕ್ಕೆ ಜಗಾಮ= ಹೋದನು.

**ತಾತ್ಪರ್ಯ.**—ಹನುಮಂತನು ಪರ್ವತದಿಂದ ಹೊಡೆದ ಪೆಟ್ಟಿನಿಂದ ಅತ್ಯಂತ ದುಃಖಿತನಾಗಿ ರಾವಣನು ತನ್ನ ದಶಮುಖದಿಂದಲೂ ರಕ್ತ ಪ್ರವಾಹಗಳನ್ನೇ ವಮನ ಮಾಡುತಿದ್ದನು. ಅಷ್ಟರಲ್ಲಿಯೇ ಹನುಮಂತನು ಶಕ್ತಿಯಿಂದ ಬಲವಾದ ಘಾತವಾಗಿ ಮೂರ್ಛಿತನಾಗಿ ಬಿದ್ದಿದ್ದ ಲಕ್ಷ್ಮಣನನ್ನು ಶಕ್ತಿಯಿಂದ ಸಹಿತನನ್ನಾಗಿಯೇ ಶ್ರೀರಾಮರ ಸನ್ನಿಧಾನಕ್ಕೆ ಎತ್ತಿಕೊಂಡು ಹೋದನು.

**ಶ್ಲೋಕ || ಸಮುದ್ಬಬರ್ಹಾಥಚತಾಂಸರಾಘವೋ । ದಿದೇಶಚಪ್ರಾಣವರಾತ್ಮಜಂ ಪುನಃ || ಪ್ರಭುಃಸಮಾನೇತು ಮಥೋವರೌಷಧೀಃ । ಸಚಾನಿನಾಯಾಶು ಗಿರಿಂಪುನಸ್ತಂ || ೨೦೦ ||**

**ಅರ್ಥ.**—ಅಥ=ಅನಂತರ, ಸರಾಘವಃ= ಶ್ರೀರಾಮನು· ತಾಂ= ಶಕ್ತ್ಯಾಯುಧವನ್ನು, ಸಮುದ್ಬಬರ್ಹ=ಕಿತ್ತು ಹಾಕಿದನು, ಅಥ-ಅನಂತರ ಪ್ರಭುಃ-ಸ್ವಾಮಿಯಾದ ಶ್ರೀರಾಮಚಂದ್ರನು, ವರೌಷಧೀಃ-ಸಂಜೀವಿನಿ ಮೊದಲಾದ ಔಷಧಿ ಶ್ರೇಷ್ಟಗಳನ್ನು. ಸಮಾನೇತುಂ- ತರುವದಕ್ಕಾಗಿ. ಪುನಃ-ತಿರಿಗಿ, ಪ್ರಾಣವರಾತ್ಮಜಂಪ್ರತಿ-ವಾಯು ಪುತ್ರನಾದ ಹನುಮಂತನಿಗೆ, ದಿದೇಶಚ-ಆಜ್ಞೆ ಮಾಡಿದನು, ಸಚ- ಆ ಹನುಮಂತನೂ, ಪುನಃ- ತಿರಿಗೇ. ತಂಗಿರಿಂ- ಆ ಗಂಧಮಾದನ ಪರ್ವತವನ್ನು, ಆಶು- ಜಾಗ್ರತೆ

**ತಾತ್ಪರ್ಯ.**—ಶ್ರೀರಾಮನು ಲಕ್ಷ್ಮಣನ ಶರೀರದಲ್ಲಿ ನೆಟ್ಟಿದ್ದ ಶಕ್ತಿಯನ್ನು ಕಿತ್ತುಹಾಕಿ ಸಂಜೀವಿನೀ ಮೊದಲಾದ ಔಷಧಿಗಳನ್ನು ಪುನಃ ತರುವಂತೆ ಹನುಮಂತನಿಗೆ ಆಜ್ಞೆ ಮಾಡಿದನು. ಆ ಹನುಮಂತನು ತಿರಿಗೀ ಗಂಧಮಾದನ ಪರ್ವತವನ್ನು ತೆಗೆದುಕೊಂಡು ಬಂದನು.

**ಶ್ಲೋಕ॥ ತದ್ಗಂಧಮಾತ್ರೇಣ ಸಮುತ್ಥಿತೋಽಸೌ । ಸೌಮಿತ್ರಿರಾತ್ತೋರುಬಲಶ್ಚ ಪೂರ್ವವತ್ ॥ ಶಶಂಸಚಾಶ್ಲಿಷ್ಯ ಮರುತ್ಸುತಂಪ್ರಭುಃ । ಸರಾಘವೋಽಗಣ್ಯ ಗುಣಾರ್ಣವಃ ಸ್ಮಯನ್ ॥ ೨೦೧ ॥**

**ಅರ್ಥ.**—ತತ್=ಆ ಪರ್ವತ ಸ್ಥಿತವಾದ ಔಷಧಿಗಳ, ಗಂಧಮಾತ್ರೇಣ=ವಾಸನೆ ಮಾತ್ರದಿಂದಲೇ, ಅಸೌ=ಮೂರ್ಛಿತನಾಗಿದ್ದ, ಸೌಮಿತ್ರಿಃ=ಲಕ್ಷ್ಮಣನು, ಪೂರ್ವವತ್=ಪೂರ್ವದಂತೆ, ಸಮುತ್ಥಿತಃಸನ್ - ಮೂರ್ಛೆಯಿಂದ ಎಚ್ಚತ್ತು, ಆತ್ತ-ಹೊಂದಲ್ಪಟ್ಟ, ಉರು = ಉತ್ಕೃಷ್ಟವಾದ, (ಹೆಚ್ಚಾದ) ಬಲಶ್ಚ=ಬಲಪರಾಕ್ರಮವುಳ್ಳವನಾಗಿ, ಅಭೂತ್=ಆದನು.

**ತಾತ್ಪರ್ಯ.**—ಗಂಧಮಾದನ ಪರ್ವತವನ್ನು ತಂದ ಒಡನೆಯೇ ಅದರಲ್ಲಿದ್ದ ಔಷಧಿಗಳ ವಾಸನೆ ತಗಲಿದ ಮಾತ್ರದಿಂದಲೇನೆ ಲಕ್ಷ್ಮಣನು ಮೂರ್ಛೆಯಿಂದ ಎಚ್ಚರವಾಗಿ ಮೇಲಕ್ಕೆ ಎದ್ದನು ಮತ್ತು ಪೂರ್ವದಂತೆ ಅತ್ಯಂತ ಬಲ ಪರಾಕ್ರಮವುಳ್ಳವನಾದನು.

**ಉತ್ತರಾರ್ಧದ ಅರ್ಥ.**—ಅಗಣ್ಯ = ಎಣಿಸಲಶಕ್ಯವಾದ, ಗುಣ = ಸದ್ಗುಣಗಳಿಗೆ, ಅರ್ಣವಃ=ಸಮುದ್ರ ಸ್ಥಾನೀಯನಾದ, ಪ್ರಭುಃ=ಸರ್ವಸ್ವಾಮಿಯಾದ, ಸರಾಘವಃ=ಶ್ರೀರಾಮಚಂದ್ರದೇವರು, ಸ್ಮಯನ್‌ಸನ್ = ಮಂದಹಾಸಯುಕ್ತನಾಗಿ, ಮರುತ್ಸುತಂ=ಹನುಮಂತನನ್ನು, ಆಶ್ಲಿಷ್ಯ=ಆಲಿಂಗನ ಮಾಡಿ, ಶಶಂಸಚ=ಪ್ರಶಂಸೆ ಮಾಡಿದನು.

**ಅಭಿಪ್ರಾಯವು.**—ಲಕ್ಷ್ಮಣನು ಮೂರ್ಛೆಯಿಂದ ಎಚ್ಚತ್ತು ಯಥಾಪ್ರಕಾರ ಅತ್ಯಂತ ಬಲಪರಾಕ್ರಮವುಳ್ಳವನಾದದ್ದನ್ನು ನೋಡಿ ಮಂದಹಾಸದಿಂದ ಯುಕ್ತನಾಗಿ ಸಮಸ್ತ ಸದ್ಗುಣಗಳಿಗೆ ಸಮುದ್ರಪ್ರಾಯನೂ ಮಹಾ ಸಮರ್ಥನೂ ಆದ ಶ್ರೀರಾಮಚಂದ್ರನು ಹನುಮಂತನಿಗೆ ಆಲಿಂಗನ ಕೊಟ್ಟು ಅವನನ್ನು ಪ್ರಶಂಸೆ ಮಾಡಿದನು.

**ಶ್ಲೋಕ ॥ ಪ್ರಾಕ್ಷಿಪತ್ತಂಗಿರಿವರಂ । ಲಂಕಾಸ್ಥಃಸನ್ ಸಮಾರುತಿಃ ॥ ಅರ್ಧಲಕ್ಷೇ ಯೋಜನಾನಾಂ । ಯತ್ರಾಸೌಪೂರ್ವಸಂಸ್ಥಿತಃ ॥ ೨೦೨ ॥**

**ಅರ್ಥ.**—ಸಃಮಾರುತಿಃ=ಆ ಹನುಮಂತನು, ತಂಗಿರಿವರಂ = ತಾನು ತಂದಿದ್ದ ಪರ್ವತಶ್ರೇಷ್ಟವನ್ನು, ಲಂಕಾಸ್ಥಃ ಸನ್ನೇವ=ತಾವು ಲಂಕೆಯಲ್ಲಿದ್ದು ಕೊಂಡೇನೇ, ಯೋಜನಾನಾಂ=ಯೋಜನಗಳ, ಅರ್ಧಲಕ್ಷೇ=ಅರ್ಧ ಲಕ್ಷ ದೂರದಲ್ಲಿ, ಅಸೌ=ಈ ಪರ್ವತವು, ಯತ್ರ=ಪೂರ್ವದಲ್ಲಿ ಯಾವ ಸ್ಥಳದಲ್ಲಿತ್ತೋ, ತತ್ರೈವ=ಆ ಸ್ಥಳದಲ್ಲಿಯೇ ಬೀಳುವಹಾಗೆ, ಪ್ರಾಕ್ಷಿಪತ್ = ಬಿಸಾಟರು.

**ತಾತ್ಪರ್ಯ.**—ಅನಂತರ ಆ ಹನುಮಂತನು ತಾನು ಲಂಕಾ ಪಟ್ಟಣ ದಲ್ಲಿದ್ದುಕೊಂಡೇ ಗಂಧಮಾದನ ಪರ್ವತವನ್ನು (ಅರ್ಧಲಕ್ಷ) ಐವತ್ತು ಸಹ ಸ್ರಯೋಜನ ದೂರದಲ್ಲಿ ಪೂರ್ವದಲ್ಲಿ ಯಾವ ಭಾಗವಲ್ಲಿತ್ತೋ ಅದೇ ಸ್ಥಳ ದಲ್ಲಿಯೇ ಬೀಳುವಹಾಗೆ ಬಿಸಾಟನು.

ವಿಶೇಷ ವಿಷಯ.—ಗಂಧಮಾದನ ಪರ್ವತವು ಎರಡು ಸಾವಿರ ಯೋಜನ ವಿಸ್ತೀರ್ಣವುಳ್ಳದ್ದು. ಅದರ ಪೈಕಿ ಈ ಔಷಧಿಗಳಿದ್ದ ಸ್ಥಳವು ಒಂದು ನೂರು ಯೋಜನ ವಿಸ್ತೀರ್ಣವುಳ್ಳದ್ದು. ಈ ಭಾಗವನ್ನು ಮಾತ್ರ ಆ ಪರ್ವತದಲ್ಲಿಂದ ಪೆಕ್ಕಳಿಸಿ ತಂದಿದ್ದನು. ಈಗ ಆ ಭಾಗವನ್ನು ತಾನು ಲಂಕೆಯಲ್ಲಿದ್ದುಕೊಂಡೇ ಯಾವ ಭಾಗದಲ್ಲಿಂದ ಕಿತ್ತುಕೊಂಡು ಬಂದಿದ್ದನೋ ಆ ಸ್ಥಳವಲ್ಲಿಯೇ ಬೀಳುವಂತೆ ಬಿಸಾಟನು.

**ಶ್ಲೋಕ ॥ ತದ್ಬಾಹುವೇಗಾತ್ಸಂಶ್ಲೇಷಂ । ಪ್ರಾಪ ಪೂರ್ವವದೇವಸಃ ॥ ಮೃತಾಶ್ಚಯೇ ಪ್ಲವಂಗಾಸ್ತು । ತದ್ಗಂಧಾತ್ತೇಪಿಜೀವಿತಾಃ ॥ ೨೦೩ ॥**

**ಅರ್ಥ.**—ಸಃ–ಆ ಗಂಧಮಾದನ ಪರ್ವತವು, ಪೂರ್ವವತ್=ಮೊದಲಿನ ಹಾಗೆಯೇ, ತತ್–ಆ ಹನುಮಂತನ, ಬಾಹುವೇಗಾತ್ – ಭುಜಬಲ ದಿಂದ, ಸಂಶ್ಲೇಷಂ–ಯಾವ ಸ್ಥಳದಿಂದ ಕಿತ್ತಿದ್ದನೋ ಆ ಸ್ಥಳಕ್ಕೆ ಸರಿ ಯಾಗಿ, ಪ್ರಾಪ–ಹೊಂದಿತು, ತದ್ಗಂಧಾತ್ = ಆ ತಿಕ್ಕಾಟದಿಂದ, ಉತ್ಪನ್ನವಾದ ಔಷಧಿಗಳ ವಾಸನೆಯಿಂದ, ಯೇಪ್ಲವಂಗಾಸ್ತು – ಯಾವ ಕಪಿ ಗಳು, ಮೃತಾಶ್ಚ – ಮೃತರಾಗಿದ್ದರೋ, ತೇಪಿ = ಅವರೂಕೂಡ, ಜೀವಿತಾಃ=ಬದುಕಿದರು.

**ತಾತ್ಪರ್ಯ.**—ಹನುಮಂತನು ಪರ್ವತವನ್ನು ತರುವಾಗ ಅದು ತನ್ನ ಬಾಹುಗಳಿಂದ ತಿಕ್ಕಲ್ಪಟ್ಟು ವಾಸನೆಯು ಹೊರಟಿತು. ಆ ವಾಸನೆಯ ಸಂಸರ್ಗದಿಂದಲೇ ರಣದಲ್ಲಿ ಮಡಿದು ಬಿದ್ದಿದ್ದ ಸಮಸ್ತ ಕಪಿಗಳೂ ಬದುಕಿದರು. ಛಿನ್ನಭಿನ್ನವಾಗಿದ್ದ ಅವರ ಅವಯವಗಳೆಲ್ಲವೂ ಕೂಡಿಕೊಂಡವು ಮತ್ತು ಬಾಣದ ಪೆಟ್ಟಿನಿಂದ ಕೆಟ್ಟು ಹೋಗಿದ್ದ ಶರೀರ ವರ್ಣವು ಸರಿಯಾದ ವರ್ಣವಾಯಿತು.

ಮೃತರಾಗಿದ್ದ ಕಪಿಗಳೆಲ್ಲರೂ ಬದುಕಿ ಸತೇಜಸ್ಕರಾದರೆಂದು ಹೇಳಲ್ಪಟ್ಟಿತು. ಹಾಗೆಯೇ ರಣದಲ್ಲಿ ಮೃತರಾಗಿದ್ದ ರಾಕ್ಷಸರು ಏತಕ್ಕೆ ಬದುಕಲಿಲ್ಲವೆಂದು ಶಂಕಾ ಬಂದರೆ ಅದನ್ನು ಪರಿಹಾರ ಮಾಡುತ್ತಾರೆ.

**ಶ್ಲೋಕ ॥ ರಾಮಾಜ್ಞಯಾಹಿ ರಕ್ಷಾಂಸಿ । ಹರಯೋ ಬ್ಧಾವಪಾಕ್ಷಿಪರ್ ॥ ನೋಜ್ಜೀವಿತಾ ಸ್ತತಸ್ತೇತು । ವಾನರಾನೀರುಜೋ ಭವರ್ ॥೨೦೪॥**

**ಅರ್ಥ.**—ರಾಮಾಜ್ಞಯಾ = ಶ್ರೀ ರಾಮಚಂದ್ರನ ಆಜ್ಞೆಯಿಂದ ಹರಯಃ–ಕಪಿಗಳು, ರಕ್ಷಾಂಸಿ = ರಣದಲ್ಲಿ ಮೃತರಾದ ರಾಕ್ಷಸರನ್ನು, ಅಬ್ಧೌ=ಸಮುದ್ರದಲ್ಲಿ, ಅಪಾಕ್ಷಿಪರ್=ಹಾಕಿಬಿಟ್ಟರು, ತತಃ – ಆದ್ದರಿಂದ, ತೇತು=ಆ ರಾಕ್ಷಸರು, ನೋಜ್ಜೀವಿತಾಃ=ಬದುಕಲಿಲ್ಲ, ವಾನರಾಸ್ತು–ಕಪಿಗಳಾದರೋ, ನಿರುಜಃ=ರೋಗದಿಂದ ರಹಿತರಾದವರು, ಅಭವರ್=ಆದರು.

**ಶ್ಲೋಕ ॥ ಛಿನ್ನಪ್ರರೋಹಿಣಶ್ಚೈವ । ವಿಶಲ್ಯಾಃಪೂರ್ವವರ್ಣಿನಃ ॥ ಔಷಧೀನಾಂ ಪ್ರಭಾವೇನ । ಸರ್ವೇಪಿ ಹರಯೋಭವರ್ ॥ ೨೦೫ ॥**

**ಅರ್ಥ.**—ಹರಯಃ – ಕಪಿಗಳು, ಸರ್ವೇಪಿ–ಸಮಸ್ತರೂ, ಔಷಧೀನಾಂ–ಮೃತಸಂಜೀವಿನ್ಯಾದಿ ಔಷಧಿಗಳ, ಪ್ರಭಾವೇನ= ಸಾಮರ್ಥ್ಯದಿಂದ. ಛಿನ್ನ–ಕತ್ತರಿಸಲ್ಪಟ್ಟ ಅವಯವಗಳ, ಪ್ರರೋಹಃ–ಅಭಿವೃದ್ಧಿಯುಳ್ಳವರು, ವಿಶಲ್ಯಾಃ–ತೆಗೆದುಹಾಕಲ್ಪಟ್ಟ ಬಾಣಗಳುಳ್ಳವರೂ, ಪೂರ್ವವರ್ಣಿನಃ–ಮೊದಲಿನ ಹಾಗೆ ಶರೀರ ಕಾಂತಿವುಳ್ಳವರೂ, ಅಭವರ್–ಆದರು.

**ತಾತ್ಪರ್ಯ.**—॥ ೨೦೪ ॥ ೨೦೫ ॥ ಹನುಮಂತನು ಗಂಧಮಾದನ ಪರ್ವತವನ್ನು ರಣರಂಗಕ್ಕೆ ತರುವುದಕ್ಕೆ ಪೂರ್ವದಲ್ಲಿಯೇ ಶ್ರೀರಾಮನ ಆಜ್ಞೆಯಂತೆ ರಣದಲ್ಲಿ ಮೃತರಾದ ಸಮಸ್ತ ರಾಕ್ಷಸರ ದೇಹವನ್ನೂ ಕಪಿಗಳು ಸಮುದ್ರದಲ್ಲಿ ಹಾಕಿದ್ದರು. ಆದ್ದರಿಂದ ರಾಕ್ಷಸರ ಮೃತ ದೇಹಕ್ಕೆ

ಔಷಧಿಗಳ ಸಂಸರ್ಗವೇ ಇಲ್ಲ, ಆದ್ದರಿಂದ ಅವರು ಬದುಕಲು ಸಾಧ್ಯವಿಲ್ಲ. ಮೃತರಾದವರು ಬದುಕಿದ್ದೇ ಅಲ್ಲದೆ ರೋಗಾದ್ಯುಪದ್ರವರಹಿತರೂ ಆದರು, ಮತ್ತು ಛಿನ್ನಛಿನ್ನಗಳಾದ ಕೈಕಾಲು ಮೊದಲಾದ ಸಮಸ್ತ ಅವಯವಗಳೂ ಸೇರಿಕೊಂಡವು, ಶರೀರದಲ್ಲಿ ನಟ್ಟಿದ್ದ ಬಾಣಗಳು ಕಿತ್ತು ಹಾಕಲ್ಪಟ್ಟು ಪೂರ್ವದಲ್ಲಿ ಶರೀರದಲ್ಲಿ ಯಾವ ರೀತಿಯಾದ ತೇಜಸ್ಸು ಇತ್ತೋ ಅದೇ ಪ್ರಕಾರ ತೇಜೋ ವರ್ಣರಾದರು.

**ಶ್ಲೋಕ॥ ಅಥಾಸಸಾದೋತ್ತಮ ಪೂರುಷಂ ಪ್ರಭುಂ। ವಿಮಾನಗೋ ರಾವಣ ಆಯುಧೌಘಾನ್ ॥ ಪ್ರವರ್ಷಮಾಣೋ ರಘುವಂಶನಾಥಂ । ತ ಮಾತ್ತಧನ್ವಾಭಿಯಯೌ ಸರಾಮಃ ॥ ೨೦೬ ॥**

**ಅರ್ಥ.**—ಅಥ-ಅನಂತರ, ರಾವಣಃ-ರಾವಣನು, ಉತ್ತಮಪೂರುಷಂ - ಪುರುಷೋತ್ತಮನಾದ, ಪ್ರಭುಂ- ಸರ್ವ ಜಗತ್ತಿಗೆ ಪ್ರಭುವಾದ, ರಘು-ರಘುಮಹಾರಾಜನ, ವಂಶ-ಸಂತತಿಗೆ, ನಾಥಂ - ಸ್ವಾಮಿಯಾದ, ಶ್ರೀರಾಮನನ್ನು ಕುರಿತು, ವಿಮಾನಗಃ=ಪುಷ್ಪಕ ವಿಮಾನಾ ರೂಢನಾಗಿ. ಆಯುಧೌಘಾನ್-ಬಾಣ ಸಮೂಹಗಳನ್ನು, ವರ್ಷಮಾಣಃಸನ್ = ಮಳೆಗರೆಯುತ್ತಾ, ಆಸಸಾದ-ಯುದ್ಧಕ್ಕಾಗಿ ಬಂದನು, ಸರಾಮಃ- ಆ ರಾಮನೂ ಕೂಡ. ಆತ್ತಧನ್ವಾ-ಧರಿಸಲ್ಪಟ್ಟ ಧನುಸ್ಸುಳ್ಳವನಾಗಿ. ತಂಪ್ರತಿ-ಆ ರಾವಣನನ್ನು ಕುರಿತು. ಅಭಿಯಯೌ-ಎದುರಿಗೆ ಹೋದನು.

**ತಾತ್ಪರ್ಯ.**—ಪುಷ್ಪಕ ವಿಮಾನಾರೂಢನಾಗಿ ಬಾಣಗಳ ಮಳೆಗರೆಯುತ್ತಾ ಶ್ರೀರಾಮನ ಸಂಗಡ ಯುದ್ಧಕ್ಕಾಗಿ ಬಂದನು. ಶ್ರೀರಾಮನು ಅವನಿಗೆ ಅಭಿಮುಖವಾಗಿ ಧನುರ್ಧಾರಿಯಾಗಿ ಯುದ್ಧಕ್ಕೆ ನಿಂತನು.

**ಶ್ಲೋಕ॥ ಸಮ್ಮಾನಯನ್ರಾಘವಮಾದಿಪೂರುಷಂ । ನಿರ್ಯಾತಯಾಮಾಸ ರಥಂ ಪುರಂದರಃ ॥ ಸಹಾಯುಧಂ ಮಾತಲಿಸಂಗೃಹೀತಂ । ಸಮಾರುರೋಹಾಶು ಸಲಕ್ಷ್ಮಣಾಗ್ರಜಃ ॥ ೨೦೭॥**

**ಅರ್ಥ:**—ಪುರಂದರಃ-ದೇವೇಂದ್ರನು. ಆದಿಪೂರುಷಂ=ಪುರಾತನ ಪುರುಷನಾದ. ರಾಘವಂ-ಶ್ರೀರಾಮನನ್ನು. ಸನ್ಮಾನಯನ್ಸನ್ = ಗೌರವಿಸಿದವನಾಗಿ. ರಥಂ-ರಥವನ್ನು- ನಿರ್ಯಾತಯಾಮಾಸ-ಕಳುಹಿಸಿಕೊಟ್ಟನು. ಲಕ್ಷ್ಮಣಾಗ್ರಜಃ=ಲಕ್ಷ್ಮಣನ ಪೂರ್ವಜನಾದ. ಸಃ - ಆ ಶ್ರೀರಾಮನು.

ಸಹಾಯುಧಂ = ಆಯುಧಗಳಿಂದ ಸಹಿತವಾಗಿ, ಮಾತಲಿ = ದೇವೇಂದ್ರನ ಸಾರಥಿಯಾದ ಮಾತಲಿಯಿಂದ, ಸಂಗೃಹೀತಂ= ತರಲ್ಪಟ್ಟ, ರಥಂ = ರಥವನ್ನು, ಆಶು = ಜಾಗ್ರತೆಯಾಗಿ, ಸಮಾರುರೋಹ = ಏರಿದನು.

ತಾತ್ಪರ್ಯ.—ರಾವಣನು ರಾಮರೊಡನೆ ಯುದ್ಧಮಾಡುವುದಕ್ಕೆ, ತನ್ನ ಪುಷ್ಪಕ ವಿಮಾನಾರೂಢನಾಗಿ ಬಂದನು. ರಾಮರಿಗೆ ರಥವಿಲ್ಲದಿರುವದನ್ನು ಅರಿತು ಅವರ ಮರ್ಯಾದಾರ್ಥವಾಗಿ ದೇವೇಂದ್ರನು ಸಮಸ್ತವಾದ ಆಯುಧಗಳಿಂದ ಸಹಿತವಾದ ತನ್ನ ರಥವನ್ನು ತನ್ನ ಸಾರಥಿಯಾದ ಮಾತಲಿಯ ಸಮೇತ ಕಳುಹಿಸಿದನು. ಶ್ರೀರಾಮನು ಆ ರಥವನ್ನು ಏರಿದನು.

**ಶ್ಲೋಕ ॥ ಆರುಹ್ಯತದ್ರಥವರಂ ಜಗದೇಕನಾಥೋ ॥ ಲೋಕಾಭಯಾಯ ರಜನೀಚರನಾಥ ಮಾಶು ॥ ಅಭ್ಯುದ್ಯಯೌ ದಶಶತಾಂಶುರಿವಾಂಧಕಾರಂ । ಲೋಕಾನಶೇಷತ ಇಮಾನ್ನಿಗಿರಂತ ಮುದ್ಯ್ಯನ್ ॥ ೨೦೮ ॥**

ಅರ್ಥ.—ಜಗದೇಕನಾಥಃ = ಸಮಸ್ತ ಜಗತ್ತಿಗೂ ಮುಖ್ಯಸ್ವಾಮಿಯಾದ ಶ್ರೀರಾಮನು, ತದ್ರಥವರಂ = ಶ್ರೇಷ್ಠವಾದ ಆ ಇಂದ್ರನ ರಥವನ್ನು, ಆರುಹ್ಯ = ಏರಿ, ಉದ್ಯನ್ = ಪ್ರಕಾಶಮಾನನಾಗಿ, ಲೋಕಾಭಯಾಯ = ಪ್ರಪಂಚಕ್ಕೆ ಭಯಪರಿಹಾರಾರ್ಥವಾಗಿ, ಅಂಧಕಾರಂ = ಕತ್ತಲೆಯನ್ನು, ದಶಶತಾಂಶುರಿವ = ಸಹಸ್ರ ರಶ್ಮಿಯಿಂದ ಕೂಡಿದ ಸೂರ್ಯನೋಪಾದಿಯಲ್ಲಿ, ಇಮಾನ್ - ಪಾತಾಳಲೋಕ ಮೊದಲು ಸ್ವರ್ಗಲೋಕದ ಪರಿಯಂತರವಾದ, ಲೋಕಾನ್= ಲೋಕಗಳನ್ನು, ಅಶೇಷತಃ = ನಿಶ್ಶೇಷವಾಗಿ, ನಿಗಿರಂತಂ = ನುಂಗುತ್ತಿರುವ, ರಜನೀಚರನಾಥಂಪ್ರತಿ = ರಾಕ್ಷಸ ಪತಿಯಾದ ರಾವಣನನ್ನು ಕುರಿತು, ಅಭ್ಯುದ್ಯಯೌ = ಎದುರಿಸಿ ಹೊರಟನು.

ತಾತ್ಪರ್ಯ.—ಜಗದೇಕಸ್ವಾಮಿಯಾದ ಶ್ರೀರಾಮನು ಇಂದ್ರನಿಂದ ಕಳುಹಿಸಲ್ಪಟ್ಟ ರಥವನ್ನು ಏರಿ ಸಮಸ್ತ ಪ್ರಪಂಚವನ್ನೂ ನುಂಗಿಹಾಕುತ್ತಿರುವ ಅಂಧಕಾರವನ್ನು ಸಹಸ್ರ ರಶ್ಮಿಯಾದ ಸೂರ್ಯನು ಉದಯಿಸಿ ಪರಿಹಾರಮಾಡುವ ಹಾಗೆ ಸಕಲ ಲೋಕಕ್ಷೇಮಕ್ಕಾಗಿ ರಾವಣನನ್ನು ಎದುರಿಸಿ ಹೋದನು.

ಶ್ಲೋಕ || ಆಯಾಂತಮೀಕ್ಷ್ಯ ರಜನೀಚರಲೋಕನಾಥಃ | ಶಸ್ತ್ರಾಣ್ಯಥಾಸ್ತ್ರ ಸಹಿತಾನಿ ಮುಮೋಚರಾಮೇ || ರಾಮಸ್ತುತಾನಿ ವಿನಿಕೃಂತ್ಯ ನಿಜೈರ್ಮಹಾಸ್ತ್ರೈ | ಸ್ತಸ್ಯೋತ್ತಮಾಂಗ ದಶಕಂ ಯುಗಪನ್ನ್ಯಕೃಂತತ್ || ೨೦೯ ||

ಅರ್ಥ.—ರಜನೀಚರಲೋಕ = ರಾಕ್ಷಸರಿಗೆ, ನಾಥಃ = ರಾಜನಾದ ರಾವಣನು, ಆಯಾಂತಂ = ಯುದ್ಧಕ್ಕಾಗಿ ಬರುತ್ತಿರುವ ರಾಮನನ್ನು, ಈಕ್ಷ್ಯ = ನೋಡಿ. ರಾಮೇ = ಶ್ರೀರಾಮನ ಮೇಲೆ, ಅಸ್ತ್ರಸಹಿತಾನಿ = ಅಸ್ತ್ರಗಳಿಂದ ಸಹಿತವಾದ, ಶಸ್ತ್ರಾಣಿ = ಶಸ್ತ್ರಗಳನ್ನು, ಮುಮೋಚ = ಪ್ರಯೋಗಮಾಡಿದನು, ಅಥ – ಅನಂತರ, ರಾಮಸ್ತು = ಶ್ರೀರಾಮನು, ನಿಜೈಃ = ಸ್ವಕೀಯಗಳಾದ, ಮಹಾಸ್ತ್ರೈಃ – ಮಹಾಸ್ತ್ರಗಳಿಂದ, ತಾನಿ = ರಾವಣನಿಂದ ಮುಕ್ತವಾದ ಅಸ್ತ್ರಶಸ್ತ್ರಗಳನ್ನು, ವಿನಿಕೃಂತ್ಯ – ಛೇದನಮಾಡಿ, ತಸ್ಯ = ಆ ರಾವಣನ, ಉತ್ತಮಾಂಗ = ಶಿರಸ್ಸುಗಳ, ದಶಕಂ–ಹತ್ತನ್ನೂ, ಯುಗಪತ್ – ಏಕಬಾಣದಿಂದ, ನ್ಯಕೃಂತತ್ = ಛೇದನ ಮಾಡಿದನು.

ತಾತ್ಪರ್ಯ.—ರಾಕ್ಷಸಪತಿಯಾದ ರಾವಣನು ಅಸ್ತ್ರ ಮತ್ತು ಮಂತ್ರಗಳಿಂದ ಅಭಿಮಂತ್ರಿಸಲ್ಪಟ್ಟ ಮಹಾ ಶಸ್ತ್ರಗಳನ್ನು ಶ್ರೀರಾಮನ ಮೇಲೆ ಪ್ರಯೋಗ ಮಾಡಿದನು. ಶ್ರೀರಾಮನೂ ಕೂಡ ಆ ಅಸ್ತ್ರಶಸ್ತ್ರಗಳನ್ನು ತನ್ನ ಮಹಾಶಸ್ತ್ರಗಳಿಂದ ಛೇದನಮಾಡಿ ರಾವಣನ ಹತ್ತು ತಲೆಗಳನ್ನೂ ಒಂದೇ ಬಾಣದಿಂದ ಏಕಕಾಲದಲ್ಲಿಯೇ ಛೇದನ ಮಾಡಿದನು.

ಶ್ಲೋಕ || ಕೃಂತಾನಿತಾನಿ ಪುನರೇವ ಸಮುತ್ಥಿತಾನಿ | ದೃಷ್ಟ್ವಾ ವರಾಚ್ಛತಧೃತೇ ಹೃದಯಂಬಿಭೇದ || ಬಾಣೇನವಜ್ರಸದೃಶೇನ ಸಭಿನ್ನಹೃತ್ಕೋ | ರಕ್ತಂವಮನ್ನಪತದಾಶು ಮಹಾವಿಮಾನಾತ್ || ೨೧೦ ||

ಅರ್ಥ— ಕೃಂತಾನಿ = ಛೇದಿಸಲ್ಪಟ್ಟ, ತಾನಿ = ಆ ಶಿರಃಸ್ಸುಗಳು, ಶತಧೃತೇಃ = ಬ್ರಹ್ಮದೇವರ, ವರಾತ್ – ವರದಿಂದ, ಪುನರೇವ = ಪುನಃ, ಸಮುತ್ಥಿತಾನಿ = ಉದ್ಭವವಾಗುತ್ತಿರುವದನ್ನು, ದೃಷ್ಟ್ವಾ = ನೋಡಿ, (ರಾಮಃ – ಶ್ರೀರಾಮಚಂದ್ರದೇವರು), ವಜ್ರಸದೃಶೇನ = ವಜ್ರಾಯುಧಕ್ಕೆ ಸದೃಶನಾದ, ಬಾಣೇನ = ಬಾಣದಿಂದ, ಹೃದಯಂ = ರಾವಣನ ವಕ್ಷ

ಸ್ಥಳವನ್ನು, ಬಿಭೇದ = ಛೇದಿಸಿದನು- ಭಿನ್ನಹೃತ್ಕಃ = ಛೇದಿಸಲ್ಪಟ್ಟ ಹೃದಯವುಳ್ಳ, ಸಃ = ಆ ರಾವಣನು, ರಕ್ತಂ = ರಕ್ತವನ್ನು, ವರ್ಮಸನ್= ವಮನಮಾಡಿಕೊಂಡು, ಮಹಾವಿಮಾನಾತ್ = ಶ್ರೇಷ್ಠವಾದ ವಿಮಾನದಿಂದ, ಆಶು = ತಕ್ಷಣದಲ್ಲಿಯೇ, ನ್ಯಪತತ್ = ನೆಲಕ್ಕೆ ಬಿದ್ದನು.

ತಾತ್ಪರ್ಯ.—ಛೇದನಮಾಡಲ್ಪಟ್ಟ ಶಿರಃಸ್ಸುಗಳು ಬ್ರಹ್ಮದೇವರ ವರದಿಂದ ಪುನಃ ಉತ್ಪನ್ನವಾಗುತ್ತಿರುವದನ್ನು ನೋಡಿ ಶ್ರೀರಾಮನು ರಾವಣನ ಹೃದಯವನ್ನೇ ವಜ್ರಾಯುಧಕ್ಕೆ ಸದೃಶವಾದ ಬಾಣದಿಂದ ಛೇದನ ಮಾಡಿದನು. ಆ ಬಾಣದಿಂದ ಅವನ ಹೃದಯವು ಭಿನ್ನವಾಗಿ ರಕ್ತವನ್ನು ವಮನಮಾಡಿ ತಾನು ಕೂತು ಯುದ್ಧಮಾಡುತ್ತಿದ್ದ ಪುಷ್ಪಕ ವಿಮಾನದಿಂದ ಕೆಳಗೆ ಬಿದ್ದು ಮೃತನಾದನು.

ಶ್ಲೋಕ ॥ ತಸ್ಮಿನ್ಹತೇ ತ್ರಿಜಗತಾಂ ಪರಮಪ್ರತೀಪೇ । ಬ್ರಹ್ಮಾಶಿವೇನ ಸಹಿತಃ ಸಹಲೋಕಪಾಲೈಃ ॥ ಅಭ್ಯೇತ್ಯಪಾದಯುಗಳಂ ಜಗದೇಕಭರ್ತು । ರಾಮಸ್ಯ ಭಕ್ತಿಭರಿತಃ ಶಿರಸಾನನಾಮ ॥ ೨೧೧ ॥

ಅರ್ಥ.—ತ್ರಿಜಗತಾಂ = ಮೂರುಲೋಕಕ್ಕೂ, ಪರಮಪ್ರತೀಪೇ = ಅತ್ಯಂತ ದ್ವೇಷಿಯಾದ, ತಸ್ಮಿನ್ = ಆ ರಾವಣನು, ಹತೇಸತಿ – ಮೃತನಾಗುತ್ತಿರಲಾಗಿ, ಬ್ರಹ್ಮ = ಬ್ರಹ್ಮದೇವರು, ಶಿವೇನ = ರುದ್ರನಿಂದಲೂ, ಸಹಲೋಕಪಾಲೈಃ = ಲೋಕಪಾಲಕರಿಂದಲೂ, ಸಹಿತಃ = ಸಹಿತನಾಗಿ, ಜಗತ್ – ಪ್ರಪಂಚಕ್ಕೆ, ಏಕಭರ್ತುಃ – ಮುಖ್ಯಸ್ವಾಮಿಯಾದ, ರಾಮಸ್ಯ = ಶ್ರೀರಾಮಚಂದ್ರನ, ಪಾದಯುಗಳಂ – ಪಾದದ್ವಂದ್ವಗಳನ್ನು, ಅಭ್ಯೇತ್ಯ = ಹೊಂದಿ, ಭಕ್ತಿಭರಿತಃಸನ್ – ಭಕ್ತಿಯಿಂದ ಪೂರಿತನಾಗಿ, ಶಿರಸಾ – ಶಿರಃಸ್ಸಿನಿಂದ, ನನಾಮ – ನಮಸ್ಕರಿಸಿದನು.

ತಾತ್ಪರ್ಯ.—ಸಮಸ್ತ ಪ್ರಪಂಚಕ್ಕೂ ಮಹಾ ದ್ವೇಷಿಯಾದ ರಾಕ್ಷಸ ಪತಿಯಾದ ರಾವಣನು ಶ್ರೀರಾಮನ ಬಾಣದಿಂದ ಹತನಾಗಿ ಬಿದ್ದ ಒಡನೆಯೇ ಬ್ರಹ್ಮದೇವರು ರುದ್ರದೇವರಿಂದಲೂ ಲೋಕಪಾಲಕರಿಂದಲೂ ಸಹಿತರಾಗಿ ಜಗತ್ತಿಗೆ ಮುಖ್ಯ ಪ್ರಭುವಾದ ಶ್ರೀರಾಮನ ಪಾದಯುಗಳವನ್ನು ಹೊಂದಿ ಪರಮ ಭಕ್ತಿಯಿಂದ ಸಾಷ್ಟಾಂಗ ನಮಸ್ಕಾರ ಮಾಡಿದನು.

**ಶ್ಲೋಕ ॥ ಅಥೈನ ಮಸ್ತೌತ್ಪಿತರಂ ಕೃತಾಂಜಲಿ । ರ್ಗುಣಾಭಿರಾಮಂ ಜಗತಃ ಪಿತಾಮಹಃ ॥ ಜಿತಂಜಿತಂತೇ ಜಿತಲೋಕಭಾವನ । ಪ್ರಪನ್ನ ಪಾಲಾಯ ನವೋನಮಸ್ತೇ ॥ ೨೧೨ ॥**

ಅರ್ಥ.—ಅಥ = ಅನಂತರ, ಜಗತಃ = ಪ್ರಪಂಚಕ್ಕೆ, ಪಿತಾಮಹಃ = ಪಿತಾಮಹರಾದ ಬ್ರಹ್ಮದೇವರು, ಕೃತಾಂಜಲಿಃ ಸನ್ – ಬದ್ಧಾಂಜಲಿಯುಳ್ಳವರಾಗಿ, ಗುಣಾಭಿರಾಮಂ – ಸ್ವರೂಪಭೂತಗಳಾದ ಜ್ಞಾನಾನಂದಾದಿ ಗುಣಗಳಿಂದ, ಅಭಿರಾಮಂ = ರಮಣಮಾಡುತ್ತಿರುವ, ಪಿತರಂ= ತನಗೆ ತಂದೆಯಾದ, ಏನಂ – ಈ ಶ್ರೀರಾಮನನ್ನು, ಹೇ ಅಜಿತ = ಯಾರಿಂದಲೂ ಅಪಜಯವಿಲ್ಲದವನೇ, ಹೇ ಲೋಕಭಾವನ = ಪ್ರಪಂಚವನ್ನು ಸೃಷ್ಟಿಮಾಡಿದವನೇ, ತೇ = ನಿನಗೆ, ಜಿತಂಜಿತಂ = ಜಯವು, ಜಯವು, ಪ್ರಪನ್ನಪಾಲಾಯ = ಹೊಂದಿದವರನ್ನು ರಕ್ಷಿಸತಕ್ಕ, ತೇ = ನಿನಗೋಸ್ಕರ, ವಯಂ = ನಾವುಗಳು, ನತಾಃ – ನಮಸ್ಕಾರ ಮಾಡತಕ್ಕವರು; ಅಸ್ಮ = ಆಗಿದ್ದೇವೆ. (ಇತಿ – ಹೀಗೆಂದು), ಅಸ್ತೌತ್ = ಸ್ತೋತ್ರಮಾಡಿದರು.

ತಾತ್ಪರ್ಯ.—ಸಮಸ್ತ ಜಗತ್ತಿಗೂ ಪಿತಾಮಹರಾದ ಬ್ರಹ್ಮದೇವರು ಶ್ರೀರಾಮನ ಪಾದಸನ್ನಿಧಿಯಲ್ಲಿ ಬದ್ಧಾಂಜಲಿಗಳಾಗಿ ಸ್ವಸ್ವರೂಪಭೂತಗಳಾದ ಜ್ಞಾನ ಮತ್ತು ಆನಂದ ಇವೇ ಮೊದಲಾದ ಮಹಾ ಗುಣಗಳಿಂದ ಮನೋಹರವಾಗಿ ಕ್ರೀಡಿಸುತ್ತಿರುವ, ತಮಗೆ ತಂದೆಯಾದ ಶ್ರೀರಾಮನನ್ನು ಕುರಿತು " ಹೇ ಜಯಶೀಲನೇ ಸಮಸ್ತ ಜಗತ್ಸೃಷ್ಟಿಕರ್ತನೇ ನಿನ್ನಿಂದ ಸಮಸ್ತ ಜಯವೂ ಉಂಟಾಯಿತು. ನಿನ್ನ ಪಾದಾರವಿಂದಗಳನ್ನು ಹೊಂದಿದವರನ್ನು ಪರಿಪಾಲಿಸತಕ್ಕ ಪ್ರಭುವಾದ ನಿನಗೆ ನಮಸ್ಕಾರ ಮಾಡುತ್ತೇವೆ." ಈ ಪ್ರಕಾರವಾಗಿ ಲೋಕಪಾಲಕರಿಂದಲೂ ಮತ್ತು ರುದ್ರಾದಿ ದೇವತಾ ಸಮೂಹದಿಂದಲೂ ಕೂಡಿ ಬ್ರಹ್ಮದೇವರು ಶ್ರೀರಾಮಚಂದ್ರನನ್ನು ಸ್ತೋತ್ರಮಾಡಿದರು.

**ಶ್ಲೋಕ ॥ ತ್ವಮೇಕಈಶೋಽಸಿ ನಚಾದಿರಂತ । ಸ್ತ್ವವೇಢ್ಯಕಾಲೇನ ತಥೈವ ದೇಶತಃ ॥ ಗುಣಾಹ್ಯಗಣ್ಯಾ ಸ್ತವತೇಽಪ್ಯನಂತಾಃ । ಪ್ರತ್ಯೇಕಶಶ್ಚಾದಿ ವಿನಾಶವರ್ಜಿತಾಃ ॥ ೨೧೩ ॥**

ಅರ್ಥ.—(ಶ್ರೀರಾಮಚಂದ್ರ) ತ್ವಂ = ನೀನು, ಏಕಈಶಃ = ಮುಖ್ಯ ವಾದ ಪ್ರಭುವು, ಅಸಿ–ಆಗಿದ್ದೀಯೆ, ಹೇ ! ಈಡ್ಯಃ = ಸ್ತೋತ್ರಾರ್ಹನಾದ ಮಹಾಪ್ರಭುವೇ, ತವ=ನಿನಗೆ. ಕಾಲೇನ=ಕಾಲಕ್ರಮದಿಂದಲೂ, ತಥೈವ =ಅದರಂತೆಯೇ, ದೇಶತಃ=ದೇಶದಿಂದಲೂ, ಆದಿಃ=ಮೊದಲು, ಅಂತಃ= ಕೊನೆ, ನಚ=ಇಲ್ಲವೇ ಇಲ್ಲ. ತವ = ನಿನ್ನ, ಗುಣಾಃ = ಗುಣಗಳು, ಅಗಣ್ಯಾಹಿ=ಗಣನಾತೀತಗಳು, ತೇಪಿ=ಅವುಗಳಾದರೋ, ಅನಂತಾಃ=ಅಪ ರಿಮಿತವಾದವುಗಳು, (ಮತ್ತು) ಪ್ರತ್ಯೇಕ ಶಶ್ವಾದಿ ವಿನಾಶವರ್ಜಿತಾಃ= ಪ್ರತ್ಯೇಕ=ಆ ಅನಂತಗುಣಗಳಲ್ಲಿ ಪ್ರತಿ ಒಂದನ್ನೂ, ಶಶ್ವಾದಿ = ಉತ್ಪತ್ತಿ ನಾಶ ಮೊದಲಾದವುಗಳಿಂದ, ವರ್ಜಿತಾಃ–ರಹಿತವಾದವುಗಳು.

ತಾತ್ಪರ್ಯ.—(ಹೇ ಪ್ರಭೋ) ನೀನು ಈ ಪ್ರಪಂಚಕ್ಕೆ ಮುಖ್ಯ ಸ್ವಾಮಿಯಾಗಿದ್ದೀಯೋ. ಹೇ ಸ್ತುತ್ಯನೇ ! ನಿನಗೆ ಯಾವ ದೇಶದಲ್ಲಾಗಲೀ ಹಾಗೆಯೇ ಯಾವ ಕಾಲದಲ್ಲಾಗಲೀ ಉತ್ಪತ್ತಿ ಅಥವಾ ನಾಶ ಇಲ್ಲವೇ ಇಲ್ಲ. ನಿನ್ನ ಗುಣಗಳಾದರೋ ಗಣನಾತೀತವಾದವುಗಳು, ಮತ್ತು ಆದಿ ಅಂತ್ಯಗ ಳಿಂದ ಅಂದರೆ ಪೂರ್ವದಲ್ಲಿರಲಿಲ್ಲ ಆಮೇಲೆ ಉತ್ಪತ್ತಿಯಾಯಿತು ನಾಶ ವಾಯಿತು, ಇಂತಹ ಗುಣಗಳಿಂದ ರಹಿತವಾದವುಗಳು. ಸದೋದಿತವಾ ದವುಗಳೆಂದು ತಾತ್ಪರ್ಯವು. ಇಂತಹ ಗಣನಾತೀತವಾದ ಗುಣಗಳೂ ಪ್ರತ್ಯೇಕವೂ ಅನಂತಾನಂತವಾದವುಗಳು.

**ಶ್ಲೋಕ ॥ ನಚೋದ್ಭವೋ ನೈವ ತಿರಸ್ಕೃತಿಸ್ತೇ । ಕ್ವಚಿದ್ಗುಣಾನಾಂ ಪರತಃ ಸ್ವತೋವಾ । ತ್ವಮೇಕಆದ್ಯಃ ಪರಮಃ ಸ್ವತಂತ್ರೋ । ಭೃತ್ಯಸ್ತ ವಾಹಂ ಶಿವಪೂರ್ವಕಾಶ್ಚ ಯೇ ॥ ೨೧೪ ॥**

ಅರ್ಥ.—ತೇ=ನಿನ್ನ, ಗುಣಾನಾಂ–ಗುಣಗಳಿಗೆ, ಪರತಃ=ಅನ್ಯರಿಂದ ಲಾಗಲೀ, ಸ್ವತೋವಾ=ನಿನ್ನಿಂದಲೇ ಆಗಲೀ, ಕ್ವಚಿದಪಿ=ಕಿಂಚಿತ್ತಾದರೂ, ಉದ್ಭವಃ–ಉತ್ಪತ್ತಿಯು, ನಚ=ಇಲ್ಲವೇ ಇಲ್ಲವು. ತಿರಸ್ಕೃತಿಶ್ಚ–ಮರೆಯಾ ಗೋಣವೂ ಕೂಡ, ನೈವ=ಇಲ್ಲವೇ ಇಲ್ಲವು. ತ್ವಂ–ನೀನು, ಏಕಃ=ನೀನು ಒಬ್ಬನೇ, ಆದ್ಯಃ=ಆದಿಯಲ್ಲಿ ಇರತಕ್ಕ, ಪರಮಃ=ಸರ್ವೋತ್ತಮನು, ಸ್ವ ತಂತ್ರಶ್ಚ–ಸ್ವತಂತ್ರನು, ಅತಃ=ಆದ್ದರಿಂದ, ಯೇ=ಯಾವ, ಶಿವಪೂರ್ವಕಾಃ =ರುದ್ರದೇವರೇ ಮೊದಲಾದ ದೇವತೆಗಳೂನ್ನೂ, ತೇಸರ್ವೇ –ಆ ಸರ್ವರೂ, ಅಹಂಚ=ನಾನೂ ಸಹ, ತವ–ನಿನಗೆ, ಭೃತ್ಯಾಃ=ಸೇವಕರು.

ತಾತ್ಪರ್ಯ.— ನಿನ್ನ ಗುಣಗಳಿಗೆ ಪರಕೀಯರಿಂದಲೂ ನಿನ್ನಿಂದಲೂ ಯಾವ ಕಾಲದಲ್ಲೂ ಯಾವ ಸ್ಥಳದಲ್ಲೂ ಕಿಂಚಿತ್ತಾದರೂ ಉತ್ಪತ್ತಿ ಇಲ್ಲವು, ಹಾಗೆಯೇ ಮರೆಯಾಗೋಣವೂ ಇಲ್ಲವು. ಸದೋದಿತಗಳು (ಸರ್ವದಾ ಸ್ವತಃ ಪ್ರಕಾಶಮಾನವಾದವುಗಳು) ನೀನು ಒಬ್ಬನೇ ಪುರಾಣಪುರುಷನು, ಸರ್ವೋತ್ತಮನು ಮತ್ತು ಸ್ವತಂತ್ರನೂ ಆಗಿದ್ದೀಯೇ. ಆದುದರಿಂದ ರುದ್ರದೇವರೇ ಮೊದಲಾಗಿ ಎಲ್ಲಾ ದೇವತೆಗಳೂ ನಾನೂ ಸಹ ನಿನ್ನ ಸೇವಕರಾಗಿದ್ದೇವೆ.

**ಶ್ಲೋಕ || ಯಥಾರ್ಚಿಷೋಗ್ನೇಃ ಪವನಸ್ಯ ವೇಗಾಃ । ಮರೀಚಯೋರ್ಕಸ್ಯ ನದೀಷು ಚಾಪಃ || ಗಚ್ಛಂತಿ ಚಾಯಾಂತಿ ಚ ಸಂತತಾಶ್ಚ । ತದ್ವನ್ಮದಾದ್ಯಾಃ ಶಿವಪೂರ್ವಕಾಶ್ಚ ಯೇ || ೨೧೫ ||**

ಅರ್ಥ.— ಯಥಾ=ಯಾವ ರೀತಿಯಲ್ಲಿ, ಅಗ್ನೇಃ-ಅಗ್ನಿಯ, ಅರ್ಚಿಷಃ=ಜ್ವಾಲೆಗಳೂ, ಪವನಸ್ಯ-ಗಾಳಿಯ, ವೇಗಾಃ=ವೇಗವೂ, ಅರ್ಕಸ್ಯ-ಸೂರ್ಯನ, ಮರೀಚಯಃ=ರಶ್ಮಿಗಳೂ, ನದೀಷು-ನದಿಗಳಲ್ಲಿ, ಆಪಃ=ಉದಕಗಳು (ಇವು ಸರ್ವವೂ) ಆಯಾಂತಿ - ಒಂದು ಕಾಲದಲ್ಲಿ ಬರುತ್ತವೆಯೋ, ಗಚ್ಛಂತಿಚ=ಮತ್ತೊಂದು ಕಾಲದಲ್ಲಿ ಹೋಗುತ್ತವೆಯೊ, ತದ್ವತ್= ಅದೇ ಪ್ರಕಾರವಾಗಿ, ಮದಾದ್ಯಾಃ=ನಾನೇ ಮೊದಲಾದ, ಸಂತತಾಃ=ಅನಾದಿಕಾಲೀನರಾದ, ಯೇ=ಯಾವ, ಶಿವಪೂರ್ವಕಾಃ=ರುದ್ರದೇವರೇ ಮೊದಲಾದ, ಸುರಾಃ=ದೇವತೆಗಳು, ತೇ=ಅವರೆಲ್ಲರೂ, ಗಚ್ಛಂತಿ=ಪ್ರಳಯಕಾಲದಲ್ಲಿ ಹೋಗುತ್ತಾರೆ. ಆಯಾಂತಿಚ=ಸೃಷ್ಟಿಕಾಲದಲ್ಲಿ ಪುನಃ ನಿನ್ನಿಂದ ಬರುತ್ತಾರೆ.

ತಾತ್ಪರ್ಯ.— ಈ ಶ್ಲೋಕದಲ್ಲಿ ಬ್ರಹ್ಮದೇವರು ಜೀವ ಪರಮಾತ್ಮರಿಗೆ ಇರತಕ್ಕ ಭೇದವನ್ನು ಸ್ವಾಮಿ ಭೃತ್ಯ ಭಾವದಿಂದ ಸ್ತುತಿಸುತ್ತಾರೆ. (ಹೇ ಸ್ವಾಮಿನ್) ಈ ಪ್ರಪಂಚದಲ್ಲಿ ಅಗ್ನಿಯ ಜ್ವಾಲೆಗಳೂ, ಗಾಳಿಯ ವೇಗಗಳೂ, ಸೂರ್ಯನ ರಶ್ಮಿಗಳೂ. ನದಿಗಳಲ್ಲಿ ನೀರಿನ ಪ್ರವಾಹಗಳೂ, ಯಾವ ರೀತಿಯಲ್ಲಿ ಬಂದು ಹೋಗುತ್ತವೆಯೋ ಅದೇ ಪ್ರಕಾರವಾಗಿ ನಾನೇ ಮೊದಲಾಗಿವುಳ್ಳ ರುದ್ರ ಪೂರ್ವಕ ಸಮಸ್ತ ಜೀವರೂ (ದೇವತೆಗಳೂ) ನಿನ್ನ ಆಜ್ಞಾನುಸಾರವಾಗಿ ಪ್ರಳಯಕಾಲದಲ್ಲಿ ನಿನ್ನಲ್ಲೇ ಲಯವನ್ನು ಹೊಂದುತ್ತೇವೆ ಮತ್ತು

ಜಗತ್ಸೃಷ್ಟಿ ಕಾಲದಲ್ಲಿ ಪುನಃ ನಿನ್ನಿಂದಲೇ ಸೃಷ್ಟರಾಗುತ್ತೇವೆ ಆದುದರಿಂದ ನಾನೇ ಮೊದಲಾಗಿ ಸಮಸ್ತ ದೇವತೆಗಳೂ ಸಹ ನಿನಗೆ ಭೃತ್ಯರಾಗಿದ್ದೇವೆ.

**ಶ್ಲೋಕ || ಯೇಯೇಚಮುಕ್ತಾ ಸ್ತ್ವಥಯೇಚಬದ್ಧಾಃ | ಸರ್ವೇತವೇಶೇಶ ವಶೇಸದೈವ || ವಯಂಸದಾ ತದ್ಗುಣ ಪೂಗಮುಚ್ಚೈಃ | ಸರ್ವೇ ವದಂತೋಽಪಿ ನಪಾರಗಾಮಿನಃ || ೨೧೭ ||**

ಅರ್ಥ.— ಹೇ ಈಶೇಶ=ಪ್ರಭುಗಳಿಗೆಲ್ಲಾ ಪ್ರಭುವಾದ ಹೇ ಪರಮಾತ್ಮನೇ, ಯೇ ಯೇ ಮುಕ್ತಾಃ=ಯಾರು ಯಾರು ಮುಕ್ತಜೀವರಿದ್ದಾರೆಯೋ ಅಥ-ಹಾಗೆಯೇ, ಯೇಬದ್ಧಾಃ-ಯಾರ್‍ಯಾರು ಸಂಸಾರ ಬದ್ಧಜೀವರುಗಳಿದ್ದಾರೆಯೋ, ತೇಸರ್ವೇ=ಆ ಸಮಸ್ತರೂ, ಸದೈವ=ಸರ್ವಕಾಲದಲ್ಲೂ, ತವ=ನಿನಗೆ, ವಶೇ=ಅಧೀನರಾಗಿದ್ದಾರೆ, ವಯಂ=ನಾವುಗಳು, ಸರ್ವೇ=ಎಲ್ಲರೂ, ಸದಾ=ಯಾವಾಗಲೂ, ತತ್‌ಗುಣ-ನಿನ್ನ ಗುಣಗಳ, ಪೂಗಂ = ಸಮೂಹವನ್ನು, ಉಚ್ಚೈಃ=ಅವಿಚ್ಛಿನ್ನವಾಗಿ, ವದಂತೋಽಪಿ=ಕಥನಮಾಡಿ, ಪಾರ=ಕೊನೆಯನ್ನು, ಗಾಮಿನಃ-ಹೊಂದಿದವರು, ನಭವಾಮಃ=ಆಗಲಾರೆವು.

ತಾತ್ಪರ್ಯ.— ಹೇ! ಸರ್ವ ಪ್ರಭುಗಳಿಗೂ ಪರಮಪ್ರಭುವಾದ ಶ್ರೀರಾಮನೇ, ಮುಕ್ತಜೀವರೂ ಸಂಸಾರ ಬದ್ಧಜೀವರೂ ಇವರೆಲ್ಲರೂ ಸರ್ವ ಕಾಲಗಳಲ್ಲಿಯೂ ನಿನಗೆ ಅಧೀನರು. ನಾವು ಸರ್ವರೂ ನಿನ್ನ ಅನಂತವಾದ ಗುಣಗಳನ್ನು ಅನಾದಿ ಕಾಲದಿಂದಲೂ ಸ್ಫುಟವಾಗಿ ಪಠನಮಾಡಿದಾಗ್ಯೂ ಅವುಗಳ ಕೊನೆ ಕಾಣಲಾರೆವು.

**ಶ್ಲೋಕ || ಕಿಮೇಷ ಈದೃಗ್ಗುಣಕಸ್ಯತೇಪ್ರಭೋ | ರಕ್ಷೋವಧೋಶೇಷ ಸುರಪ್ರಪಾಲನಂ || ಅನನ್ಯಸಾಧ್ಯಂಹಿ ತಥಾಪಿತದ್ವಯಂ | ಕೃತಂ ತ್ವಯಾ ತಸ್ಯ ನಮೋನಮಸ್ತೇ || ೨೧೮ ||**

ಅರ್ಥ.—ಹೇ, ಪ್ರಭೋ=ಮಹಾಸ್ವಾಮಿಯೇ, ಈದೃಕ್ = ಈ ಪೂರ್ವೋಕ್ತಗಳಾದ, ಗುಣಕಸ್ಯ=ಅಪಾರವಾದ ಗುಣಗಳುಳ್ಳ, ತೇ – ನಿನಗೆ, ಏಷಃ=ಈ, ಅಶೇಷರಕ್ಷೋವಧಃ=ರಾಕ್ಷಸರ ಸಂಹಾರವು, ಸುರಪ್ರಪಾಲನಂ =ದೇವತೆಗಳ ರಕ್ಷಣವೂ, ಕಿಂ=ಏನು ಆಶ್ಚರ್ಯವು ? ಏಷಃ = ಈ ಕಾರ್ಯಗಳು, ಅನನ್ಯಸಾಧ್ಯಂಹಿ-ನಿನ್ನ ವಿನಹಾ ಬೇರೆ ಯಾರಿಂದಲೂ ಸಾಧ್ಯವಲ್ಲವು. ತಥಾಪಿ=ಆದಾಗ್ಯೂ ತದ್ವಯಂ=ಈ ಉಭಯ ಕಾರ್ಯಗಳೂ ತ್ವಯಾ=

ನಿನ್ನಿಂದ, ಕೃತಂ=ಮಾಡಲ್ಪಟ್ಟಿತು. ತಸ್ಯ-ಅಂತಹ ಗುಣಗಳುಳ್ಳ, ತೇ-ನಿನಗೆ, ನಮೋನಮಃ-ನಮಸ್ಕಾರವು, ನಮಸ್ಕಾರವು.

ತಾತ್ಪರ್ಯ.—ಹೇ ಸ್ವಾಮಿಯೇ ಪೂರ್ವೋಕ್ತಗಳಾದ ಅನಂತಾನಂತ ಗುಣಗಳುಳ್ಳ ನಿನಗೆ ಈ ಸಮಸ್ತ ರಾಕ್ಷಸರ ಸಂಹಾರವೂ ದೇವತೆಗಳ ರಕ್ಷಣವೂ ಏನೂ ಆಶ್ಚರ್ಯಕರವಾದುದಲ್ಲವು. ಈ ಕಾರ್ಯವು ನಿನ್ನ ವಿನಹಾ ಮತ್ತಾರಿಗೂ ಸಾಧ್ಯವಲ್ಲವು. ಈ ಉಭಯ ಕಾರ್ಯಗಳೂ ನಿನ್ನಿಂದ ಮಾಡಲ್ಪಟ್ಟವು. ಆದ್ದರಿಂದ ನಿನಗೆ ನಮಸ್ಕಾರ ನಿನಗೆ ನಮಸ್ಕಾರ.

**ಶ್ಲೋಕ॥ ಇತೀರಿತೇ ತ್ವಬ್ಜಭವೇನ ಶೂಲೀ । ಸಮಾಹ್ವಯದ್ರಾಘವ ಮಾಹವಾಯ ॥ ವರಂ ಮದೀಯಂ ತ್ವಗಣಯ್ಯರಕ್ಷೋ । ಹತಂತ್ವಯಾ ತೇನ ರಣಾಯಮ್ಯೇಹಿ ॥೨೧೭॥**

ಅರ್ಥ.—ಅಬ್ಜಭವೇನ=ಕಮಲೋದ್ಭವರಾದ ಬ್ರಹ್ಮದೇವರು, ಇತಿ=ಪೂರ್ವೋಕ್ತಪ್ರಕಾರವಾಗಿ, ಈರಿತೇಸತಿ=ಹೊಗಳುತ್ತಿರಲು, ಶೂಲೀ=ತ್ರಿಶೂಲಧಾರಿಯಾದ ರುದ್ರದೇವರು, ರಾಘವಂ=ಶ್ರೀರಾಮನನ್ನು ಕುರಿತು, ಮದೀಯಂ=ನನ್ನ, ವರಂ=ವರವನ್ನು, ಅಗಣಯ್ಯ-ಲಕ್ಷ್ಯಮಾಡದೆ, ತ್ವಯಾ=ನಿನ್ನಿಂದ, ರಕ್ಷೋಹತಂ=ರಾಕ್ಷಸನಾದ ರಾವಣನು ಹತನಾದನು, ತೇನ=ಆ ಕಾರಣದಿಂದ, ರಣಾಯ-ಯುದ್ಧಕ್ಕೋಸ್ಕರ, ಮಾ=ನನ್ನ ಸಂಗಡ, ಏಹಿ=ಬಾ, ಇತಿ=ಹೀಗೆಂದು ಹೇಳಿ, ಶೂಲೀ=ರುದ್ರದೇವರು, ರಾಘವಂ=ಶ್ರೀರಾಮನನ್ನು, ಆಹವಾಯ-ಯುದ್ಧಕ್ಕೋಸ್ಕರವಾಗಿ, ಸಮಾಹ್ವಯತ್=ಕರೆದರು.

ತಾತ್ಪರ್ಯ.—ಬ್ರಹ್ಮದೇವರು ಪೂರ್ವ ಶ್ಲೋಕದಲ್ಲಿ ಹೇಳಿದಪ್ರಕಾರ ಶ್ರೀರಾಮನನ್ನು ಸ್ತುತಿಸುತ್ತಿರಲಾಗಿ, ರುದ್ರದೇವರಿಗೆ ಅಸುರಾವೇಶಪ್ರವಿಷ್ಟವಾಗಿ ಶ್ರೀರಾಮನನ್ನ ಕುರಿತು ನನ್ನ ವರವನ್ನು ಗಣಿಸಗೆ ತಾರದೆ ರಾವಣನನ್ನು ಸಂಹರಿಸಿದ್ದಿಯೇ. ಆದ್ದರಿಂದ ನೀನು ನನ್ನ ಸಂಗಡ ಯುದ್ಧಕ್ಕೆ ಬಾ ಎಂದು ಹೇಳಿ ಶ್ರೀರಾಮನನ್ನು ಯುದ್ಧಕ್ಕೆ ಕರೆದರು.

**ಶ್ಲೋಕ॥ ಇತೀರಿತೇಸ್ತ್ವಿತ್ಯಭಿಧಾಯ ರಾಘವೋ । ಧನುಃ ಪ್ರಗೃಹ್ಯಾಶು ಶರಂಚ ಸಂದಧೇ॥ ವಿಕೃಷ್ಯಮಾಣೇ ಚಲಿತಾವಸುಂಧರಾ । ಪಪಾತ ರುದ್ರೋಽಪಿ ಧರಾಪ್ರಕಂಪತಃ ॥೨೧೮॥**

ಅರ್ಥ.— ಇತಿ– ಈ ಪ್ರಕಾರ, ಈರಿತೇಸತಿ=( ರುದ್ರದೇವರು ) ಹೇಳುತ್ತಿರಲಾಗಿ, ರಾಘವಃ–ಶ್ರೀರಾಮನು, ಅಸ್ತ್ವಿತಿ=ಹಾಗೆಯೇ ಆಗಲೆಂದು, ಅಭಿಧಾಯ– ( ರುದ್ರದೇವರಿಗೆ ) ಹೇಳಿ, ಆಶು–ತಕ್ಷಣವೇ, ಧನುಃ–ಧನುಸ್ಸನ್ನು, ಪ್ರಗೃಹ್ಯ – ತೆಗೆದುಕೊಂಡು, ಶರಂ=ಬಾಣವನ್ನು, ಸಂದಧೇ=ಸಂಧಾನವಮಾಡಿದನು. ವಿಕೃಷ್ಯಮಾಣೇಚ– ಆ ಬಾಣವನ್ನು ಎಳೆಯುತ್ತಿರುವಾಗಲೇ, ವಸುಂಧರಾ=ಈ ಭೂಮಿಯು, ಚಲಿತಾ=ನಡುಗಿತು. ಧರಾ–ಭೂಮಿಯ, ಪ್ರಕಂಪತಃ=ನಡುಗುವಿಕೆಯಿಂದ, ರುದ್ರೋಽಪಿ = ರುದ್ರದೇವರೂ ಕೂಡ, ಪಪಾತ=ಬಿದ್ದು ಹೋದರು.

**ಶ್ಲೋಕ || ಅಥೋತ್ಥಿತಶ್ಚಾ ಸುರಭಾವ ವರ್ಜಿತಃ । ಕ್ಷಮಸ್ವದೇವೇತಿ ನನಾಮ ಪಾದಯೋಃ || ಉವಾಚ ಚತ್ವದ್ವಶಗೋಽಸ್ಮಿ ಸರ್ವದಾ । ಪ್ರಸೀದ ಮೇ ತ್ವದ್ವಿಷಯಂ ಮನಃಕುರು ||೨೨೦||**

ಅರ್ಥ.— ಅಥ = ರುದ್ರದೇವರು ಮೂರ್ಛೆಯಿಂದ ಎದ್ದನಂತರ, ಅಸುರಭಾವವರ್ಜಿತಃ=ಅಸುರಭಾವ=ಅಸುರಾವೇಶದಿಂದ, ವರ್ಜಿತಃಸರ್=ಮುಕ್ತನಾದವನಾಗಿ, ಉತ್ಥಿತಃ=ಮೇಲಕ್ಕೆ ಎದ್ದು, ಹೇ ದೇವ = ಹೇ ಸ್ವಾಮಿಯೇ, ಕ್ಷಮಸ್ವ=ನನ್ನ ಅಪರಾಧವನ್ನು ಮನ್ನಿಸು, ಇತಿ = ಹೀಗೆಂದು, ಪಾದಯೋಃ=ಶ್ರೀರಾಮನ ಪಾದಗಳಲ್ಲಿ, ನನಾಮ=ನಮಸ್ಕಾರ ಮಾಡಿದರು. ( ಹೇ ಪ್ರಭೋ=ಮಹಾ ಸ್ವಾಮಿಯೇ, ಅಹಂ=ನಾನು ) ಸರ್ವದಾ=ಸರ್ವಕಾಲದಲ್ಲಿಯೂ, ತ್ವದ್ವಶಗಃ=ನಿನ್ನ ಅಧೀನನು, ಅಸ್ಮಿ=ಆಗಿದ್ದೇನೆ, ಪ್ರಸೀದ–ಪ್ರಸನ್ನನಾಗು, ಮೇ = ನನ್ನ, ಮನಃ = ಮನಸ್ಸನ್ನು, ತ್ವದ್ವಿಷಯಂ=ನಿನ್ನಲ್ಲಿ ಆಸಕ್ತಿಯುಳ್ಳದ್ದನ್ನಾಗಿ, ಕುರು=ಮಾಡು, ಇತಿ = ಹೀಗೆಂದು, ಉವಾಚಚ=ರಾಮನನ್ನು ಪ್ರಾರ್ಥಿಸಿದರು.

ತಾತ್ಪರ್ಯ.— ಬಿದ್ದು ಹೋದ ರುದ್ರದೇವರು ಮೇಲಕ್ಕೆ ಎದ್ದು ಅಸುರಾವೇಶದಿಂದ ಮುಕ್ತರಾದವರಾಗಿ ಶ್ರೀರಾಮನ ಪಾದಗಳಲ್ಲಿ ನಮಸ್ಕಾರಮಾಡಿ, ಹೇ ಸ್ವಾಮಿ ನನ್ನ ಅಪರಾಧವನ್ನು ಕ್ಷಮಿಸು, ನಾನು ಸರ್ವದಾ ನಿನ್ನ ಅಧೀನನಾಗಿದ್ದೇನೆ. ಪ್ರಸನ್ನನಾಗು, ನನ್ನ ಮನಸ್ಸನ್ನು ಸರ್ವದಾ ನಿನ್ನಲ್ಲಿ ಆಸಕ್ತಿಯುಳ್ಳದ್ದನ್ನಾಗಿ ಮಾಡು, ಎಂದು ಪ್ರಾರ್ಥಿಸಿದರು.

**ಶ್ಲೋಕ ॥ ಅಥೇಂದ್ರ ಮುಖ್ಯಾಶ್ಚ ತಮೂಚಿರೇಸುರಾ । ತ್ವಯಾವಿತಾಸ್ಮೋದ್ಯ ನಿಶಾಚರಾದ್ವಯಂ ॥ ತಥೈವ ಸರ್ವಾಪದ ಎವನಸ್ತ್ವಂ । ಪ್ರಪಾಹಿ ಸರ್ವೇ ಭವದೀಯಕಾಸ್ಮಃ ॥೨೨೧॥**

ಅರ್ಥ.—ಅಥ=ಅನಂತರ, ಇಂದ್ರಮುಖ್ಯಾಃ=ಇಂದ್ರ ಮೊದಲಾದ, ಸುರಾಃ=ದೇವತೆಗಳೂನು, ತಪಿ=ಶ್ರೀರಾಮನನ್ನು ಕುರಿತು (ಹೇ ಸ್ವಾಮಿನ್) ತ್ವಯಾ=ನಿನ್ನಿಂದ, ವಯಂ=ನಾವುಗಳು, ಅದ್ಯ=ಈಗ್ಯೆ, ನಿಶಾಚರಾತ್=ರಾಕ್ಷಸನ ದೆಶೆಯಿಂದ, ಆವಿತಾಸ್ಮಃ=ರಕ್ಷಿತರಾದೆವು. ತಥೈವ=ಅದೇ ರೀತಿಯಾಗಿ ಇನ್ನೂ ಉತ್ತರೋತ್ತರವೂ, ನಃ = ನಮ್ಮಗಳನ್ನು, ತ್ವಂ = ನೀನು, ಸರ್ವಾಪದಃ=ಸಮಸ್ತ ವಿಪತ್ತುಗಳಿಂದಲೂ, ಪ್ರಪಾಹಿ=ರಕ್ಷಿಸು. ಸರ್ವೇ-ನಾವೆಲ್ಲರೂ, ಭವದೀಯಕಾಸ್ಮಃ=ನಿನ್ನ ಪಾದಸೇವಕರಾಗಿದ್ದೇವೆ. ಇತಿ=ಹೀಗೆಂದು, ಊಚಿರೇ=ಹೇಳಿದರು.

ತಾತ್ಪರ್ಯ—ಅನಂತರ ಇಂದ್ರದೇವರೇ ಮೊದಲಾದ ಸಮಸ್ತ ದೇವತೆಗಳೂ ಶ್ರೀರಾಮನನ್ನು ಸ್ತುತಿಸಿ ಹೇಳಿದ್ದೇನೆಂದರೆ:— ಹೇ ಪ್ರಭೋ ನಿನ್ನಿಂದ, ರಾಕ್ಷಸನಾದ ರಾವಣನ ಬಾಧೆಯು ದೆಶೆಯಿಂದ ಸದ್ಯಕ್ಕೆ ರಕ್ಷಿತರಾದೆವು. ಇನ್ನು ಮುಂದೆಯೂ ನಮ್ಮನ್ನು ಸಮಸ್ತ ವಿಪತ್ತುಗಳಿಂದಲೂ ರಕ್ಷಿಸು ನಾವೆಲ್ಲರೂ ನಿನ್ನ ಅಧೀನರಾಗಿದ್ದೇವೆ.

**ಶ್ಲೋಕ ॥ ಸೀತಾಕೃತಿಂ ತಾಮಥ ತತ್ರಚಾಗತಾಂ । ದಿವ್ಯಛ್ಛಲೇನಪ್ರಣಿಧಾಯ ಪಾವಕೇ ॥ ಕೈಲಾಸತಸ್ತಾಂ ಪುನರೇವಚಾಗತಾಂ । ಸೀತಾಮುಗ್ಯ್ರಹ್ಣಾದ್ಧುತಭುಕ್ಸಮರ್ಪಿತಾಂ ॥೨೨೨॥**

ಅರ್ಥ.—ಅಥ=ಅನಂತರ, ರಾಮಃ=ಶ್ರೀರಾಮನು, ತತ್ರ = ತಮ್ಮ ಸಮೀಪವನ್ನು ಕುರಿತು, ಆಗತಾಂ-ಬಂಧಿರುವ, ತಾಂ=ರಾವಣನಿಂದ ಹೊತ್ತುಕೊಂಡು ಹೋಗಲ್ಪಟ್ಟಿದ್ದ, ಸೀತಾಕೃತಿಂ – ಸೀತಾ ಪ್ರತಿಮೆಯನ್ನು, ದಿವ್ಯಛ್ಛಲೇನ=ಅಪವಾದ ವ್ಯಾಜದಿಂದ (ದೋಷದ ಸಂದೇಹ ಇರುವ ಜನರನ್ನು ಅಗ್ನಿ ಅಥವಾ ನೀರಿನಲ್ಲಿ ಹಾಕಿ ಪರಿಕ್ಷಿಸೋಣ,) ಪಾವಕೇ=ಅಗ್ನಿಯಲ್ಲಿ ಪ್ರಣಿಧಾಯ=ಪ್ರವೇಶಮಾಡಿಸಿ, ಕೈಲಾಸತಃ=ಕೈಲಾಸ ಪರ್ವತದಿಂದ, ಪುನಃ-ತಿರುಗಿ, ಆಗತಾಂ=ಸ್ವಸನ್ನಿಧಾನಕ್ಕೆ ಬಂದವಳಾಗಿಯೂ, ಹುತಭುಕ್-ಅಗ್ನಿದೇವರಿಂದ, ಸಮರ್ಪಿತಾಂ = ಕೊಡಲ್ಪಟ್ಟವಳಾಗಿಯೂ ಇರುವ, ತಾ

ಮೇವ=ಸಾಕ್ಷಾತ್ತಾದ, ಸೀತಾಂ=ಸೀತಾದೇವಿಯನ್ನು, ಅಗೃಹ್ಣಾತ್-ಪರಿಗ್ರಹಿಸಿದನು.

ತಾತ್ಪರ್ಯ.—ಅನಂತರ ಶ್ರೀರಾಮನು, ರಾವಣನಿಂದ ಅಪಹರಿಸಲ್ಪಟ್ಟಿದ್ದು ಈಗ ಅಶೋಕಾ ವನದಿಂದ ಅಲ್ಲಿಗೆ ಬಂದಿದ್ದ ಸೀತಾಕೃತಿಯನ್ನು ಲೋಕಾಪವಾದ ಪರಿಹಾರಕ್ಕೋಸ್ಕರ ಅಗ್ನಿಪ್ರವೇಶ ಮಾಡಿಸಿ, ಪರಿಶುದ್ಧಳೆಂದು ಅಗ್ನಿಯಿಂದ ಸಮರ್ಪಿಸಲ್ಪಟ್ಟ, ಕೈಲಾಸದಿಂದ ಅಲ್ಲಿಗೆ ಬಂದಿದ್ದ ನಿಜವಾದ ಸೀತಾದೇವಿಯನ್ನು ಪರಿಗ್ರಹ ಮಾಡಿದನು.

ಶ್ಲೋಕ || ಜಾನನ್ಗಿರೀಶಾಲಯಗಾಂ ಸಸೀತಾಂ | ಸಮಗ್ರಹೀತ್ಪಾವಕ ಸಂಪ್ರದತ್ತಾಂ || ಮುಮೋದ ಸಂಪ್ರಾಪ್ಯ ಚತಾಂ ಸರಾಮಃ | ಸಾಚೈವ ದೇವೀ ಭಗವಂತಮಾಪ್ಯ ||೨೨||

ಅರ್ಥ.—ಸಃ=ಶ್ರೀರಾಮನು, ಪಾವಕ-ಅಗ್ನಿಯಿಂದ, ಸಂಪ್ರದತ್ತಾಂ-ಸಮರ್ಪಿಸಲ್ಪಟ್ಟ, ಸೀತಾಂ=ಸೀತಾದೇವಿಯನ್ನು, ಗಿರೀಶಾಲಯ=ರುದ್ರದೇವರ ಆಲಯದಲ್ಲಿ (ಕೈಲಾಸದಲ್ಲಿ) ಗಾಂ-ಇದ್ದವಳನ್ನಾಗಿ, ಜಾನನ್-ತಿಳಿದು, ಸಮಗ್ರಹೀತ್=ಪರಿಗ್ರಹಮಾಡಿದನು. ರಾಮಃ = ಶ್ರೀರಾಮನು, ತಾಂಚ=ಆ ಸಾಕ್ಷಾತ್ ಸೀತಾದೇವಿಯನ್ನೇ, ಸಂಪ್ರಾಪ್ಯ-ಹೊಂದಿ, ಮುಮೋದ=ಸಂತೋಷಪಟ್ಟನು. ಸಾಚದೇವೀ=ಆ ಸೀತಾದೇವಿಯೂ ಕೂಡ, ಭಗವಂತಂ=ಐಶ್ವರ್ಯಾದಿ ಷಡ್ಗುಣ ಸಂಪನ್ನನಾದ ಶ್ರೀರಾಮನನ್ನು, ಆಪ್ಯ=ಹೊಂದಿ, ಮುಮೋದ=ಆನಂದಪಟ್ಟಳು.

ತಾತ್ಪರ್ಯ.—ಶ್ರೀರಾಮನು ಯಜ್ಞಪುರುಷದೇವರಿಂದ ಸಮರ್ಪಿಸಲ್ಪಟ್ಟ ಸೀತಾದೇವಿಯನ್ನು ಕೈಲಾಸದಲ್ಲಿ ರುದ್ರದೇವರಲ್ಲಿ ವಾಸವಾಗಿದ್ದು ಪೂಜೆಯನ್ನು ಹೊಂದುತ್ತಿದ್ದ ನಿಜ ಸೀತಾದೇವಿಯೆಂದು ತಿಳಿದು ಇವಳನ್ನು ದ್ದರಿಂದ ಪರಿಗ್ರಹ ಮಾಡಿದನು. ರಾಮನು ಸಾಕ್ಷಾತ್ ಸೀತಾದೇವಿಯನ್ನು ಹೊಂದಿ ಸಂತೋಷಪಟ್ಟನು. ಆ ಸೀತಾದೇವಿಯಾದರೋ ಷಡ್ಗುಣೈಶ್ವರ್ಯ ಸಂಪನ್ನನಾದ ಶ್ರೀರಾಮನನ್ನು ಹೊಂದಿ ಆನಂದಪಟ್ಟಳು.

ವಿಶೇಷಾರ್ಥ.—ದಿವ್ಯ ಶೋಧನೆ ಎಂಬ ವ್ಯಾಜದಿಂದ ಎಂದು ಏಕೆ ಹೇಳಬೇಕು ? ನಿಜವಾಗಿ ಶ್ರೀರಾಮನಿಗೆ ಸೀತಾಕೃತಿಯಲ್ಲಿ ನಿಜವಾದ ಸೀತೆ ಎಂಬ ಭ್ರಮೆ, ಜ್ಞಾನ ಇದ್ದು ದೋಷ ಸಂದೇಹದಿಂದ ಶೋಧನೆ ಮಾಡುವ

ಶ್ರೀ ವಿಷ್ಣುಸ್ವರೂಪರಾದ ಶ್ರೀರಾಮರು ಇಚ್ಛಾಮಾತ್ರದಿಂದಲೇ, ಮೃತರಾದ ವಾನರರನ್ನು ಯಮಾಲಯದಿಂದ ಕರಿಸಿಕೊಂಡರು. 2. ದಶರಥರಾಜರು ಶ್ರೀ ಪರಮಾತ್ಮನ ಇಚ್ಛಾಮಾತ್ರದಿಂದಲೇ ಸ್ವರ್ಗಲೋಕದಿಂದ ಇಂದ್ರ ದೇವರ ಸಂಗಡ ಬಂದಿದ್ದರೆಂದು ಉಕ್ತವಾಗಿದೆ. (ತಥಾ) ಅನುಜಾನಾತ್ಸ ಪಿತರಂ | ಬ್ರಹ್ಮಾದೀನ ಪರಾನಯು ಇತಿ || ೨೨೫ ||

ಅವತಾರಿಕೆ.—ಈ ಶ್ಲೋಕದಲ್ಲಿ ಶ್ರೀರಾಮರು ವಿಭೀಷಣನಿಂದ ಸಮರ್ಪಿಸಲ್ಪಟ್ಟ, ಪುಷ್ಪಕ ವಿಮಾನಾರೂಢರಾಗಿ ಅಯೋಧ್ಯೆಗೆ ಹೊರಟರು. ಹನುಮಂತರನ್ನು ಮುಂದಾಗಿ ಹೊರಡುವಂತೆ ಆಜ್ಞಾಪಿಸಿದರೆಂದು ನಿರೂಪಣ ಮಾಡಿದ್ದಾರೆ.

**ಶ್ಲೋಕ|| ವಿಭೀಷಣೇನಾರ್ಪಿತಮಾರುರೋಹ | ಸಪುಷ್ಪಕಂ ತತ್ಸಹಿತಃ ಸವಾನರಃ || ಪುರೀಂಜಗಾಮಾಶು ನಿಜಾಮಯೋಧ್ಯಾಂ | ಪುರೋಹನೂಮಂತ ಮಥೋ ನ್ಯಯೋಜಯತ್ || ೨೨೬ ||**

ಅರ್ಥ.—ಸಃ = ಶ್ರೀರಾಮನು, ವಿಭೀಷಣೇನ = ವಿಭೀಷಣನಿಂದ, ಅರ್ಪಿತಂ = ಸಮರ್ಪಿತವಾದ, ಪುಷ್ಪಕಂ = ಪುಷ್ಪಕನಾಮಕ, ವಿಮಾನಂ = ವಿಮಾನವನ್ನು, ಸವಾನರಃ = ವಾನರರಿಂದಲೂ, ತತ್ಸಹಿತಃ=ಆ ವಿಭೀಷಣನಿಂದಲೂ ಕೂಡಿ, ಆರುರೋಹ – ಆರೋಹಣ ಮಾಡಿದನು, ನಿಜಾಂ = ಸ್ವಕೀಯವಾದ, ಅಯೋಧ್ಯಾ = ಅಯೋಧ್ಯೆ, ಪುರೀಂಪ್ರತಿ = ಪಟ್ಟಣವನ್ನು ಕುರಿತು, ಆಶು = ಜಾಗ್ರತೆಯಾಗಿ, ಜಗಾಮ = ಹೊರಟನು, ಅಥ = ಅನಂತರ, ಪುರಃ = ಪೂರ್ವಭಾವಿಯಾಗಿ ಹೋಗುವದಕ್ಕಾಗಿ, ಹನೂಮಂತಂ = ಹನುಮಂತನನ್ನು, ನ್ಯಯೋಜಯತ್ = ಆಜ್ಞಾಪಿಸಿದನು.

ತಾತ್ಪರ್ಯ.—ಅನಂತರ ಶ್ರೀರಾಮನು ವಿಭೀಷಣನಿಂದ ಸಮರ್ಪಿಸಲ್ಪಟ್ಟ ಪುಷ್ಪಕ ವಿಮಾನವನ್ನು ಸಮಸ್ತ ವಾನರರಿಂದಲೂ ಮತ್ತು ವಿಭೀಷಣನಿಂದಲೂ ಸಹಿತನಾಗಿ ತನ್ನ ಸ್ವಗ್ರಾಮವಾದ ಅಯೋಧ್ಯಾ ಪಟ್ಟಣವನ್ನು ಕುರಿತು ಹೊರಟನು. ಮೊದಲೇ ಹೊರಡುವಂತೆ ಹನುಮಂತನನ್ನು ಆಜ್ಞಾಪಿಸಿದನು.

**ಶ್ಲೋಕ॥ ದದರ್ಶ ಚಾಸೌ ಭರತಂ ಹುತಾಶನಂ । ಪ್ರವೇಷ್ಟುಕಾಮಂ ಜಗದೀಶ್ವರಸ್ಯ ॥ ಅದರ್ಶನಾತ್ತಂ ವಿನಿವಾರ್ಯ ರಾಮಂ । ಸಮಾಗತಂ ಚಾಸ್ಯ ಶಶಂಸ ಮಾರುತಿಃ ॥ ೨೨೭ ॥**

ಅರ್ಥ.—ಅಸೌ – ಮುಂದಾಗಿ ಬಂದ ಹನುಮಂತನು, ಜಗದೀಶ್ವರಸ್ಯ = ಜಗತ್ಪ್ರಭುವಾದ ಶ್ರೀರಾಮನ, ಅದರ್ಶನಾತ್ = ಆ ದಿನದ ವಳಗಾಗಿ ದರ್ಶನವಿಲ್ಲದಿದ್ದರೆ, ಹುತಾಶನಂ = ಅಗ್ನಿಯನ್ನು, ಪ್ರವೇಷ್ಟುಕಾಮಂ = ಪ್ರವೇಶ ಮಾಡುತ್ತೇನೆಂದು ಪ್ರತಿಜ್ಞೆ ಮಾಡಿದ್ದ, ಭರತಂ = ಭರತನನ್ನು, ದದರ್ಶ = ನೋಡಿದನು, ತಂ = ಆ ಭರತನನ್ನು, ವಿನಿವಾರ್ಯ = ಅಗ್ನಿಪ್ರವೇಶ ಮಾಡಬೇಡವೆಂದು ತಡೆದು, ಅಸ್ಯ = ಭರತನಿಗೆ, ರಾಮಂ ಚ = ಶ್ರೀರಾಮದೇವರು, ಸಮಾಗತಂ – ಸಮೀಪದಲ್ಲಿಯೇ ಬರುತ್ತಿರುವರೆಂದು, ಶಶಂಸ = ಹೇಳಿದನು.

ತಾತ್ಪರ್ಯ.—ಮುಂದಾಗಿ ಕಳುಹಿಸಲ್ಪಟ್ಟ ಶ್ರೀ ಹನುಮಂತನು ಭರತನಿರತಕ್ಕ ಸ್ಥಳಕ್ಕೆ ಬಂದು ನೋಡುವಲ್ಲಿ ಭರತನು ಆ ದಿವಸ ಜಗತ್ಪ್ರಭುವಾದ ಶ್ರೀರಾಮನ ದರ್ಶನವಾಗದೇ ಇರುವ ಕಾರಣ ಪೂರ್ವದ ಪ್ರತಿಜ್ಞೇ ಪ್ರಕಾರ ಅಗ್ನಿಪ್ರವೇಶ ಮಾಡಲುದ್ಯುಕ್ತನಾಗಿದ್ದನು. ಹನುಮಂತನು ಅವನನ್ನು ಅಗ್ನಿಪ್ರವೇಶ ಕಾರ್ಯದಿಂದ ತಡೆದು ಶ್ರೀರಾಮನು ಸಮೀಪದಲ್ಲಿಯೇ ಬರುತ್ತಿರುವನೆಂಬುದಾಗಿ ಹೇಳಿದನು.

**ಶ್ಲೋಕ॥ ಶ್ರುತ್ವಾ ಪ್ರಮೋದೋರುಭರಃ ಸ ತೇನ । ಸಹೈವ ಪೌರ್ಯೈಃ ಸಹಿತಃ ಸಮಾತೃಕಃ ॥ ಶತ್ರುಘ್ನಯುಕ್ತೋಽಭಿಸಮೇತ್ಯ ರಾಘವಂ । ನನಾಮ ಬಾಷ್ಪಾಕುಲ ಲೋಚನಾನನಃ ॥ ೨೨೮ ॥**

ಅರ್ಥ.—ತೇನ – ಹನುಮಂತನಿಂದ, ಶ್ರುತ್ವಾ – ರಾಮನ ಆಗಮನವನ್ನು ಕೇಳಿ, ಪ್ರಮೋದೋರುಭರಃ = ಪ್ರಮೋದ = ಸಂತೋಷದ, ಉರುಭರಃ = ಮಹಾತಿಶಯವುಳ್ಳ, ಸಃ – ಆ ಭರತನು, ಪೌರ್ಯೈಃ = ಪುರಜನಗಳಿಂದ, ಸಹಃ = ಕೂಡಿಕೊಂಡು, ಸಮಾತೃಕಃ = ತಾಯಿಯರಿಂದಲೂ ಸಹಿತನಾಗಿ, ಶತ್ರುಘ್ನ ಯುಕ್ತಃ= ಶತ್ರುಘ್ನನಿಂದ ಕೂಡಿ, ರಾಘವಂ = ಶ್ರೀರಾಮನ, ಅಭಿಸಮೇತ್ಯ = ಎದುರಿಗೆ ಬಂದು, ಬಾಷ್ಪಾಕುಲಲೋಚನಾನನಃ ಸನ್ = ಬಾಷ್ಪ = ಆನಂದ ಬಾಷ್ಪದಿಂದ, ಅಕುಲ –

ಯಾವುದೋ ಅದನ್ನು ಚೆನ್ನಾಗಿ ಮಾಡಿದ್ದೀರಿ. ಇಷ್ಟೇವೆ ಸಕಲ ಸಜ್ಜನರೂ ಮಾಡಬೇಕಾದ ಕರ್ತವ್ಯವು.

**ಶ್ಲೋಕ॥ ಮುಕ್ತಿಪ್ರದಾನಾತ್ಪ್ರತಿ ಕರ್ತೃತಾಮೇ । ಸರ್ವಸ್ಯಚಾಥೋ ಭವತಾಂ ಭವೇತ ॥ ಹನೂಮತೋ ನಪ್ರತಿ ಕರ್ತೃತಾಸ್ಯಾ । ತ್ಸ್ವಭಾವ ಭಕ್ತಸ್ಯ ನಿತಾಪಥಂಮೇ ॥ ೨೩೨ ॥**

ಅರ್ಥ.-ಅಥೋ=ನೀವು ಮಾಡಿದ ಸೇವಾಕ್ಕೆ, ಭವತಾಂ=ನಿಮ್ಮಗಳ, ಸರ್ವಸ್ಯ - ಪೂಜಾಸೇವಾದಿಗಳು ಸಮಸ್ತಕ್ಕೂ, ಮೇ - ನನಗೆ, ಮುಕ್ತಿ ಪ್ರದಾನಾತ್ - ಮುಕ್ತಿಯನ್ನು ಕೊಡುವವರಿಂದ, ಪ್ರತಿಕರ್ತೃತಾ - ಪ್ರತ್ಯುಪಕಾರವು, ನಿತಾಪಥಂ = ಉಪಾಧಿರಹಿತವಾದದ್ದು, ಭವೇತ್ = ಆಗುತ್ತದೆ, ಸ್ವಭಾವ ಭಕ್ತಸ್ಯ = ಸ್ವಭಾವತಃ = ಸ್ವಾಭಾವಿಕವಾದ ಭಕ್ತಿಯುಳ್ಳ, ಮೇ = ನನ್ನ, ಹನೂಮತಃ = ಹನುಮಂತನಿಗೆ, ಪ್ರತಿಕರ್ತೃತಾ = ಪ್ರತ್ಯುಪಕಾರವು, ನಿತಾಪಥಂ = ಉಪಾಧಿರಹಿತವಾದದ್ದು, ನಸ್ಯಾತ್ = ಆಗುವದಿಲ್ಲವು.

ತಾತ್ಪರ್ಯ.—ನೀವುಗಳು ಈ ರೀತಿಯಾಗಿ ನನ್ನ ಆರ್ಚನೆಮಾಡಿದ್ದರಿಂದ ನಿಮ್ಮ ಸರ್ವರಿಗೂ ಮುಕ್ತಿಯನ್ನು ಕೊಡತಕ್ಕದ್ದೇ ನನಗೆ ಪ್ರತ್ಯುಪಕಾರ ಮಾಡಿದ್ದಾಗಿ ಆಗುತ್ತದೆ. ಯಾವ ಪುರುಷಾರ್ಥವನ್ನೂ ಅಪೇಕ್ಷಿಸದ, ಸ್ವಭಾವತಃ ನನ್ನ ಭಕ್ತನಾದ ಹನುಮಂತನಿಗೆ ಮುಕ್ತಿರೂಪವಾದ ಪ್ರತ್ಯುಪಕಾರವೂ ಸಹಸಾಲದೆಂದು ಶ್ರೀರಾಮನ ಅಭಿಪ್ರಾಯವು.

**ಶ್ಲೋಕ॥ ಮದ್ಭಕ್ತೌ ಜ್ಞಾನಪೂರ್ತಾ ವನುಪಧಿಕಬಲ ಪ್ರೋನ್ನತೌ ಸ್ಥೈರ್ಯ ಧೈರ್ಯ, । ಸ್ವಾಭಾವ್ಯಾಧಿಕ್ಯತೇಜಃ, ಸುಮತಿದಮ ಶಮೇಷ್ವಸ್ಯ ತುಲ್ಯೋ ನಕಶ್ಚಿತ್ ॥ ಶೇಷೋರುದ್ರಃ ಸುಪರ್ಣೋ, ಪ್ಯುರುಗುಣ ಸಮಿತೌ ನೋಸಹಸ್ರಾಂಶ ತುಲ್ಯಾ । ಅಸ್ಯೇತ್ಯಸ್ಮಾ ನ್ಮದೀಶಂ ಪದಮು ಹಮುಮುನಾ ಸಾರ್ಧಮೇವೋಪಭೋಕ್ಷ್ಯೇ ॥ ೨೩೩ ॥**

ಅರ್ಥ.—ಮದ್ಭಕ್ತೌ = ನನ್ನಲ್ಲಿ ಭಕ್ತಿ, ಜ್ಞಾನಪೂರ್ತೌ - ಸರ್ವವಿಷಯದಲ್ಲಿಯೂ, ಜ್ಞಾನಪೂರ್ಣತ್ವವೂ = (ಅನುಪಧಿಕಬಲ ಪ್ರೋನ್ನತೌ)= ಅನುಪಧಿಕ = ಸ್ವಾಭಾವಿಕವಾದ, ಬಲ = ಪರಾಕ್ರಮದ, ಪ್ರೋನ್ನತೌ - ಆಧಿಕ್ಯದಲ್ಲಿಯೂ, ಸ್ಥೈರ್ಯ = ಸ್ಥಿರತ್ವದಲ್ಲಿಯೂ, ಧೈರ್ಯ = ಧೈರ್ಯ

ರಹಿತವಾದ ಶ್ರೇಷ್ಟತ್ವದಲ್ಲಿಯೂ, ತೇಜಃ=ದೇಹಕಾಂತಿಯಲ್ಲಿಯೂ, ದಮ= ಇಂದ್ರಿಯ ನಿಗ್ರಹದಲ್ಲಿಯೂ, ಶಮೋ = ಶ್ರೀಹರಿಯಲ್ಲಿ ಅರ್ಪಿತವಾದ, ಬುದ್ಧಿಯಲ್ಲಿಯೂ, ಅಸ್ಯ - ಈ ಹನುಮಂತನಿಗೆ, ತುಲ್ಯಃ = ಸಮಾನರು, ಕಶ್ಚಿತ್ = ಯಾರೂ, ನ = ಇಲ್ಲವು. ಅಸ್ಯ = ಈ ಹನುಮಂತನಿಗೆ, ಶೇಷಃ = ಶೇಷದೇವರು, ರುದ್ರಃ = ರುದ್ರದೇವರು, ಸುಪರ್ಣೋಽಪಿ = ಗರುಡ ದೇವರೂ ಸಹ, ಉರುಗುಣಸಮಿತೌ = ಉರುಗುಣ = ಅತ್ಯುತ್ಕೃಷ್ಟವಾದ ಗುಣಗಳ, ಸಮಿತೌ - ಸಮೂಹದಲ್ಲಿ, ಸಹಸ್ರಾಂಶತುಲ್ಯಾಃ = ಸಹಸ್ರಾಂಶದಲ್ಲಿ, ಒಂದಂಶಕ್ಕೂ, ತುಲ್ಯಾಃ = ಸಮಾನರು, ನೋಭವಂತಿ = ಆಗುವುದಿಲ್ಲ. ಇತ್ಯಸ್ಮಾತ್ = ಈ ಕಾರಣದಿಂದ, ಅಹಂ - ನಾನು, ಮದೀಶಂ = ನನ್ನ ಸ್ವಾಮಿತ್ವವುಳ್ಳ, ಪದಂ = ಸತ್ಯಲೋಕ ಸ್ಥಾನವನ್ನು, ಅಮುನಾ = ಈ ಹನುಮಂತನಿಂದ, ಸಾರ್ಧಮೇವ - ಸಹಕಾರದಿಂದಲೇ (ಇವನ ಸಂಗಡಲೇ), ಭೋಕ್ಷ್ಯೇ = ಅನುಭೋಗಿಸುತ್ತೇನೆ, ಇತಿ = ಹೀಗೆಂದು, ಆಹ = ಹೇಳಿದನು.

ತಾತ್ಪರ್ಯ.—ನನ್ನಲ್ಲಿ ಭಕ್ತಿಮಾಡುವುದರಲ್ಲಿಯೂ, ಸರ್ವ ವಿಷಯದಲ್ಲಿಯೂ, ಪೂರ್ಣ ಜ್ಞಾನದಲ್ಲಿಯೂ ಶಸ್ತ್ರಾಸ್ತ್ರಗಳ ಉಪಾಧಿಗಳಿಂದ ರಹಿತವಾದ ಬಲ ಪರಾಕ್ರಮದಿಂದಲೂ, ಸ್ಥಿರತ್ವ, ಧಾರ್ಷ್ಟ್ಯತ್ವ, ಮತ್ತು ಸ್ವಾಭಾವಿಕತ್ವ ಇವುಗಳ ಆಧಿಕ್ಯವು, ಅನ್ಯಾವೇಶ ನಿಮಿತ್ತರಹಿತವಾದ ಶ್ರೇಷ್ಟತವೂ ಮತ್ತೂ ಶರೀರಕಾಂತಿ ಅಥವ ಸಾಮರ್ಥ್ಯದಲ್ಲಿಯೂ, ಮತ್ತು ಅವಧಾರಣ ಶಕ್ತಿಯುಳ್ಳ ಬುದ್ಧಿ ವಿಶೇಷದಲ್ಲಿಯೂ, ಇಂದ್ರಿಯ ನಿಗ್ರಹ, ಹರಿಯಲ್ಲಿ ನಿಷ್ಟವಾದ ಬುದ್ಧಿಯಿಂದಲೂ ಈ ಹನುಮಂತನಿಗೆ ಸಮಾನ ಯಾರೂ ಇಲ್ಲವು, ಮತ್ತು ಗರುಡ ಶೇಷ ರುದ್ರರೂ ಹನುಮಂತನ ಗುಣ ಸಮೂಹದಲ್ಲಿ ಸಾವಿರಾಂಶದಲ್ಲಿ ಒಂದಂಶಕ್ಕೂ ಸಮಾನರಲ್ಲ. ಆದಕಾರಣದಿಂದ ಈ ಹನುಮಂತನಿಗೆ ಉಪಾಧಿರಹಿತವಾದ ಮುಕ್ತಿಯೇ ನನ್ನ ಪ್ರತ್ಯುಪಕಾರವಲ್ಲವು. ಈ ಹನುಮಂತನು ನನ್ನ ಭಕ್ತರಲ್ಲಿ ಸರ್ವೋತ್ತಮನಾಗಿರುವ ಕಾರಣ ಅವನ ಸಹಿತವಾಗಿಯೇ ನನ್ನ ಸ್ವಾಮಿತ್ವವುಳ್ಳಸತ್ಯಲೋಕ ಪದವಿಯನ್ನು ಅನುಭವಿಸುತ್ತೇನೆ. ಹೀಗೆಂದರೆ ಬ್ರಹ್ಮಲೋಕಾಧಿಪತ್ಯವೇ ಸಹಭೋಜನವೆಂದು ಅಭಿಪ್ರಾಯವು.

**ಶ್ಲೋಕ॥ ಪೂರ್ವಂಜಿಗಾಯ ಭುವನಂ ದಶಕಂಧರೋಽಸಾ । ವಬ್ಜೋದ್ಭವಸ್ಯ ವರತೋ ನತು ತಂ ಕದಾಚಿತ್ ॥ ಕಶ್ಚಿಜ್ಜಿಗಾಯ ಪುರುಹೂತಸುತಃ ಕಪಿತ್ವಾ । ದ್ವಿಷ್ಣೋರ್ವರಾದಜಯದರ್ಜುನ ಏವ ಚೈನಂ ॥ ೨೩೪ ॥**

ಅರ್ಥ.—ಅಸೌ = ಈ, ದಶಕಂಧರಃ = ರಾವಣನು, ಅಬ್ಜೋದ್ಭವಸ್ಯ - ಬ್ರಹ್ಮದೇವರ, ವರತಃ = ವರದಿಂದ, ಭುವನಂ = ಮೂರು ಲೋಕವನ್ನೂ, ಜಿಗಾಯ = ಜಯಿಸಿದನು, ತಂ = ಆ ರಾವಣನನ್ನು, ಕಶ್ಚಿತ್ = ಯಾರೂನೂ, ಕದಾಚಿತ್ = ಯಾವಾಗಲೂ, ನಜಿಗಾಯ = ಜಯಿಸಲಿಲ್ಲವು, (ಆದರೆ) ಪುರುಹೂತಸುತಃ=ಇಂದ್ರಪುತ್ರನಾದ ವಾಲಿಯು, ಕಪಿತ್ವಾತ್ = ವಾನರ ಸ್ವರೂಪವುಳ್ಳವನಾದ್ದರಿಂದಲೂ, ಅರ್ಜುನಃ = ಕಾರ್ತವೀರ್ಯಾರ್ಜುನನು, ವಿಷ್ಣೋಃ = ಶ್ರೀ ವಿಷ್ಣುವಿನ (ದತ್ತಾತ್ರೇಯ ದೇವರ,) ವರಾದೇವ - ವರದಿಂದಲೂ, ಏನಂ- ಈ ರಾವಣನನ್ನು, ಅಜಯತ್ = ಗೆದ್ದನು

ತಾತ್ಪರ್ಯ.—ಶ್ರೀರಾಮನು ಪೂರ್ವೇತಿಹಾಸವನ್ನು ಹೇಳುತ್ತಾನೆ. ಏನೆಂದರೆ :— ಈ ರಾವಣನು ಪೂರ್ವದಲ್ಲಿ ಬ್ರಹ್ಮದೇವರ ವರದಿಂದ ಸಮಸ್ತ ಪ್ರಪಂಚವನ್ನೂ ಜಯಿಸಿದನು. ಇವನನ್ನು ಯಾರೂ ಯಾವಾಗಲೂ ಜಯಿಸಲಿಲ್ಲ. ಆದರೆ ವಾಲಿಯು ಕಪಿರೂಪುವುಳ್ಳವನಾದ್ದರಿಂದಲೂ, ಕಾರ್ತವೀರ್ಯಾರ್ಜುನನು ದತ್ತಾತ್ರೇಯದೇವರ ವರಪ್ರಸಾದದ ಬಲದಿಂದ ಈ ರಾವಣನನ್ನು ಜಯಿಸಿದರು.

**ಶ್ಲೋಕ॥ ದತ್ತೋ ವರೋ ನಮನುಜಾನ್ಪ್ರತಿವಾನರಾಂಶ್ಚ । ಧಾತ್ರಾಸ್ಯ ತೇನ ವಿಜಿತೋ ಯುಧಿವಾಲಿನೈಷಃ ॥ ಅಬ್ಜೋದ್ಭವಸ್ಯ ವರಮಾಶ್ಚ ಭಿಭೂಯ ರಕ್ಷೋ । ಜಿಗ್ಯೇತ್ಪಹಂ ರಣಮುಖೇ ಬಲಿಮಾಹ್ವಯಂತಂ ॥ ೨೩೫ ॥**

ಅರ್ಥ.— ಅಸ್ಯ=ಈ ರಾವಣನಿಗೆ, ಧಾತ್ರಾ-ಬ್ರಹ್ಮದೇವರಿಂದ, ಮನುಜಾನ್ಪ್ರತಿ = ಮನುಷ್ಯರನ್ನು ಕುರಿತು, ವಾನರಾನ್ಪ್ರತಿಶ್ಚ = ಕಪಿಗಳನ್ನು ಕುರಿತೂನು, ವರಃ= ಅಜೇಯ ವರವು, ನದತ್ತಃ - ಕೊಡಲ್ಪಡಲಿಲ್ಲವು. ತೇನ = ಆ ಕಾರಣದಿಂದ, ಏಷಃ=ಈ ರಾವಣನು, ಯುಧಿ - ಯುದ್ಧದಲ್ಲಿ, ವಾಲಿನಾ= ವಾಲಿಯಿಂದ, ವಿಜಿತಃ - ಗೆಲ್ಲಲ್ಪಟ್ಟನು. ಅಹಂತು = ನಾನಾದರೋ,

ರಣಮುಖೇ=ಯುದ್ಧರಂಗದಲ್ಲಿ, ಬಲಿಂ=ಬಲಿಚಕ್ರವರ್ತಿಯನ್ನು, ಆಸ್ವಯುಂತಂ=ಕರೆಯುತ್ತಿರುವ, ರಕ್ಷಃ-ರಾಕ್ಷಸನಾದ ರಾವಣನನ್ನು, ಅಬ್ಜೋದ್ಭವಸ್ಯ=ಕಮಲೋದ್ಭವನಾದ ಬ್ರಹ್ಮದೇವರ, ವರಂ=ವರಪ್ರದಾನವನ್ನು, ಅಭಿಭೂಯ-ನಿರಸನಮಾಡಿ, ಆಶು=ಶೀಘ್ರವಾಗಿ, ಜಿಗ್ಯೇ-ಜಯಿಸಿದೆನು, ಇತಿ =ಹೀಗೆಂದು, ರಾಮಃ=ರಾಮನು, ಆಹ-ಹೇಳಿದನು.

ತಾತ್ಪರ್ಯ.— ಪೂರ್ವದಲ್ಲಿ ಬ್ರಹ್ಮದೇವರು ರಾವಣನಿಗೆ ವರಪ್ರದಾನ ಮಾಡುವ ಕಾಲದಲ್ಲಿ ವಾನರರಿಂದಲೂ ಮನುಷ್ಯರಿಂದಲೂ ಅಜೇಯನಾಗಿರು ಎಂದು ವರವನ್ನು ಕೊಡಲಿಲ್ಲ. ಆದುದರಿಂದ ವಾಲಿಯು ಕಪಿಯಾದ್ದರಿಂದ ರಾವಣನನ್ನು ಗೆದ್ದನು. ಕಾರ್ತವೀರ್ಯಾರ್ಜುನನು ಶ್ರೀವಿಷ್ಣುವಿನಿಂದ ತನಗೆ ದತ್ತನಾದ ವರಪ್ರಸಾದದಿಂದಲೂ ಗೆದ್ದನು. ಬಲಿಚಕ್ರವರ್ತಿಯನ್ನು ಯುದ್ಧಕ್ಕೋಸ್ಕರ ಕರೆಯುತ್ತಲಿರುವ ರಾವಣನನ್ನು ಬ್ರಹ್ಮದೇವರ ವರವನ್ನು ನಿರಸನ (ತಿರಸ್ಕಾರ) ಮಾಡಿ ಜಯಿಸಿದೆನು. ಇದರಿಂದ ಶ್ರೀರಾಮನು ಬ್ರಹ್ಮದೇವರಿಗಿಂತಲೂ ಶ್ರೇಷ್ಠನಾದ್ದರಿಂದ ಅವರಿಂದಾದ ಬ್ರಹ್ಮದೇವರ ವರವನ್ನು ಮುರಿಯುವುದಕ್ಕೆ ಶಕ್ತನೆಂದು ತಿಳಿಯತಕ್ಕದ್ದು.

**ಶ್ಲೋಕ || ಬಲೇರ್ದ್ವಾರಸ್ಥೋಽಹಂ | ವರಮಸ್ಮೈ ಸಂಪ್ರದಾಯ ಪೂರ್ವಂತು||**
**ತೇನ ಮಯಾರಕ್ಷೋಽಸ್ತಂ | ಯೋಜನಮಯುತಂ ಪದಾಂಗುಲ್ಯಾ**
**||೨೩೬||**

ಅರ್ಥ.— ಪೂರ್ವಂ=ಪೂರ್ವದಲ್ಲಿ, ಅಸ್ಮೈ=ಈ ಬಲಿಚಕ್ರವರ್ತಿಗೆ, ವರಂ - ದ್ವಾರರಕ್ಷಕ ರೂಪವಾದ ವರವನ್ನು, ಸಂಪ್ರದಾಯ = ಕೊಟ್ಟು, ಬಲೇಃ=ಬಲಿಚಕ್ರವರ್ತಿಯ, ದ್ವಾರಸ್ಥಃ=ಗೃಹದ್ವಾರದಲ್ಲಿ ಇರುತ್ತಿದ್ದೆ. ಅಹಂ=ನಾನು, ತೇನ-ದ್ವಾರ ರಕ್ಷಕನಾಗಿದ್ದ ಕಾರಣದಿಂದ, ಮಯಾ=ನನ್ನಿಂದ, ರಕ್ಷಃ=ರಾಕ್ಷಸನಾದ ರಾವಣನು, ಪದಾಂಗುಳ್ಯಾ=ನನ್ನ ಪಾದದ ಕನಿಷ್ಠಾಂಗುಲಿಯಿಂದ, ಅಯುತಂಯೋಜನಂ-ಹತ್ತು ಸಹಸ್ರ ಯೋಜನದಷ್ಟು ದೂರದಲ್ಲಿ ಬಿಸಾಡಲ್ಪಟ್ಟನು.

ತಾತ್ಪರ್ಯ.— ಪೂರ್ವದಲ್ಲಿ ನಾನು ಬಲಿಚಕ್ರವರ್ತಿಗೆ ನಿನ್ನ ಗೃಹದ್ವಾರ ರಕ್ಷಕನಾಗಿರುತ್ತೇನೆಂಬ ವರವನ್ನು ಕೊಟ್ಟು ಅದೇ ಪ್ರಕಾರ ಅವನ

ಗೃಹದ್ವಾರರಕ್ಷಕನಾಗಿರತಕ್ಕ ಕಾಲದಲ್ಲಿ ಈ ರಾವಣನು ಬಲಿಚಕ್ರವರ್ತಿಯನ್ನು ಯುದ್ಧಕ್ಕೆ ಕರೆದನು, ನಾನು ದ್ವಾರ ರಕ್ಷಕನಾಗಿದ್ದುದರಿಂದ, ಆ ರಾವಣನನ್ನು ನಾನೇ ಜೈಸಿ ನನ್ನ ಪಾದದ ಕನಿಷ್ಠಾಂಗುಲಿಯಿಂದ ಹತ್ತು ಸಹಸ್ರ ಯೋಜನದಷ್ಟು ದೂರಕ್ಕೆ ಎಸೆದೆನು.

**ಶ್ಲೋಕ ॥ ಪುನಶ್ಚ ಯುದ್ಧಾಯ ಸಮಾಹ್ವಯಂತಂ । ನ್ಯಪಾತಯಂ ರಾವಣಮೇಕಮುಷ್ಟಿನಾ ॥ ಮಹಾಬಲೋಽಹಂ ಕಪಿಲಾಖ್ಯರೂಪ । ತ್ರಿಕೋಟಿರೂಪಃ ಪವನಶ್ಚ ಮೇ ಸುತಃ ॥೨೩೭॥**

ಅರ್ಥ.— ಕಪಿಲಾಖ್ಯರೂಪಃ-ಕಪಿಲ ಎಂದು ರೂಪವುಳ್ಳ, ಅಹಂ= ನಾನು, ಪುನಶ್ಚ–ಮತ್ತೊಂದು ವೇಳೆಯಲ್ಲಿ, ಬಲಿಂ=ಬಲಿಚಕ್ರವರ್ತಿಯನ್ನು ಆಹ್ವಯಂತಂ = ಯುದ್ಧಕ್ಕೆ ಕರೆಯುತ್ತಿದ್ದ, ರಾವಣಂ = ರಾವಣನನ್ನು, ಮಹಾಬಲಃ - ನಾನು ಅತ್ಯಂತ ಪರಾಕ್ರಮಿಯಾದ್ದರಿಂದಲೇನೆ, ಏಕಮುಷ್ಟಿನಾ=ಒಂದೇ ಮುಷ್ಟಿ ಪ್ರಹಾರದಿಂದ, ನ್ಯಪಾತಯಂ=ಕೆಡಹಿದೆನು (ಸೋಲಿಸಿದೆನು.) ಮಹಾಬಲಃ–ಅತ್ಯಂತ ಬಲವುಳ್ಳವನಾದ, ಮೇ-ನನ್ನ, ಸುತಃ= ಪುತ್ರನಾದ, ತ್ರಿಕೋಟಿರೂಪಃ = ಮೂರು ಕೋಟಿ ರೂಪವುಳ್ಳ, ಪವನಃ=ವಾಯುದೇವರೂನೂ, ಏನಂ– ಈ ರಾವಣನನ್ನು, ಅಜಯತ್=ಸೋಲಿಸಿದನು, ಇತಿ=ಹೀಗೆಂದು, ರಾಮಃ=ಶ್ರೀರಾಮರು, ಆಹ=ಹೇಳಿದರು.

ತಾತ್ಪರ್ಯ.—ಶ್ರೀರಾಮನು ಹೇಳುತ್ತಾನೆ. ಮತ್ತೊಂದುವೇಳೆ ಈ ರಾವಣನು ಬಲಿಚಕ್ರವರ್ತಿಯನ್ನು ಯುದ್ಧಕ್ಕಾಗಿ ಕರೆದನು, ಆಗ ಕಪಿಲ ರೂಪಿಯಾದ ಮಹಾ ಬಲಿಷ್ಟನಾದ ನಾನು ಆ ರಾವಣನನ್ನು ಒಂದೇ ಮುಷ್ಟಿಪ್ರಹಾರದಿಂದ ಬೀಳಿಸಿ ಸೋಲಿಸಿದೆನು. ವಾಲಿ ಮತ್ತು ಕಾರ್ತವೀರ್ಯಾರ್ಜುನಸರೋಪಾದಿಯಲ್ಲಿ, ವರಪ್ರಸಾದದಿಂದ ಅಲ್ಲವು, ನನ್ನ ಮಹಾ ಪರಾಕ್ರಮದಿಂದಲೇನೇ ಅವನನ್ನು ಸೋಲಿಸಿದೆನು. ಮತ್ತು ಕಪಿಲರೂಪಿಯಾದ, ನನ್ನ ಪುತ್ರನಾದ, ಮೂರುಕೋಟಿ ರೂಪಿಯಾದ, ವಾಯುದೇವರೂನೂ ಮಹಾ ಬಲವುಳ್ಳವನಾದ್ದರಿಂದಲೇನೇ ಈ ರಾವಣನನ್ನು ಸೋಲಿಸಿದನು ಎಂದು ಹೇಳಿದರು.

ಇಲ್ಲಿ ವಿಶೇಷ ವಿಷಯವೇನೆಂದರೆ.—ತ್ರಿಕೋಟಿ ರೂಪವುಳ್ಳ ವಾಯು ದೇವರು ಎಂದು ಉಕ್ತವಾಗಿದೆ. ಅದರಿಂದ ವಿಲಕ್ಷಣವಾದ ಅನೇಕ ರೂಪ ಪ್ರದರ್ಶನದಿಂದಲೇ ರಾವಣನನ್ನು ಜಯಿಸಿದನೆಂದು ಹೇಳಿದಂತಾಯಿತು ಈ ವಿಷಯದಲ್ಲಿ (ವಿಷ್ಣುಧರ್ಮೋತ್ತರದಲ್ಲಿ) ಉಕ್ತವಾಗಿದೆ.—ಹೇಗೆಂದರೆ.-

**ಶ್ಲೋಕ ॥ ಪ್ರವಿಶ್ಯಾ ಸದೃಶಸ್ತತ್ರ । ಸರ್ವಾಭರಣ ಭೂಷಿತಾನ್ ॥ ನಿತ್ಯೋತ್ಸವಾಂ ಛಾಂತಭಯಾ । ನ್ನಿಷ್ಕಳಾನ್ ಪಾವಕಪ್ರಭಾನ್ ॥ ಚತುರ್ಭುಜಾನ್ ಮಹಾರೂಪಾನ್ । ಶ್ರೀವತ್ಸಕೃತಲಾಂಛನಾನ್ ॥ ಏಕರೂಪಧರಾನ್ ಸರ್ವಾನ್ । ರಕ್ತಮಾಲ್ಯಾನುಲೇಪನಾನ್ ರಾಗದ್ವೇಷವಿನಿರ್ಮುಕ್ತಾನ್ । ಸರ್ವಶಕ್ತಾನ್ ಜಗತ್ಪ್ರಿಯಾನ್ ನೃತ್ಯೇನಗೀತವಾದ್ಯೇನ । ಸೇವಮಾನಾನ್ ಜನಾರ್ದನಂ ॥ ಮಾನುಷ್ಯ ಪೂಜನಂಕೃತ್ವಾ । ದೇವದೇವಸ್ಯ ಚಕ್ರಿಣಃ ॥ ಸಮೀಪಂ ಸಮುಸು ಪ್ರಾಪ್ತಾನ್ । ತಸ್ಯೈವ ಪರಮೇಷ್ಠಿನಃ ॥ ತಿಸ್ರಃಕೋಟ್ಯಸ್ತದಾತೇಷಾಂ । ದೃಷ್ಟ್ವಾಚ ರಜನಿಚರಃ । ಊರ್ಧ್ವ ರೋಮಾ ತತಸ್ತಸ್ಮಾ । ದ್ದೇಶಾದ್ದೇಶಮುಪಾಸರತ್ ॥**

ಅರ್ಥ.--ಕಪಿಲರೂಪಿಯಾದ ಶ್ರೀಪರಮಾತ್ಮನ ಪುತ್ರರಾದ ವಾಯು ದೇವರು ಚತುರ್ಭುಜಗಳಿಂದ ಯುಕ್ತವಾದ ಮೂರುಕೋಟಿ ಸಂಖ್ಯೆಯುಳ್ಳ ರೂಪವನ್ನು ತೆಗೆದುಕೊಂಡು ಮೇಲೆ ಹೇಳಲ್ಪಟ್ಟ ಲಕ್ಷಣಗಳುಳ್ಳವರಾಗಿ ಶ್ರೀ ಪರಮಾತ್ಮನ ಪೂಜಾಸೇವೆಗಳನ್ನು ಮಾಡುತ್ತಿದ್ದರು. ಇವರು ಬ್ರಹ್ಮದೇವರ ಸಮೀಪವನ್ನು ಕುರಿತು ಒಂದಾನೊಂದು ಕಾಲದಲ್ಲಿ ಹೋಗಿದ್ದರು. ಆ ಕಾಲದಲ್ಲಿ ಈ ರಾವಣನು ಆ ಬ್ರಹ್ಮದೇವರ ಸನ್ನಿಧಾನವನ್ನು ಅದೃಶ್ಯನಾಗಿ ಪ್ರವೇಶಮಾಡಿದ್ದನು. ಅಲ್ಲಿ ಚತುರ್ಭುಜಾದಿಗಳಿಂದ ಯುಕ್ತವಾದ ಮೂರು ಕೋಟಿ ಸಂಖ್ಯೆಯುಳ್ಳ ಕಪಿಲ ಪುತ್ರರಾದ ವಾಯುದೇವರ ವಿಲಕ್ಷಣವಾದ ರೂಪಗಳನ್ನು ನೋಡಿ ರಾವಣನು ಭಯಪಟ್ಟು ರೋಮಾಂಚಿತನಾಗಿ ಮೆಲ್ಲಮೆಲ್ಲಗೆ ಜರುಗಿಕೊಂಡು ಓಡಹೋದನು.

ಅವತಾರಿಕೆ.--ಈ ಶ್ಲೋಕದಲ್ಲಿ ನಾನು ಮತ್ತು ವಾಯುದೇವರು ಉಭಯತ್ರರೂ ಸ್ವರೂಪ ಬಲದಿಂದ ಜಯಶೀಲರು. ರುದ್ರದೇವರು ರಾವಣನ್ನು ಜಯಿಸುವುದಕ್ಕಾಗಿ ನನ್ನನ್ನು ವರ ಬೇಡಿ ಗೆದ್ದನೆಂದು ಶ್ರೀರಾಮರು ಹೇಳುತ್ತಾರೆಂದು ನಿರೂಪಿತವಾಗಿದೆ.

**ಶ್ಲೋಕ ॥ ಆವಾಂಸ್ವಶಕ್ತ್ಯಾ ಜಯಿನಾ ವಿತಿಸ್ಮ । ಶಿವೋ ವರಾನ್ಮೇ ಜಯದೇನಮೇವ ॥ ಜ್ಞಾತ್ವಾ ಸುರಾಜೇಯ ಮಿಮಂಹಿವವ್ರೇ । ಹರೋ ✱ ಯೇಯಾಹ ಮುಮುಂ ದಶಾನನಂ ॥೨೩॥**

ಅರ್ಥ.— ಇತಿಸ್ಮಹೇತೋಃ- ಈ ಕಾರಣದಿಂದ, ಆವಾಂ= ನಾವಿಬ್ಬರೂ, ಸ್ವಶಕ್ತ್ಯಾ=ಸ್ವರೂಪಬಲದಿಂದ, ಜಯಿನೌ=ರಾವಣನನ್ನು ಜಯಿಸಿದೆವು. ಹರಃ= ರುದ್ರದೇವರು, ಮೇ=ನನ್ನ, ವರಾದೇವ= ವರಪ್ರಸಾದದಿಂದಲೇ, ಏನಂ= ಈ ರಾವಣನನ್ನು, ಅಜಯತ್=ಗೆದ್ದನು. ಶಿವಃ=ರುದ್ರದೇವರು, ಇಮಂ- ಈ ರಾವಣನನ್ನು, ಸುರಾಜೇಯಂಹಿ=ಸುರಾ=ದೇವತೆಗಳಿಂದ ಅಜೇಯಂ=ಗೆಲ್ಲಲ್ಪಡತಕ್ಕವನಲ್ಲವೆಂದು, ಜ್ಞಾತ್ವಾ-ತಿಳಿದು, ಅಹಂ = ನಾನು, ಅಮುಂ- ಈ ಕೈಲಾಸಪರ್ವತವನ್ನು ಎತ್ತಲೆಳ್ಳಿಸಿದ, ದಶಾನನಂ- ದಶಮುಖನಾದ ರಾವಣನನ್ನು, ಜಯೇಯಂ = ಜಯಿಸುವನಾಗಬೇಕೆಂದು ವವ್ರೇ=ವರವನ್ನು ಪಡೆದನು. ಇತಿ= ಹೀಗೆಂದು, ರಾಮಃ- ಶ್ರೀರಾಮರು, ಆಹ= ಹೇಳಿದರು,

ತಾತ್ಪರ್ಯ.— ವಾಯುದೇವರೂ ನಾನೂ ಉಭಯತ್ರರೂ ಸ್ವಭಾವ ಬಲದಿಂದ ಜಯಶೀಲರಾಗಿದ್ದೇವೆ. ರುದ್ರದೇವರು ನನ್ನ ವರದ ಬಲದಿಂದ ಇವನನ್ನು ಗೆದ್ದನು. ರಾವಣನು ದೇವತೆಗಳಿಂದ ಗೆಲ್ಲಲಸಾಧ್ಯನೆಂದು ತಿಳಿದು ರುದ್ರದೇವರು ಕೈಲಾಸಪರ್ವತವನ್ನು ಕಿತ್ತು ಹಾಕಲುದ್ಯುಕ್ತನಾದ ರಾವಣನನ್ನು, ತಾನು ಜಯಿಸಬೇಕೆಂದು ನನ್ನಲ್ಲಿ ವರವನ್ನು ಪಡೆದು ಆ ವರದಿಂದ ಅವನನ್ನು ಗೆದ್ದನು. ಅಂದರೆ ರಾವಣನನ್ನು ಈ ಪ್ರಪಂಚದಲ್ಲಿ ವಾಲೀ ಕಾರ್ತವೀರ್ಯಾರ್ಜುನರು-ರುದ್ರದೇವರು ಇವರುಗಳು ಮಾತ್ರ ವರಪ್ರಸಾದಾದಿ ಉಪಾಧಿ ಬಲಗಳ ದೆಸೆಯಿಂದ ಗೆದ್ದರು. ನಾನೂ ಮತ್ತು ನನ್ನ ಪುತ್ರನಾದ ವಾಯುದೇವರೂ ಇಬ್ಬರೇ ಸ್ವಸ್ವರೂಪ ಭೂತವಾದ ಬಲದಿಂದ ಗೆದ್ದೆವೆಂದು ಹೇಳಿದನು.

**ಶ್ಲೋಕ || ಅತಃ ಸ್ವಭಾವಾಜ್ಜಯಿನಾವಹಂಚ | ವಾಯುಶ್ಚ ವಾಯುರ್ಹನುಮಾನ್ ಸಏಷಃ || ಅಮುಷ್ಯ ಹೇತೋಸ್ತು ಪುರಾಹಿವಾಯುನಾ | ಶಿವೇಂದ್ರ ಪೂರ್ವಾ ಅಪಿಕಾಪ್ಯವತ್ಕೃತಾಃ ||೨೩೯||**

ಅರ್ಥ.— ಅತಃ=ಆದ್ದರಿಂದ, ಸ್ವಭಾವಾತ್=ಸ್ವಭಾವ ಸಾಮರ್ಥ್ಯದಿಂದಲೇ, ಅಹಂಚ=ನಾನೂ, ವಾಯುಶ್ಚ=ವಾಯುದೇವರೂ, ಜಯಿನೌ- ಜಯಶಾಲಿಗಳು, ಏಷಃ= ಈ, ವಾಯುಃ-ವಾಯುದೇವರೇ, ಹನುಮಾಂಶ್ಚ =ಹನುಮಂತನು, ( ತಸ್ಮಾತ್) ಆದ್ದರಿಂದಲೇ ಈ ಹನುಮಂತನು ತನ್ನ

ಸ್ವಶಕ್ತಿಯಿಂದಲೇ ರಾವಣನನ್ನು ಸೋಲಿಸಿದನು. ಪುರಾ=ಈ ಹನುಮಂತನ ಉತ್ಪತ್ತಿಕಾಲದಲ್ಲಿ, ಅಮುಷ್ಯ = ಈ ಹನುಮಂತನ, ಹೇತೋಃ-ನಿಮಿತ್ತವಾಗಿಯೇ, ವಾಯುನಾ = ವಾಯುದೇವರಿಂದ, ಶಿವೇಂದ್ರಪೂರ್ವಾ ಅಪಿ-ರುದ್ರ ಇಂದ್ರ ಮೊದಲಾದ ದೇವತೆಗಳು, ಕಾಷ್ಠವತ್ಕೃತಾಃ=ಕಾಷ್ಠಪ್ರಾಯರಾಗಿ ಮಾಡಲ್ಪಟ್ಟರು.

ತಾತ್ಪರ್ಯ.—ಶ್ರೀರಾಮರು ಹೇಳುತ್ತಾರೆ:—ನಾನೂ ಮತ್ತು ವಾಯುದೇವರೂ, ವರಪ್ರಸಾದಗಳು ಮತ್ತು ಆವೇಶಗಳು ಮೊದಲಾದ ಉಪಾಧಿಗಳು ಇಲ್ಲದೇನೇ ಸ್ವಸ್ವರೂಪಭೂತವಾದ ಬಲದಿಂದ ರಾವಣನನ್ನು ಸೋಲಿಸಿದೆವು. ಆ ವಾಯುದೇವರೇ ಈ ಹನುಮಂತನು. ಈ ಹನುಮಂತನ ಉತ್ಪತ್ತಿಕಾಲದಲ್ಲಿ ಇವನ ನಿಮಿತ್ತವಾಗಿಯೇ ರುದ್ರ ಇಂದ್ರ ಮೊದಲಾದ ದೇವತೆಗಳು ಜಡೀಕೃತರಾಗಿ ಮಾಡಲ್ಪಟ್ಟರು.

ವಿಶೇಷಾಭಿಪ್ರಾಯ:—ಅಮುಷ್ಯಹೇತೋಃ ಎಂಬೋಣದರಿಂದ ಶ್ರೀರಾಮರು ವಿಷ್ಣುಧರ್ಮೋತ್ತರದಲ್ಲಿ ಹೇಳಲ್ಪಟ್ಟಿರುವ ಇತಿಹಾಸವನ್ನು ಹೇಳುತ್ತಾರೆ. ಹೇಗೆಂದರೆ.—

**ಶ್ಲೋಕ ॥ ತಂಪ್ರ ದುದ್ರಾವ ಭಕ್ಷಾರ್ಥೀ । ಸಶಕ್ರಂಕುಂಜರೋತ್ತಮಂ ॥ ಪ್ರಾಹರತ್ತ್ವರಯಾವಜ್ರಂ । ತತಸ್ತಸ್ಯ ಸುರಾಧಿಪಃ ॥ ಇತಿ ॥ ಕೃದ್ಧಂಚ ಜಗತಾಂ ವಾಯುಂ । ಸಾಂತ್ವಯಿತ್ವಾ ಪಿತಾಮಹ ಇತಿಚ ॥**

ಅಂದರೆ.—ಹನುಮಂತನು ಜನಿಸಿದ ಒಡನೆಯೇ ಇಂದ್ರನಿಂದ ಸಹಿತವಾದ ದಿಗ್ಗಜಗಳನ್ನು ಭಕ್ಷಣಮಾಡಲು ಎತ್ನಿಸಿದರು. ಆಗ ಇಂದ್ರನು ಇವನನ್ನು ವಜ್ರಾಯುಧದಿಂದ ಪ್ರಹಾರಮಾಡಿದನು, ಇವನು ವಾಯ್ವಾವತಾರನಾದ್ದರಿಂದ ಅತಿ ಕೃದ್ಧನಾಗಿ ಇಂದ್ರನೇ ಮೊದಲಾದ ದೇವತೆಗಳನ್ನು ನಾಶಮಾಡಲುದ್ಯುಕ್ತನಾದನು. ಆಗ ಬ್ರಹ್ಮದೇವರು ವಾಯುದೇವರನ್ನು ಶಾಂತಪಡಿಸಿದರು.

**ಶ್ಲೋಕ ॥ ಅಥೋ ಹನೂರ್ಮಾ ಪದಮೇತು ಧಾತುರ್ಮದಾಜ್ಞಯಾ ಸೃಷ್ಟ್ಯವನಾದಿ ಕರ್ಮ ॥ ಮೋಕ್ಷಂಚ ಲೋಕಸ್ಯ ಸದೈವಕುರ್ವ । ನ್ಮುಕ್ತೈಶ್ಚ ಮುಕ್ತಾನ್ಸುಖಯನ್ ಪ್ರವರ್ತತಾಂ ॥೨೪೦॥**

ಅರ್ಥ.-ಅಥೋ-ಶೇಷ ರುದ್ರಾದಿ ದೇವತೆಗಳಿಗಿಂತ ಶ್ರೇಷ್ಠನಾಗಿರುವು ದರಿಂದ, ಹನೂಮಾನ್=ಈ ಹನುಮಂತನು, ಮದಾಜ್ಞಯಾ=ನನ್ನ ಆಜ್ಞೆ ಯಿಂದ, ಧಾತುಃಪದಂ=ಸತ್ಯಲೋಕಾಧಿಪತ್ಯವನ್ನು (ಬ್ರಹ್ಮಪದವಿಯನ್ನು) ಯೇತು-ಹೊಂದಲಿ, ಮದಾಜ್ಞಯಾ-ನನ್ನ ಅಪ್ಪಣೆಯಿಂದ (ಅಲ್ಲಿ ಇದ್ದು ಕೊಂಡು) ಲೋಕಸ್ಯ-ಪ್ರಪಂಚದ, ಸೃಷ್ಟ್ಯವನಾದಿ=ಸೃಷ್ಟಿ = ಉತ್ಪತ್ತಿ, ಅವನ-ಪಾಲನ, ಆದಿ-ಮೊದಲಾದ ಕಾರ್ಯಗಳನ್ನು ಮಾಡಲಿ. ಮೋಕ್ಷಂ ಚ-ಮೋಕ್ಷ ಪರ್ಯಂತರವಾಗಿ, ಕರ್ಮ=ಯಾವಯಾವ ಕರ್ಮಗಳುಂಟೋ ಅಂತಹ ಕರ್ಮಗಳನ್ನು, ಸದೈವ=ಸರ್ವಕಾಲದಲ್ಲಿಯೂ, ಕುರ್ವನ್=ಮಾ ಡಿಕೊಂಡವನಾಗಿ, ಮುಕ್ತಶ್ಚ = ಸ್ವಯಂ ನಿಯತ ಕಾಲದಲ್ಲಿ ಮುಕ್ತನಾಗಿ, ಮುಕ್ತಾನ್=ಮುಕ್ತರಾದವರನ್ನು, ಸುಖಯನ್ಸನ್=ಅವರವರ ಯೋಗ್ಯತಾ ನುಸಾರವಾಗಿ ಸ್ವರೂಪಾನಂದಗಳಿಂದ ಸುಖಪಡಿಸಿಕೊಂಡು, ಪ್ರವರ್ತತಾಂ -ಪ್ರವೃತ್ತನಾಗಿರಲಿ, ಇತಿ = ಹೀಗೆಂದು, ರಾಮಃ - ಶ್ರೀರಾಮರು, ಆಹ- ಹೇಳಿದರು.

ತಾತ್ಪರ್ಯ.—ಶ್ರೀರಾಮನು ಹೇಳುತ್ತಾನೆ.-ಹನುಮಂತನು ಶೇಷಾ ದಿಗಳಿಗಿಂತ ಉತ್ತಮನಾಗಿರುವುದರಿಂದಲೂ ವಾಯುದೇವರೇ ಇವನಾಗಿ ರುವುದರಿಂದಲೂ ಈ ಹನುಮಂತನು ಬ್ರಹ್ಮಪದವಿಯಾದ ಸತ್ಯಲೋಕಾಧಿ ಪತ್ಯವನ್ನು ಹೊಂದಲಿ. ನನ್ನ ಆಜ್ಞೆಯಿಂದ ಆ ಸತ್ಯಲೋಕಾಧಿಪತ್ಯದಲ್ಲಿ ದ್ದುಕೊಂಡು ಲೋಕದ ಸೃಷ್ಟಿ, ಸ್ಥಿತಿ ಸಂಹಾರಾದಿ ಕರ್ಮಗಳು ಮುಕ್ತಿ ಪರ್ಯಂತರವಾಗಿ ಯಾವಯಾವ ಕರ್ಮಗಳುಂಟೋ ಅಂತಹ ಕರ್ಮಗಳನ್ನು ಮಾಡಿಕೊಂಡು ಸ್ವಯಂ ನಿಯಮಿತಕಾಲದಲ್ಲಿ ಮುಕ್ತಿಯನ್ನು ಹೊಂದಿ ಅಲ್ಲಿ ಮುಕ್ತರಾದವರನ್ನು ಅವರವರ ಯೋಗ್ಯತಾನುಗುಣವಾಗಿ ಸ್ವರೂಪಾ ನಂದಗಳಿಂದ ಸುಖಪಡಿಸಿಕೊಂಡು ಪ್ರವರ್ತಕನಾಗಿರಲಿ.

ಅವತಾರಿಕೆ.--ಈ ಶ್ಲೋಕದಲ್ಲಿ ಸಹಭೋಗವನ್ನು ಕೊಟ್ಟನೆಂದು ಪುರಾಣಗಳಲ್ಲಿ ಉಕ್ತವಾಗಿದೆ, ಸಹಭೋಗವೆಂದರೆ ಯಾವುದೆಂಬ ವಿಷಯ ವನ್ನು ಶ್ರೀರಾಮನೇ ವಿಶದಪಡಿಸುತ್ತಾನೆ.—

**ಶ್ಲೋಕ॥ ಭೋಗಾಶ್ಚಯೇ ಯಾನಿಚ ಕರ್ಮಜಾತಾ। ನ್ಯನಾದ್ಯನಂತಾನಿ ಮ ಮೇಹಸಂತಿ ॥ ಮದಾಜ್ಞಯಾತಾನ್ಯಖಿಲಾನಿ ಸಂತಿ। ಧಾತುಃ ಪದೇ**

ಅರ್ಥ.--ಮಮ=ನನಗೆ, ಯೇಭೋಗಾಃ = ಯಾವಯಾವ ಭೋಗಗಳೂ, ಅನಾದ್ಯನಂತಾನಿ=ಅನಾದಿ=ಪುರಾತನಗಳಾದ, ಅನಂತಾನಿ-ಅಂತ್ಯರಹಿತ( ಉತ್ಪತ್ತಿ ನಾಶರಹಿತಗಳಾದ ) ಯಾನಿ=ಯಾವಯಾವ, ಕರ್ಮಜಾತಾನಿ=ಕರ್ಮಗಳ ಸಮೂಹಗಳು, ಸಂತಿ=ಆವೆಯೋ, ತಾನಿ=ಆ, ಅಖಿಲಾನಿ=ಆ ಸಮಸ್ತವೂ, ಮದಾಜ್ಞಯಾ=ನನ್ನ ಆಜ್ಞೆಯಿಂದ, ಧಾತುಃಪದೇ= ಬ್ರಹ್ಮಪದವಾದ ಸತ್ಯಲೋಕದಲ್ಲಿ, ಸಂತಿ-ಇವೆ, ತತ್=ಆ ಕಾರಣದಿಂದ (ಆ ಧಾತುಃಪದವೇ) ಸಹಭೋಗ=ಸಹಭೋಗ ಪದವಿಯೆಂದು, ನಾಮ= ಹೆಸರುಳ್ಳದ್ದಾಯಿತು, ಇತಿ=ಹೀಗೆಂದು ಶ್ರೀರಾಮನು ಹೇಳಿದನು.

ಅವತಾರಿಕೆ.--ಈ ಶ್ಲೋಕದಲ್ಲಿ ರಾಮರು ಹನುಮಂತನಿಗೆ ನನ್ನ ಈ ರೀತಿಯಾದ ಸಹಭೋಗವನ್ನು ಸರ್ವ ಕಲ್ಪಗಳಲ್ಲಿಯೂ ಕೊಟ್ಟಿದ್ದೇನೆಂದು ಹೇಳಿದರು. ಆ ಮಾತನ್ನು ಕೇಳಿ ಹನುಮಂತನು ರಾಮರನ್ನು ಕುರಿತು ಕೆಲವು ವಾಕ್ಯಗಳನ್ನು ಹೇಳಿದನೆಂದು ನಿರೂಪಿತವಾಗಿದೆ--

**ಶ್ಲೋಕ ॥ ಏತಾದೃಶಂ ಮೇ ಸಹಭೋಜನಂತೇ । ಮಯಾಪ್ರದತ್ತಂ ಹನುಮಸ್ಸದೈವ ॥ ಇತೀರಿತಸ್ತಂ ಹನುಮಾನ್ಪ್ರಣಮ್ಯ । ಜಗಾದವಾಕ್ಯಂ ಸ್ಥಿರಭಕ್ತಿ ನಮ್ರಃ**

ಅರ್ಥ.—ಹೇ ಹನುಮನ್=ಎಲೈ ಹನುಮಂತನೆ, ಏತಾದೃಶಂ = ಈ ರೀತಿಯಾದ, ಮೇ=ನನ್ನ, ಸಹಭೋಜನಂ = ಸತ್ಯಲೋಕಾಧಿಪತ್ಯರೂಪವಾದ ಸಹಭೋಜನವು, ಮಯಾ = ನನ್ನಿಂದ, ತೇ = ನಿನಗೆ, ಸದೈವ-ಸರ್ವ ಕಲ್ಪಗಳಲ್ಲಿಯೂ, ಪ್ರದತ್ತಂ=ಕೊಡಲ್ಪಟ್ಟಿದೆ. ಇತಿ=ಹೀಗೆಂದು, ಈರಿತಃ- ಹೇಳಲ್ಪಟ್ಟ, ಹನೂಮಾನ್=ಹನುಮಂತನು, ತಂ=ಶ್ರೀರಾಮನನ್ನು ಕುರಿತು, ಪ್ರಣಮ್ಯ=ನಮಸ್ಕಾರಮಾಡಿ, ಸ್ಥಿರಭಕ್ತಿನಮ್ರಃಸನ್=ಸ್ಥಿರ= ದೃಢವಾದ, ಭಕ್ತಿ-ಭಕ್ತಿಯಿಂದ, ನಮ್ರಃಸನ್ – ಬೊಗ್ಗಿದ ಶರೀರವುಳ್ಳವನಾಗಿ, ವಾಕ್ಯಃ-ವಕ್ಷ್ಯಮಾಣ ವಾಕ್ಯವನ್ನು, ಜಗಾದ-ಹೇಳಿದನು.

ತಾತ್ಪರ್ಯ.--ಶ್ರೀರಾಮನು ಪಟ್ಟಾಭಿಷಿಕ್ತನಾಗಿ ತನ್ನ ಸನ್ನಿಧಾನದಲ್ಲಿದ್ದ ಸಮಸ್ತ ಜನರನ್ನೂ ಕುರಿತು ಮಾತನಾಡಿದನಂತರ ಶ್ರೀಹನುಮಂತನನ್ನು ಕುರಿತು ಹೇಳುತ್ತಾನೆ. ಹೇ ಹನುಮಂತನೆ ! ಏತಾದೃಶವಾದ ಸತ್ಯಲೋಕಾಧಿಪತ್ಯರೂಪವಾದ ನನ್ನ ಸಹ ಭೋಜನವನ್ನು ನಿನಗೆ ಸರ್ವಕಲ್ಪ

ದಲ್ಲಿಯೂ ಕೊಟ್ಟಿದ್ದೇನೆ. ಹೀಗೆಂದು ಹೇಳಲ್ಪಟ್ಟ ಹನುಮಂತನು ನಿಶ್ಚಲ ಭಕ್ತಿಯಿಂದ ಬೊಗ್ಗಿದ ಶರೀರವುಳ್ಳವನಾಗಿ ಶ್ರೀರಾಮಚಂದ್ರನನ್ನು ನಮಸ್ಕರಿಸಿ ವಕ್ಷ್ಯಮಾಣವಾಕ್ಯಗಳನ್ನು ಹೇಳಿದನು.

ಅವತಾರಿಕೆ.—243ನೆ ಶ್ಲೋಕದಾರಂಭ್ಯ 247ನೆ ಶ್ಲೋಕದವರಿವಿಗೆ 5 ಶ್ಲೋಕಗಳಲ್ಲಿ ಹನುಮಂತನು ಶ್ರೀರಾಮನನ್ನು ಕುರಿತು ಕೆಲವು ವಾಕ್ಯಗಳನ್ನು ಹೇಳಿ ಪ್ರಾರ್ಥಿಸಿಕೊಂಡನೆಂದು ನಿರೂಪಿತವಾಗಿದೆ.—

**ಶ್ಲೋಕ || ಕೋನ್ವೀಶತೇ ಪಾದಸರೋಜಭಾಜಾಂ | ಸುದುರ್ಲಭೋರ್ಥೇಷು ಚತುರ್ಷ್ವಪೀಹ || ತಥಾಪಿನಾಹಂ ಪ್ರವೃಣೋಮಿ ಭೂಮನ್ | ಭವತ್ಪದಾಂಭೋಜನಿಷೇವಣಾದೃತೇ ||೨೪೩||**

ಅರ್ಥ.—ಹೇ ಈಶ=ಮಹಾಸ್ವಾಮಿಯೇ, ತೇ-ನಿನ್ನ, ಪಾದಸರೋಜಭಾಜಾಂ=ಪಾದಕಮಲಗಳ ಸೇವಕರಿಗೆ, ಇಹ=ಈ ಸಂಸಾರದಲ್ಲಿ, ಚತುರ್ಷ್ವಪಿಅರ್ಥೇಷು-ನಾಲ್ಕು ಪುರುಷಾರ್ಥಗಳಲ್ಲಿ, ಸುದುರ್ಲಭಃ=ದುರ್ಲಭವಾದದ್ದು, ಕೋನು = ಯಾವುದು ಇದೆ ? ( ಯಾವುದೂ ಇಲ್ಲವು. ) ತಥಾಪಿ=ಹಾಗಿದ್ದಾಗ್ಯೂ, ಹೇ ಭೂಮನ್=ಸಕಲ ಗುಣಪರಿಪೂರ್ಣನಾದ ಶ್ರೀರಾಮಚಂದ್ರನೇ, ಅಹಂ=ನಾನು, ಭವತ್ಪದಾಂಭೋಜ = ನಿನ್ನ ಪಾದಕಮಲಗಳ, ನಿಷೇವಣಾತ್-ಸೇವೆಗಿಂತಲೂ, ಋತೇ-ಬೇರೆ ಯಾವುವನ್ನೂ, ನಪ್ರವೃಣೋಮಿ=ಯಾಚಿಸುವದಿಲ್ಲ. ಎಂದು ಹನುಮಂತನು ಶ್ರೀರಾಮಚಂದ್ರನಿಗೆ ಹೇಳಿದನು.

**ಶ್ಲೋಕ || ತ್ವಮೇವ ಸಾಕ್ಷಾತ್ಪರಮಃ ಸ್ವತಂತ್ರ | ಸ್ತ್ವಮೇವಸಾಕ್ಷಾದಖಿಲೋರುಶಕ್ತಿಃ || ತ್ವಮೇವಚಾಗಣ್ಯ ಗುಣಾರ್ಣವಃಸದಾ | ರಮಾವಿರಿಂಚಾದಿಭಿ ರಪ್ಯಶೇಷೈಃ ||೨೪೪||**

ಅರ್ಥ.-(ಹೇ ಭೂಮನ್=ಸಕಲಗುಣಪರಿಪೂರ್ಣನಾದ ಸ್ವಾಮಿಯೇ ) ರಮಾ=ಲಕ್ಷ್ಮೀದೇವಿಯು, ವಿರಿಂಚಿ-ಬ್ರಹ್ಮದೇವರು ಇವರೇ, ಆದಿಭಿಃ-ಮೊದಲಾದ, ಅಶೇಷೈಃ=ಸಮಸ್ತರಿಗಿಂತಲೂ, ತ್ವಮೇವ=ನೀನೇವೇ, ಸಾಕ್ಷಾತ್-ಮುಖ್ಯವಾಗಿ, ಪರಮಃ-ಉತ್ತಮನು, ಸ್ವತಂತ್ರಃ=ಸ್ವತಂತ್ರನಾದವನು, ತ್ವಮೇವ=ನೀನೇವೇ, ಸಾಕ್ಷಾತ್=ಮುಖ್ಯವಾಗಿ, ಅಖಿಲ=ಸಮಸ್ತಪ್ರಪಂಚದಲ್ಲಿಯೂ, ಉರು = ಉತ್ಕೃಷ್ಟವಾದ, ಶಕ್ತಿಃ = ಶಕ್ತಿ ಪರಾಕ್ರಮ

ಉಳ್ಳವನು, ಸದಾ=ಸರ್ವ ಕಾಲದಲ್ಲಿಯೂ, ಅಗಣ್ಯ=ಎಣಿಸಲಶಕ್ಯವಾದ, ಗುಣ=ಗುಣಗಳಿಗೆ, ಅರ್ಣವಃ=ಸಮುದ್ರ ಸ್ಥಾನಾಪನ್ನನಾದವನು, ತ್ವಮೇವ=ನೀನೇವೆ.

**ಶ್ಲೋಕ || ಸಮೇತ್ಯ ಸರ್ವೇಽಪಿ ಸದಾವದಂತೋಽಪ್ಯನಂತಕಾಲಾಚ್ಚ ನವೈ ಸಮಾಪ್ನುಯುಃ || ಗುಣಾಂಸ್ತ್ವದೀಯಾನ್ಪರಿಪೂರ್ಣ ಸೌಖ್ಯ | ಜ್ಞಾನಾತ್ಮಕಸ್ತ್ವಂಹಿ ಸದಾತಿಶುದ್ಧಃ ||೨೪೫||**

ಅರ್ಥ.—ತ್ವಂ=ನೀನು, ಹೇ ಪರಿಪೂರ್ಣ ಸೌಖ್ಯಜ್ಞಾನಾತ್ಮಕ=ಸಂಪೂರ್ಣವಾದ ಸೌಖ್ಯ ಜ್ಞಾನಾತ್ಮಕನು, ಸದಾ = ಸರ್ವಕಾಲದಲ್ಲಿಯೂ, ಅತಿಶುದ್ಧಃ=ಅತ್ಯಂತ ಪವಿತ್ರಸ್ವರೂಪನು, ತ್ವದೀಯಾನ್ = ನಿನ್ನ ಸಂಬಂಧವಾದ, ಗುಣಾನ್—ಸದ್ಗುಣಗಳನ್ನು, ಸರ್ವೇ=ಸಮಸ್ತರಾದ ಲಕ್ಷ್ಮೀ ಬ್ರಹ್ಮದೇವರು ಮೊದಲಾದವರು, ಸಮೇತ್ಯ=ಕೇರಿ. ಸದಾಽಪಿ=ಸರ್ವಕಾಲದಲ್ಲಿಯೂ, ವದಂತೋಽಪಿ—ಕಥನಮಾಡುತ್ತಿದ್ದಾಗ್ಯೂ, ಅನಂತಕಾಲಾಚ್ಚ — ಅಪಾರಕಾಲವಾದರೂ, ವೈಃ = ನಿಶ್ಚಯವಾಗಿಯೂ, ನಸಮಾಪ್ನುಯುಃ—ಪೂರ್ತಿಮಾಡಲಾರರು.

**ಶ್ಲೋಕ || ಯಸ್ತೇಕಥಾ ಸೇವಕ ಏವಸರ್ವದಾ | ಸದಾರತಿಸ್ತ್ವಯ್ಯಚಲೈಕಭಕ್ತಿಃ || ಸಜೀವಮಾನೋನಪರಃ ಕಥಂಚಿ | ತ್ತಜ್ಜೀವನಂ ಮೇಸ್ತ್ವಧಿಕಂ ಸಮಸ್ತಾತ್ ||೨೪೬||**

ಅರ್ಥ.—ಯಃ—ಯಾವ ಪುರುಷನು, ಸದಾ—ಸರ್ವಕಾಲದಲ್ಲಿಯೂ, ತೇ=ನಿನ್ನ, ಕಥಾಸೇವಕಏವ-ಗುಣಕರ್ಮ ಪ್ರಶಂಸೆಯ ಕಥೆಯನ್ನು, ಶ್ರವಣಮಾಡುತ್ತಾ, ತ್ವಯಿ=ನಿನ್ನಲ್ಲಿ, ಸದಾ—ಸರ್ವಕಾಲದಲ್ಲಿಯೂ, ರತಿಃ=ಆಸಕ್ತಿಯುಳ್ಳವನಾಗಿಯೂ, ತ್ವಯಿ = ನಿನ್ನಲ್ಲಿ, ಅಚಲೈಕಭಕ್ತಿಃ = ನಿಶ್ಚಲವಾದ ಮುಖ್ಯ ಭಕ್ತಿಯುಳ್ಳವನಾಗಿರುತ್ತಾನೆಯೋ, ಸಃ — ಅಂತಹ ಪುರುಷನು, ಜೀವಮಾನಏವ=ಜೀವಿಸಿದ್ದಕ್ಕೆ ಫಲವುಳ್ಳವನು. ಪರಃ = ಇತರರು ಇವುಗಳ್ಯಾವದೂ ಇಲ್ಲದ ಪುರುಷನು, ನಕಥಂಚಿತ್ — ಜೀವಿಸಿದ್ದಕ್ಕೆ ಫಲವಿಲ್ಲದವನಾಗಿರುತ್ತಾನೆ. ( ಅಂಥ ಜೀವಿಯು ಮೃತಪ್ರಾಯನು ) ತತ್—ಆದಕಾರಣ, ಮೇ=ನನ್ನ, ಜೀವನಂ = ಜೀವನವು ( ಒದುಕುವಿಕೆಯು) ಸಮಸ್ತಾತ್=ಎಲ್ಲಾ ಸಫಲ ಜೀವನಕ್ಕಿಂತಲೂ, ಅಧಿಕಂ=ಅತಿಶಯವಾದ ಸಫಲಕಾರಿಯಾದದ್ದು, ಅಸ್ತು—ಆಗಲಿ, ಇತಿ=ಈ ರೀತಿಯಾಗಿ, ಹನೂಮಾನ್=ಹನುಮಂತನು, ಜಗಾದ=ಹೇಳಿದನು.

**ಶ್ಲೋಕ ॥ ಪ್ರವರ್ಧತಾಂ ಭಕ್ತಿರಲಂ ಕ್ಷಣೇಕ್ಷಣೇ । ತ್ವಯೀಶಮೇಹ್ರಾಸ ವಿವರ್ಜಿತಾ ಸದಾ ॥ ಅನುಗ್ರಹಸ್ತೇ ಮಯಿಚೈವಮೇವ । ನಿರೌಷಧೌ ತೌಮಮಸರ್ವಕಾಮಃ ॥೨೪೭॥**

ಅರ್ಥ.— ಹೇ ಈಶ=ಸರ್ವ ಸ್ವಾಮಿಯೇ, ತ್ವಯಿ = ನಿನ್ನಲ್ಲಿ, ಮೇ= ನನಗೆ, ಸದಾ–ಸರ್ವಕಾಲದಲ್ಲಿಯೂ, ಹ್ರಾಸವಿವರ್ಜಿತಾ = ಕಡಿಮೆಯಾಗದೇ ಕ್ಷಯಕಾರಿಗಳಾದ ಕಾಮ ಕ್ರೋಧಾದಿ ದೋಷಗಳಿಂದ ರಹಿತವಾದ ಭಕ್ತಿಯು, ಅಲಂ=ಹೆಚ್ಚಾಗಿ, ಪ್ರವರ್ಧತಾಂ=ಅಭಿವೃದ್ಧಿಯಾಗಲಿ, ಮಯಿ–ನನ್ನಲ್ಲಿ, ತೇ–ನಿನ್ನ, ಅನುಗ್ರಹಃ=ಅನುಗ್ರಹವು, ಏವಮೇವ=ಇದೇ ರೀತಿಯಾಗಿ, ನಿರೋಷಧೌ=ನಿರ್ಬೀಜಗಳಾದ, ತೌ=ಆ ಭಕ್ತಿ ಮತ್ತು ಅನುಗ್ರಹಗಳೇ, ಮಮ=ನನಗೆ, ಸರ್ವಕಾಮಃ=ಸಮಸ್ತ ಪುರುಷಾರ್ಥಗಳು.

**೨೪೩, ೨೪೪, ೨೪೫, ೨೪೬, ೨೪೭ನೇ ಶ್ಲೋಕಗಳ ತಾತ್ಪರ್ಯವು.**

ತಾತ್ಪರ್ಯ.— ಪೂರ್ವ (೨೪೨ನೇ) ಶ್ಲೋಕದಲ್ಲಿ ಶ್ರೀರಾಮದೇವರು ಹನುಮಂತನನ್ನು ಕುರಿತು, ಹೇ! ಹನೂಮಾನ್ ಇಂತಹ ಮಹತ್ತಾದ ಸತ್ಯಲೋಕಾಧಿಪತ್ಯರೂಪವಾದ ಸಹಭೋಜನವನ್ನು ಸರ್ವಕಲ್ಪದಲ್ಲಿಯೂ ನಿನಗೆ ಕೊಟ್ಟಿದ್ದೇನೆ ಎಂದು ಹೇಳಿದರು. ಈ ವಾಕ್ಯವನ್ನು ಕೇಳಿ ನಿಷ್ಫಲವಾದ ಭಕ್ತಿಯಿಂದ ಬೊಗ್ಗಿಸಿದ ಶರೀರವುಳ್ಳವನಾಗಿ ಶ್ರೀರಾಮರಿಗೆ ನಮಸ್ಕಾರಮಾಡಿ ಅವರನ್ನು ಕುರಿತು ಪ್ರಾರ್ಥನಾರೂಪವಾಗಿ ಹನುಮಂತನು ಮಾತನಾಡುತ್ತಾನೆ.

ಮಹಾಸ್ವಾಮಿ ! ನಿನ್ನ ಪಾದಕಮಲಗಳ ಸೇವಕರಾದವರಿಗೆ ಮೋಕ್ಷಾದಿ ಚತುರ್ವಿಧ ಪುರುಷಾರ್ಥಗಳಲ್ಲಿ ಯಾವದು ತಾನೆ ಪ್ರಯಾಸ ಸಾಧ್ಯವಾದೀತು ? ಸಮಸ್ತ ಪುರುಷಾರ್ಥಗಳೂ ಸಿದ್ಧವಾಗಿಯೇ ಇವೆ. ಹಾಗಿದ್ದಾಗ್ಯೂ ನಿನ್ನ ಪಾದಕಮಲಗಳ ಸೇವಾಕಾರ್ಯಹ ವಿನಹಾ ಇನ್ಯಾವದನ್ನೂ ನಾನು ಪ್ರಾರ್ಥಿಸುವುದಿಲ್ಲವು, ಎಂದು ಹೇಳಿದನು. ॥೨೪೩॥

ಹೇ ಈಶ ! ನೀನೇ ಮುಖ್ಯವಾಗಿ ಸರ್ವೋತ್ತಮನು, ಸ್ವತಂತ್ರನು, ಸಮಸ್ತ ವಿಷಯದಲ್ಲಿಯೂ ಅತ್ಯಂತ ಶಕ್ತಿಯುಳ್ಳವನು. ಮತ್ತು ಶ್ರೀಲಕ್ಷ್ಮೀ ಬ್ರಹ್ಮನೇ ಮೊದಲಾದವರಿಂದ ಗಣನಮಾಡಲು ಅಸಾಧ್ಯವಾದ ಗುಣಗಳಿಗೆ ಸಮುದ್ರಸ್ಥಾನೀಯನಾದವನು ನೀನೆ, ಗುಣಗಳಿಂದ ಸಮುದ್ರನು ಎಂಬ

ವಾಕ್ಯವನ್ನು ವಿಶದಪಡಿಸಿ ಹೇಳುತ್ತಾರೆ.) ರಮಾದೇವಿಯೇ ಮೊದಲಾದ ಸಮಸ್ತ ದೇವತೆಗಳೂ ಶೇರಿ ಅನಂತಾನಂತ ಕಾಲದಿಂದಲೂ ಕಥನಮಾಡುತ್ತಾ ಇದ್ದಾಗ್ಯೂ ಹೇ ಸಂಪೂರ್ಣವಾದ ಸ್ವರೂಪಜ್ಞಾನಾನಂದಾತ್ಮಕ! ನಿನ್ನ ಗುಣಗಳನ್ನು ಕಥನಮಾಡಿ ಪೂರ್ಣತ್ವವನ್ನು ಹೊಂದಲಿಲ್ಲವು. ನೀನಾದರೋ ಸರ್ವಕಾಲದಲ್ಲಿಯೂ ಅತ್ಯಂತ ಶುದ್ಧಾಂತಃ ಕರಣವುಳ್ಳವನು, ನೀನೇ ಮುಖ್ಯವಾಗಿ ಸರ್ವದಾ ಸ್ವಸ್ವರೂಪವಾದ ಮತ್ತು ಪರಿಪೂರ್ಣವಾದ ಸೌಖ್ಯ ಮತ್ತು ಜ್ಞಾನ ಸ್ವರೂಪನಾದವನು. ||೨೪೪|| ||೨೪೫||

ಆದ್ದರಿಂದ ಯಾವ ಪುರುಷನು ಸರ್ವಕಾಲದಲ್ಲಿಯೂ ನಿನ್ನ ಗುಣ ಕರ್ಮ ಪ್ರಶಂಶನ ರೂಪವಾದ ಕಥೆಯನ್ನು ಕೇಳುತ್ತಾ ಸರ್ವದಾ ನಿನ್ನಲ್ಲಿ ಪ್ರೀತಿಯುಳ್ಳವನಾಗಿ ( ಸ್ಥಿರವಾದ ) ಭಕ್ತಿಯುಳ್ಳವನೋ ಅಂತಹವನ ಜೀವಮಾನವೇ ಜೀವಯುಕ್ತವಾದದ್ದು, ಜೀವಿಸಿದಕ್ಕೆ ಫಲ, ನಿನ್ನ ಕಥಾಶ್ರವಣ ಭಕ್ತ್ಯಾದಿ ರಹಿತನಾದ ಪುರುಷನು ಜೀವಿಸಿಕೊಂಡಿದ್ದಾಗ್ಯೂ ಜೀವನ್ಮೃತನೆನ್ನಿಸಿಕೊಳ್ಳುತ್ತಾನೆ. ಆದ್ದರಿಂದ ಮಹಾಸ್ವಾಮಿ ! ಜೀವನ ಸಾಫಲ್ಯಯುಕ್ತರಾದ ಸಮಸ್ತ ಮಹಾ ಪುರುಷರಿಗಿಂತಲೂ ನನ್ನ ಜೀವನವು ಅಧಿಕಸಾಫಲ್ಯವುಳ್ಳದ್ದಾಗಲಿ ಎಂದು ರಾಮರನ್ನು ಕುರಿತು ಪ್ರಾರ್ಥಿಸಿದನು. ||೨೪೬||

ಮತ್ತೂ ಪ್ರಾರ್ಥಿಸುತ್ತಾನೆ. ಹೇ ಈಶ, ಪ್ರಭುವೇ ! ಹ್ರಾಸಗಳನ್ನುಂಟುಮಾಡತಕ್ಕ ಕಾಮ ಕ್ರೋಧ ಮೊದಲಾದ ದೋಷಗಳಿಂದ ರಹಿತವಾದ ನನಗೆ ನಿನ್ನಲ್ಲಿರತಕ್ಕ ಭಕ್ತಿಯು ನಾನು ಮುಕ್ತನಾಗುವಪರಿಯಂತರವೂ ಪ್ರತಿಕ್ಷಣದಲ್ಲಿಯೂ ನನ್ನ ಯೋಗ್ಯತಾನುಸಾರ ಪರಿಪೂರ್ಣವುಳ್ಳದ್ದಾಗಿ ಅಭಿವೃದ್ಧಿ ಹೊಂದಲಿ. ಇದೇ ರೀತಿಯಾದ ನಿನ್ನ ಅನುಗ್ರಹವು ನನ್ನಲ್ಲಿ ಅಭಿವೃದ್ಧಿಯಾಗಲಿ. ಇಂತಹ ಉಪಾಧಿರಹಿತಗಳಾದ ನನ್ನ ಭಕ್ತಿ ಮತ್ತು ನಿನ್ನ ಅನುಗ್ರಹಗಳೇ ನನಗೆ ಸಮಸ್ತ ಪುರುಷಾರ್ಥಗಳು. ಎಂಬುದಾಗಿ ಶ್ರೀಹನುಮಂತನು ಶ್ರೀರಾಮರನ್ನು ಕುರಿತು ಗುಣಕಥನಪೂರ್ವಕವಾಗಿ ಪ್ರಾರ್ಥಿಸಿದನು.

**ಶ್ಲೋಕ || ಇತೀರಿತಸ್ತಸ್ಯ ದದೌಸತದ್ವಯಂ | ಪದಂವಿಧಾತುಃ ಸಕಲಂಚ ಶೋಭನಂ || ಸಮಾಶ್ಲಿಷಚ್ಚೈನ ಮಥಾರ್ದಯಾಧಿಯಾ | ಯಥೋಚಿತಂ ಸರ್ವಜನಾನ ಪೂಜಯತ್** ||೨೪೮||

ಅರ್ಥ.—ಇತಿ=ಈ ಪ್ರಕಾರವಾಗಿ, ಈರಿತಃ=ಹೇಳುತ್ತಿರುವ, ತಸ್ಯ–ಆ ಹನುಮಂತನಿಗೆ, ಸಃ=ಶ್ರೀರಾಮಚಂದ್ರನು, ತದ್ವಯಂ=ಹನುಮಂತ

ನಿಂದ ಪ್ರಾರ್ಥಿಸಲ್ಪಟ್ಟ ಭಕ್ತಿ ಮತ್ತು ಅನುಗ್ರಹಗಳನ್ನೂ, ವಿಧಾತುಃ=ಬ್ರಹ್ಮ ದೇವರ, ಪದಂ-ಪದವಿಯಾದ ಸತ್ಯಲೋಕಾಧಿಪತ್ಯವನ್ನೂ, ಸಕಲಂ=ಸಮಸ್ತವಾದ, ಶೋಭನಂಚ=ಮಂಗಳರೂಪವಾದ ಭೋಗಾದಿಗಳನ್ನೂ ಸಹ, ದದೌ=ಅನುಗ್ರಹಮಾಡಿದನು. ಏನಂ=ಈ ಹನುಮಂತನನ್ನು, ಆರ್ದ್ರಯಾ-ಪ್ರೀತಿಪೂರ್ವಕವಾದ, ಧಿಯಾ=ಮನಸ್ಸಿನಿಂದ, ಸಮಾಶ್ಲಿಷತ್=ಆಲಿಂಗನ ಮಾಡಿದನು. ಅಥ=ಅನಂತರ, ಸರ್ವಜನಾನ್=ಆ ಸಂಭ್ರಮಕಾಲಕ್ಕೆ ಬಂದಿದ್ದ ಮಿಕ್ಕ ಜನರನ್ನು, ಯಥೋಚಿತಂ=ಅವರವರ ಯೋಗ್ಯತಾನುಸಾರವಾಗಿ, ಅಪೂಜಯತ್=ಮರ್ಯಾದೆ ಮಾಡಿದನು.

ತಾತ್ಪರ್ಯ--ಈ ರೀತಿಯಾಗಿ ಹನುಮಂತನು ಸ್ತುತಿಸಿ ಭಕ್ತ್ಯನುಗ್ರಹಗಳನ್ನು ಯಾಚಿಸಿಕೊಂಡನಂತರ ಶ್ರೀರಾಮನು ಅವನಿಗೆ ತನ್ನಲ್ಲಿ ದೃಢವಾದ ಭಕ್ತಿಯನ್ನೂ ಅವನಮೇಲೆ ತನ್ನನುಗ್ರಹವನ್ನೂ ಬ್ರಹ್ಮಪದವಾದ ಸತ್ಯಲೋಕಾಧಿಪತ್ಯವನ್ನೂ ಸಮಸ್ತ ಮಂಗಳಕರವಾದ ಭೋಗಗಳನ್ನೂ ಕೊಟ್ಟು ಪ್ರೀತಿಪೂರ್ವಕವಾದ ಮನಸ್ಸಿನಿಂದ ಆಲಿಂಗನ ಮಾಡಿದನು. ಅನಂತರ ಅಲ್ಲಿ ಪಟ್ಟಾಭಿಷೇಕ ಮಹೋತ್ಸವದಲ್ಲಿ ನೆರೆದಿದ್ದ ವಾನರಾದಿಗಳನ್ನೂ ಪುರನಿವಾಸಿಗಳನ್ನೂ ಅವರವರ ಯೋಗ್ಯತಾನುಸಾರ ವಸ್ತ್ರಾಭರಣ ಭೂಷಣಗಳಿಂದ ಸನ್ಮಾನಿಸಿ ಸಂತೋಷಪಡಿಸಿದನು.

ಇತಿ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯ ವಿರಚಿತೇ
ಶ್ರೀಮನ್ಮಹಾಭಾರತ ತಾತ್ಪರ್ಯ ನಿರ್ಣಯೇ ಶ್ರೀ
ರಾಮಚರಿತೇ ಯುದ್ಧಕಾಂಡ ಕಥಾನಿರೂಪಣಂ
ನಾಮ ಅಷ್ಟಮೋಧ್ಯಾಯಃ ಸಮಾಪ್ತಃ ||

ಈ ಪ್ರಕಾರವಾಗಿ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯ ವಿರಚಿತವಾದ ಶ್ರೀಮನ್ಮಹಾಭಾರತ ತಾತ್ಪರ್ಯನಿರ್ಣಯವೆಂಬ ಗ್ರಂಥದಲ್ಲಿ ಶ್ರೀರಾಮಚರಿತ್ರೆಯಲ್ಲಿ ಯುದ್ಧಕಾಂಡ ಕಥಾನಿರೂಪಕರೂಪವಾದ (ಅಷ್ಟಮ) ಎಂಟನೆಯ ಅಧ್ಯಾಯವು ಉಪರಮವಾಯಿತು.

ಶ್ರೀಸೀತಾಲಕ್ಷ್ಮಣ ಭರತ ಶತೃಘ್ನ ಹನುಮತ್ಸಮೇತ
ಶ್ರೀರಾಮಚಂದ್ರಃ ಪ್ರಿಯತಾಮ್.
|| ಶ್ರೀಕೃಷ್ಣಾರ್ಪಣಮಸ್ತು ||

## ೯ನೇ ಅಧ್ಯಾಯ.

## ಉತ್ತರಕಾಂಡ ಕಥಾ ಪ್ರಾರಂಭ.

ಈ ಮೊದಲು ಎಂಟನೇ ಅಧ್ಯಾಯದಲ್ಲಿ ಯುದ್ಧಕಾಂಡ ಕಥಾ ನಿರೂಪಣಮಾಡಿ ಈ ಒಂಭತ್ತನೇ ಅಧ್ಯಾಯದಲ್ಲಿ ಉತ್ತರಕಾಂಡ ಕಥಾ ನಿರೂಪಣೆಮಾಡುತ್ತಾರೆ.

ಅವತಾರಿಕೆ.— ಈ ಶ್ಲೋಕದಲ್ಲಿ ಶ್ರೀರಾಮರು ಲಕ್ಷ್ಮಣರನ್ನು ಕುರಿತು ನೀನು ಯುವರಾಜನಾಗಿರು ಎಂದು ಹೇಳುತ್ತಾರೆ.—

**ಶ್ಲೋಕ ॥ ಅಥಾಪ್ತರಾಜ್ಯೋ ಭಗವಾನ್ ಸಲಕ್ಷ್ಮಣಂ । ಜಗಾದರಾಜಾ ತರುಣೋ ಭವಾಶು ॥ ಇತೀರಿತ ಸ್ತ್ವಾಹ ಸಲಕ್ಷ್ಮಣೋಗುರುಂ । ಭವತ್ಪದಾಬ್ಜಾನ್ನಪರಂವೃಣೋಮ್ಯಹಂ ॥೧॥**

ಅರ್ಥ.— ಅಥ=ಶ್ರೀರಾಮರು ಪಟ್ಟಾಭಿಷಿಕ್ತರಾಗಿ ಸರ್ವರನ್ನೂ ಮರ್ಯಾದೆ ಮಾಡಿದನಂತರ, ಆಪ್ತ=ಹೊಂದಲ್ಪಟ್ಟ, ರಾಜ್ಯಃ=ರಾಜ್ಯವುಳ್ಳ, ಸಭಗವಾನ್ - ಪೂಜ್ಯರಾದ ಶ್ರೀರಾಮರು, ಲಕ್ಷ್ಮಣಂ = ಲಕ್ಷ್ಮಣರನ್ನು ಕುರಿತು, ತ್ವಂ - ನೀನು, ಆಶು - ಶೀಘ್ರವಾಗಿ, ತರುಣೋರಾಜಾ - ಯುವರಾಜನು, ಭವ - ಆಗು, ಇತಿ=ಹೀಗೆಂದು, ಈರಿತಃ= ಹೇಳಲ್ಪಟ್ಟ, ಸಲಕ್ಷ್ಮಣಃ=ಆ ಲಕ್ಷ್ಮಣರು, ಗುರುಂ=ಗುರುಗಳಾಗಿಯೂ ಹಿರಿಯರಾಗಿಯೂ ಇರುವ ರಾಮರನ್ನು ಕುರಿತು, ಭವತ್ಪದಾಬ್ಜಾತ್ = ನಿನ್ನ ಪಾದಾರವಿಂದ ಸೇವೆಗಿಂತಲೂ, ಪರಂ=ಇತರವಾದ ಯಾವದನ್ನೂ, ಅಹಂ-ನಾನು, ನವೃಣೋಮಿ=ಅಪೇಕ್ಷಿಸುವದಿಲ್ಲ. ಇತಿ=ಹೀಗೆಂದು, ಆಹ=ಹೇಳಿದರು.

ತಾತ್ಪರ್ಯ.— ಶ್ರೀರಾಮರು ಪಟ್ಟಾಭಿಷಿಕ್ತರಾಗಿ ಅಲ್ಲಿ ನೆರೆದಿದ್ದ ಸಮಸ್ತರನ್ನೂ ಅವರವರ ಯೋಗ್ಯತಾನುಗುಣವಾಗಿ ಮರ್ಯಾದಿಸಿದನಂತರ ಲಕ್ಷ್ಮಣರನ್ನು ಕುರಿತು ನೀನು ನನ್ನ ರಾಜ್ಯದಲ್ಲಿ ಯುವರಾಜನಾಗಿರು ಎಂದು ಹೇಳಿದರು. ಅದಕ್ಕೆ ಶ್ರೀಲಕ್ಷ್ಮಣರು ತಮಗೆ ಜ್ಯೇಷ್ಠರಾಗಿಯೂ ಗುರುಗಳಾಗಿಯೂ ಇರುವ ಶ್ರೀರಾಮರನ್ನು ಕುರಿತು, ನಾನು ನಿಮ್ಮ ಪಾದಕಮಲಗಳ ಸೇವೆ ವಿನಹ ಮತ್ತಾವ ವಿಧವಾದ ವಿಷಯ ಸೇವನೆಗಳನ್ನೂ ಅಪೇಕ್ಷಿಸುವುದಿಲ್ಲವೆಂದು ಹೇಳಿದರು.

**ಶ್ಲೋಕ ॥ ನಮಾಂ ಭವತ್ಪಾದ ನಿಷೇವಣೈಕ । ಸ್ಪೃಹಂತದನ್ಯತ್ರ ನಿಯೋಕ್ತುಮರ್ಹಸಿ॥ ನಹೀದೃಶಃಕಶ್ಚಿದನುಗ್ರಹಃಕ್ವಚಿ । ತ್ತದೇವಮೇದೇಹಿ ತತಃಸದೈವ ॥೨॥**

ಅರ್ಥ.—ಭವತ್ಪಾದ-ನಿಮ್ಮ ಪಾದಗಳ, ನಿಷೇವಣ=ಸೇವೆಯಲ್ಲಿಯೇ ಏಕಸ್ಪೃಹಂ-ಮುಖ್ಯವಾದ ಆಸಕ್ತಿಯುಳ್ಳ, ಮಾಂ=ನನ್ನನ್ನು, ತದನ್ಯತ್ರ= ಬೇರೆ ವಿಷಯದಲ್ಲಿ, ನಿಯೋಕ್ತುಂ=ನೇಮಿಸುವದು, ನಾರ್ಹಸಿ – ಬೇಡ, ಕ್ವಚಿತ್-ಯಾವಾಗಲೂ, ಈದೃಶಃ=ನಿನ್ನ ಪಾದಸೇವಾರೂಪವಾದ ಅನುಗ್ರಹಕ್ಕೆ ಸರಿಯಾದದ್ದು, ಕಶ್ಚಿತ್ – ಯಾವ ಅನುಗ್ರಹವೂ, ನಾಸ್ತಿ = ಇಲ್ಲ. ತತಃ=ಆದುದರಿಂದ, ತದೇವ=ಆ ನಿನ್ನ ಪಾದಸೇವಾರೂಪವಾದ ಅನುಗ್ರಹವೇ, ಸದಾ=ಸರ್ವಕಾಲದಲ್ಲಿಯೂ, ಮೇ=ನನಗೆ=ದೇಹಿ=ಕೊಡು.

ತಾತ್ಪರ್ಯ.—ಹೇ ! ಸ್ವಾಮಿ ! ನಿನ್ನ ಪಾದಕಮಲ ಸೇವೆಯಲ್ಲಿಯೇ ಮುಖ್ಯವಾಗಿ ಇಚ್ಛೆಯುಳ್ಳ ನನ್ನನ್ನು ಇತರ ಯಾವ ವಿಷಯದಲ್ಲಿಯೂ ನೇಮಿಸಬೇಡ. ನನಗೆ ನಿನ್ನ ಪಾದಸೇವಾರೂಪವಾದ ಅನುಗ್ರಹಕ್ಕಿಂತ ಇನ್ನಾವುದೂ ಇಲ್ಲ. ಅದೇ ನನಗೆ ಶ್ರೇಷ್ಠವಾದ ಅನುಗ್ರಹವು. ಆದಕಾರಣ ನಿನ್ನ ಪಾದಕಮಲ ಸೇವಾ ರೂಪದ ಅನುಗ್ರಹವನ್ನೇ ಸರ್ವಕಾಲದಲ್ಲಿಯೂ ಅಂದರೆ ಈ ಸಂಸಾರದಲ್ಲಿಯೂ ಮುಕ್ತಿಯಲ್ಲಿಯೂ ಸಹಾ ಪಾಲಿಸು.

**ಶ್ಲೋಕ ॥ ಇತೀರಿತಸ್ತಸ್ಯ ತದೇವದತ್ವಾ । ದೃಢಂ ಸಮಾಶ್ಲಿಷ್ಯಚ ರಾಘವಃ ಪ್ರಭುಃ ॥ ಸಯೌವರಾಜ್ಯೇ ಭರತಂ ನಿಧಾಯ । ಜುಗೋಪ ಲೋಕಾನಖಿಲಾನ್ ಸ್ವಧರ್ಮಕಾನ್ ॥೩॥**

ಅರ್ಥ.—ಇತಿ=ಈ ಪ್ರಕಾರವಾಗಿ, ಈರಿತಃ = ಹೇಳಿಸಿಕೊಳ್ಳಲ್ಪಟ್ಟ, ಪ್ರಭುಃ=ಸ್ವಾಮಿಯಾದ, ರಾಘವಃ = ಶ್ರೀರಾಮಚಂದ್ರದೇವರು, ತಸ್ಯ-ಲಕ್ಷ್ಮಣರಿಗೆ, ತದೇವ-ತಮ್ಮ ಪಾದಕಮಲ ಸೇವಾರೂಪವಾದ ಅನುಗ್ರಹವನ್ನೇ, ದತ್ವಾ=ಕೊಟ್ಟು, ತಂ= ಲಕ್ಷ್ಮಣರನ್ನು, ದೃಢಂ – ಘಟ್ಟಿಯಾಗಿ, ಆಶ್ಲಿಷ್ಯಚ = ಆಲಿಂಗನಮಾಡಿ, ಸಃ = ಆ ಶ್ರೀರಾಮರು, ಯೌವರಾಜ್ಯೇ= ಯುವರಾಜ್ಯದಲ್ಲಿ ( ಪದವಿಯಲ್ಲಿ ) ಭರತಂ = ಭರತನನ್ನು, ನಿಧಾಯ= ನೇಮಿಸಿ, ಸ್ವಧರ್ಮಕಾನ್-ತಮ್ಮ ತಮ್ಮ ವರ್ಣಾಶ್ರಮೋಚಿತ ಧರ್ಮನಿರತರಾದ, ಅಖಿಲಾನ್=ಸಮಸ್ತರಾದ, ಲೋಕಾನ್=ಪ್ರಜೆಗಳನ್ನೂ, ಜುಗೋಪ =ಸಂರಕ್ಷಣೆ ಮಾಡಿದರು.

ತಾತ್ಪರ್ಯ.--ಶ್ರೀರಾಮರು ಲಕ್ಷ್ಮಣರಿಗೆ ತಮ್ಮ ಪಾದಸೇವಾ ರೂಪವಾದ ಅನುಗ್ರಹಕೊಟ್ಟು ಆಲಿಂಗನ ಮಾಡಿದರು. ಅನಂತರ ಭರತ ನಿಗೆ ಯುವರಾಜಪದವಿಯನ್ನು ಕೊಟ್ಟು ತಮ್ಮ ರಾಜ್ಯದಲ್ಲಿ ವರ್ಣಾಶ್ರಮೋ ಚಿತ ಧರ್ಮನಿರತರಾದ ಪ್ರಜೆಗಳನ್ನು ರಕ್ಷಣೆಮಾಡಿದರೆಂದು ತಾತ್ಪರ್ಯ.

**ಶ್ಲೋಕ || ಪ್ರಶಾಸತೀಶೇ ಪೃಥಿವೀ ಬಭೂವ | ವಿರಿಂಚಲೋಕಸ್ಯ ಸಮಾಗು ಣೋನ್ನತೌ || ಜನೋಖಿಲೋ ವಿಷ್ಣುಪರೋಬಭೂವ | ನಧರ್ಮ ಹಾನಿಶ್ಚ ಬಭೂವಕಸ್ಯಚಿತ್ ||೪||**

ಅರ್ಥ.-ಈಶೇ=ಸರ್ವೇಶ್ವರರಾದ ಶ್ರೀರಾಮಚಂದ್ರದೇವರು, ಪ್ರಶಾಸ ತಿ=ರಾಜ್ಯವಾಳುತ್ತಿರುವಾಗ, ಪೃಥಿವೀ=ಭೂಲೋಕವು, ಗುಣೋನ್ನತೌ= ಗುಣ=ವಿಷ್ಣು ಭಕ್ತಿಯೇ ಮೊದಲಾದ ಸದ್ಗುಣಗಳ, ಉನ್ನತೌ=ಆಧಿಕ್ಯದಲ್ಲಿ ವಿರಿಂಚಲೋಕಸ್ಯ-ಬ್ರಹ್ಮಲೋಕಕ್ಕೆ, ಸಮಾ=ಸದೃಶವಾದದ್ದು, ಬಭೂವ= ಆಗಿತ್ತು, ಅಖಿಲಃ = ಸಮಸ್ತವಾದ, ಜನಃ - ಪ್ರಜೆಗಳೂ, ವಿಷ್ಣುಪರಃ= ವಿಷ್ಣು ಭಕ್ತಿಯುಳ್ಳವರಾಗಿ, ಬಭೂವ-ಆಗಿದ್ದರು. ಕಸ್ಯಚಿತ್-ಯಾರಿಗೂ ಧರ್ಮಹಾನಿಶ್ಚ = ಸ್ವವರ್ಣಾಶ್ರಮೋಚಿತಾನುಷ್ಠಾನಹಾನಿಯು, ನಬಭೂವ= ಉಂಟಾಗಲಿಲ್ಲವು.

ತಾತ್ಪರ್ಯ.--ಶ್ರೀರಾಮಚಂದ್ರನು ರಾಜ್ಯಭಾರನಡಿಸುತ್ತಿರಲಾಗಿ ಈ ಲೋಕವು ವಿಷ್ಣುಭಕ್ತಿಯೇ ಮೊದಲಾದ ಅನೇಕ ಸದ್ಗುಣಗಳ ಉತ್ಕರ್ಷ ನಾದಿಗಳ ವಿಷಯದಲ್ಲಿ ಬ್ರಹ್ಮಲೋಕಕ್ಕೆ ಸಮಾನವಾಗಿದ್ದಿತು. ಗುಣಗಳ ಉತ್ಕರ್ಷ ಅಂದರೆ ಏನೆಂಬುವ ವಿಷಯವನ್ನು ನಿರೂಪಣಮಾಡುತ್ತಾರೆ.- ರಾಮರಾಜ್ಯದಲ್ಲಿ ಪ್ರಜೆಗಳು ಶ್ರೀವಿಷ್ಣುವೇ ಸರ್ವೋತ್ತಮನೆಂದು ದೃಢವಾದ ನಿಶ್ಚಯವುಳ್ಳವರಾಗಿದ್ದರು. ಮತ್ತು ಯಾವ ಪ್ರಜೆಗೂ ಸ್ವವರ್ಣಾಶ್ರಮಕ್ಕೆ ಯೋಗ್ಯವಾದ ಧರ್ಮಗಳಿಗೆ ಹಾನಿ ಉಂಟಾಗಲಿಲ್ಲವೆಂದು ಅಭಿಪ್ರಾಯವು.

**ಶ್ಲೋಕ || ಗುಣೈಶ್ಚ ಸರ್ವೈರುದಿತಾಶ್ಚ ಸರ್ವೇ | ಯಥಾಯಥಾಯೋಗ್ಯತ ಯೋಚ್ಚನೀಚಾಃ || ಸಮಸ್ತರೋಗಾದಿಭಿರುಜ್ಝಿತಾಶ್ಚ | ಸರ್ವೇಸ ಹಸ್ರಾಯುಷ ಊರ್ಜಿತಾಧನೈಃ ||೫||**

ಅರ್ಥ.--ಸರ್ವೇ=ಸಮಸ್ತರೂ, ಯಥಾಯಥಾಯೋಗ್ಯತಯಾ= ತಮ್ಮ ತಮ್ಮ ಯೋಗ್ಯತೆಗಳನ್ನು ಮೀರದೆ, ಉಚ್ಚನೀಚಾಃ=ಉತ್ತಮ ಮ

ಧ್ಯಮ ಅಧಮರಾಗಿರುತ್ತಾರೆಯೋ, ತಥಾತಥಾ=ಅವರವರ ಯೋಗ್ಯತಾನುಸಾರ, ಸರ್ವೇ-ಸಮಸ್ತರೂ, ಸರ್ವೈ-ಸಮಸ್ತವಾದ, ಗುಣೈಶ್ಚ = ಜ್ಞಾನ ಭಕ್ತಿ ಸಂಪತ್ತು ಮೊದಲಾದ ಗುಣಗಳಿಂದ, ಉದಿತಾಶ್ಚ=ಆವಿರ್ಭೂತರಾಗಿದ್ದರು, ಸಮಸ್ತ-ಸಮಸ್ತವಾದ, ರೋಗಾದಿಭಿಃ = ರೋಗಗಳೇ ಮೊದಲಾದ ಪೀಡೆಗಳಿಂದಲೂ, ಉಜ್ಝಿತಾಃ=ರಹಿತರಾದವರಾಗಿದ್ದರು. ಧನೈಃ-ಧನಧಾನ್ಯಾದಿಗಳಿಂದ, ಊರ್ಜಿತಾಃ=ಏಳಿಗೆಯುಳ್ಳವರು, ಮತ್ತು, ಸರ್ವೇ =ಸಮಸ್ತ ಜನರೂ, ಸಹಸ್ರಾಯುಷಶ್ಚ=ಸಹಸ್ರವರ್ಷ ಆಯುಸ್ಸುಳ್ಳವರಾಗಿಯು, ಅಭೂವನ್-ಆಗಿದ್ದರು.

ತಾತ್ಪರ್ಯ.—ಶ್ರೀರಾಮರು ರಾಜ್ಯವಾಳುತ್ತಿರುವಾಗ ಸರ್ವ ಪ್ರಜೆಗಳೂ ತಮ್ಮ ತಮ್ಮ ಯೋಗ್ಯತೆಗನುಸಾರವಾಗಿ ಉತ್ತಮ ಮಧ್ಯಮ ಅಧಮರು ಹೇಗೆ ಇರಬೇಕೋ ಹಾಗೆ ತಮ್ಮ ಸ್ವರೂಪಕ್ಕೆ ಯೋಗ್ಯವಾದ ಜ್ಞಾನ ಭಕ್ತಿ, ಮತ್ತು ಸಂಪತ್ತು ಇತ್ಯಾದಿ ಗುಣಗಳಿಂದ ಯುಕ್ತರಾಗಿದ್ದರು. ಸರ್ವರೂ ಸಮಸ್ತವಾದ ರೋಗಾಧಿ ಉಪದ್ರವಗಳು ಹಾಗೆಯೇ ಮನಃ ಸಂಬಂಧವಾದ ಪೀಡಾದಿಗಳು ಇವುಗಳಿಂದ ಮುಕ್ತರಾಗಿದ್ದರು. ಸಮಸ್ತರೂ ಧನಧಾನ್ಯಾದಿ ಸಂಪತ್ತುಗಳಿಂದ ಊರ್ಜಿತರಾಗಿದ್ದರು ಮತ್ತು ಸಮಸ್ತ ಪ್ರಜೆಗಳೂ ಸಹಸ್ರವರ್ಷ ಆಯುಃಸುಳ್ಳವರಾಗಿದ್ದರೆಂದು ತಾತ್ಪರ್ಯವು-

ಅವತಾರಿಕೆ.--ಈ ಶ್ಲೋಕದಲ್ಲಿ ಅದನ್ನೇ ಪ್ರತಿಪಾದನಮಾಡುತ್ತಾರೆ.

**ಶ್ಲೋಕ ॥ ಸರ್ವೇಜನಾ ನಿತ್ಯಬಲೋಪಪನ್ನಾಃ । ಯಥೇಷ್ಟಸಿದ್ಧ್ಯಾ ಚ ಸದೋಪಪನ್ನಾಃ ॥ ಸಮಸ್ತ ದೋಷೈಶ್ಚ ಸದಾವಿಹೀನಾಃ । ಸರ್ವೇಸುರೂಪಾಶ್ಚ ಸದಾಮಹೋತ್ಸವಾಃ ॥೬॥**

ಅರ್ಥ.--ಸರ್ವೇಜನಾಃ=ಸಮಸ್ತ ಜನಗಳೂ, ನಿತ್ಯ=ಯಾವಾಗಲೂ, ಬಲ-ಶರೀರ ಬಲದಿಂದ, ಉಪಪನ್ನಾಃ=ಪೂರ್ಣರಾಗಿಯೂ, ಯಥೇಷ್ಟ=ತಾವು ಅಪೇಕ್ಷಿಸಿದ, ಸಿದ್ಧ್ಯಾ=ಕಾರ್ಯಸಿದ್ಧಿಗಳಿಂದ, ಸದಾ=ಸರ್ವಕಾಲದಲ್ಲಿಯೂ, ಉಪಪನ್ನಾಃ=ಯುಕ್ತರಾದವರಾಗಿಯೂ, ಸಮಸ್ತ = ಸಮಸ್ತವಾದ, ದೋಷೈಶ್ಚ=ದ್ವೇಷಾಸೂಯರಾಗಾದಿ ದೋಷಗಳಿಂದ, ಸದಾ=ಸರ್ವಕಾಲದಲ್ಲಿಯೂ, ವಿಹೀನಾಃ=ಬಿಡಲ್ಪಟ್ಟವರಾಗಿಯೂ, ಸರ್ವೇ=ಸರ್ವ

ರೂ, ಸುರೂಪಾಃಶ್ಚ-ಸುರೂಪವುಳ್ಳವರು (ಚೆಲುವರಾಗಿಯೂ) ಮತ್ತು, ಸದಾ-ಸರ್ವಕಾಲದಲ್ಲಿಯೂ, ಮಹೋತ್ಸವಾಃ = ಸಂಭ್ರಮವುಳ್ಳವರಾಗಿಯೂ ಇದ್ದರು.

ತಾತ್ಪರ್ಯ.—ಶ್ರೀರಾಮನ ರಾಜ್ಯದಲ್ಲಿ ಸಮಸ್ತ ಜನಗಳೂ ನಿಯತವಾದ ಬಲ ಶರೀರದಾರ್ಢ್ಯ ಉಳ್ಳವರಾಗಿಯೂ, ಯಾವಾಗಲೂ ತಾವು ಅಪೇಕ್ಷಿಸುವ ಕಾರ್ಯಸಿದ್ಧಿಯುಳ್ಳವರಾಗಿಯೂ, ಸಮಸ್ತವಾದ ರಾಗಾಸೂಯದ್ವೇಷಾದಿ ದೋಷಗಳಿಂದ ರಹಿತರಾದವರಾಗಿಯೂ, ಸರ್ವರೂ ಸ್ಫುರದ್ರೂಪಿಗಳಾಗಿಯೂ, ಯಾವಾಗಲೂ ಮಹಾಸಂಭ್ರಮಯುಕ್ತರಾಗಿಯೂ ಇದ್ದರು.

ಅವತಾರಿಕೆ.—ರಾಮರ ರಾಜ್ಯಭಾರದಲ್ಲಿ ಪೃಥಿವಿಯಲ್ಲಿ ಮೂರು ವಿಧವಾದ ಗುಣಗಳ ಉತ್ಕೃಷ್ಟತೆಯನ್ನು ನಿರೂಪಿಸುತ್ತಾರೆ.—

**ಶ್ಲೋಕ॥ ಸರ್ವೇ ಮನೋವಾಕ್ತನುಭಿಃ ಸದೈವ । ವಿಷ್ಣುಂಯಜಂತೇ ನತು ಕಂಚಿದನ್ಯಂ॥ ಸಮಸ್ತರತ್ನೋದ್ಭರಿತಾಚಪೃಥ್ವೀ । ಯಥೇಷ್ಟಧಾನ್ಯಾ ಬಹುದುಗ್ಧಗೋಮತೀ ॥೭॥**

ಅರ್ಥ.--ಸರ್ವೇ=ಸಮಸ್ತ ಪ್ರಜೆಗಳೂ, ಸದಾ = ಸರ್ವಕಾಲದಲ್ಲಿಯೂ, ಮನೋ, ವಾಕ್, ತನುಭಿಃ=ಮನಸ್ಸು, ವಚಸ್ಸು, ಶರೀರ, ಈ ಮೂರು, ತ್ರಿಕರಣಗಳಿಂದಲೂ, ವಿಷ್ಣುಂ = ಶ್ರೀವಿಷ್ಣುಪರಮಾತ್ಮನನ್ನೇ, ಯಜಂತೇ-ಸರ್ವೋತಮತ್ವ ಬುದ್ದಿಯಿಂದ ಪೂಜಿಸುತ್ತಿದ್ದರು. ಅನ್ಯಂತು-ಇತರ ದೇವತೆಗಳನ್ನು, ಕಿಂಚಿತ್=ಸರ್ವಥಾ, ನಯಜಂತೇ=ಸರ್ವೋತ್ತಮತ್ವೇನ ಪೂಜಿಸುತ್ತಿರಲಿಲ್ಲ. ಪೃಥ್ವೀ = ಭೂಮಿಯು, ಯಥೇಷ್ಟಧಾನ್ಯಾ-ಬಹುವಾದ, ಧಾನ್ಯವುಳ್ಳದಾಗಿತ್ತು, ಮತ್ತು ಸಮಸ್ತ ರತ್ನೋದ್ಭರಿತಾ=ಸರ್ವವಿಧವಾದ ರತ್ನಗಳಿಂದ, ಉದ್ಭರಿತಾ=ತುಂಬಿದ್ದಾಗಿತ್ತು. ಗೋಮತೀ=ಗೋವುಗಳೇ ಮೊದಲಾದ ಸಮಸ್ತ ಹಾಲುಕರೆಯುವ ಪಶುಜಾತಿಗಳೂ ಬಹುದುಗ್ಧ=ಸಮೃದ್ಧಿಯಾದ ಕರಾವು ಉಳ್ಳವುಗಳಾಗಿದ್ದವು.

ತಾತ್ಪರ್ಯ.--ಶ್ರೀರಾಮರು ರಾಜ್ಯವಾಳುತ್ತಿರಲು ಪ್ರಜೆಗಳು ಸರ್ವರೂ ತ್ರಿಕರ್ಣಗಳಿಂದಲೂ (ಮನಸ್ಸು ವಾಕ್ಕು ಶರೀರ) ಪೂಜಾ ನಮಸ್ಕಾರಾದಿಸೇವೆಗಳಿಂದ ಶ್ರೀವಿಷ್ಣುಪರಮಾತ್ಮನನ್ನು, ಶ್ರೀಲಕ್ಷ್ಮೀದೇವಿಯರಾದಿ

ಯಾಗಿ ಬ್ರಹ್ಮಾದಿ ಸಮಸ್ತ ದೇವತೆಗಳಿಗಿಂತಲೂ ಸರ್ವೋತ್ತಮನೆಂಬ ನಿಶ್ಚಿತ ಭಾವನೆಯಿಂದ ಪೂಜಿಸುತ್ತಿದ್ದರು. ೭. ಈ ಪೃಥ್ವಿಯು ಸಮಸ್ತ ಧಾನ್ಯಗಳಿಂದಲೂ ಸಮಸ್ತ ವಿಧವಾದ ರತ್ನಗಳಿಂದಲೂ ಭರಿತವಾಗಿ ಉತ್ಕ್ರೇಯವುಳ್ಳದ್ದಾಗಿತ್ತು. ೩, ಗೋವುಗಳು ಮೊದಲಾದ ಕ್ಷೀರಪ್ರದವಾದ ಪಶುಗಳು ಬಹು ಸಮೃದ್ಧಿಯಾಗಿ ಕ್ಷೀರಪ್ರದಗಳಾಗಿದ್ದವು. ಏತೇನ ಈ ಪೃಥ್ವಿಯು ಈ ಮೂರು ಗುಣಗಳಿಂದಲೂ ಶ್ರೇಷ್ಟತ್ವವನ್ನು ಹೊಂದಿತ್ತು.

ಅವತಾರಿಕೆ.--ಮತ್ತೂ ಆ ರಾಮರಾಜ್ಯದ ವೈಭವವನ್ನೇ ನಿರೂಪಣಮಾಡುತ್ತಾರೆ.--

**ಶ್ಲೋಕ || ಸಮಸ್ತ ಗಂಧಾಶ್ಚ ಸದಾತಿಹೃದ್ಯಾಃ | ರಸಾ ಮನೋಹಾರಿಣಯೇವತತ್ರ || ಶಬ್ದಾಶ್ಚ ಸರ್ವೇ ಶ್ರವಣಾತಿಹಾರಿಣಃ | ಸ್ಪರ್ಶಾಶ್ಚ ಸರ್ವೇ ಸ್ಪರ್ಶೇಂದ್ರಿಯಪ್ರಿಯಾಃ ||೮||**

ಅರ್ಥ.--ತತ್ರ-ಆ ರಾಮರಾಜ್ಯದಲ್ಲಿ, ಸಮಸ್ತ ಗಂಧಾಶ್ಚ=ಸಮಸ್ತವಾದ, ಸುಗಂಧ ದ್ರವ್ಯಗಳೂ, ಅತಿಹೃದ್ಯಾಃ=ಅತ್ಯಂತ ಪ್ರಿಯಕರವಾದವುಗಳಾಗಿದ್ದವು, ರಸಾಶ್ಚ=ರಸಗಳಾದರೊ, ಮನೋಹಾರಿಣಏವ=ಬಹು ರುಚಿಯಾಗಿ ಮನಸ್ಸನ್ನೇ ಅಪಹಾರಮಾಡತಕ್ಕವುಗಳಾಗಿದ್ದವು. ಸಮಸ್ತ ಶಬ್ಧಾಶ್ಚ=ಸಮಸ್ತವಾದ ಶಬ್ದಗಳೂ, ಶ್ರವಣಾತಿಹಾರಿಣಃ=ಬಹು ಇಂಪಾಗಿ ಶ್ರವಣೇಂದ್ರಿಯಗಳನ್ನು ಅಪಹರಿಸುತ್ತಿದ್ದವು, ಮತ್ತು ಸರ್ವೇಸ್ಪರ್ಶಾಶ್ಚ=ಸಮಸ್ತವಾದ ಸ್ಪರ್ಶಗಳೂ, ಸ್ಪರ್ಶೇಂದ್ರಿಯಪ್ರಿಯಾಃ=ಸ್ಪರ್ಶೇಂದ್ರಿಯಕ್ಕೆ ಬಹು ಪ್ರೀತಿಕರಗಳಾಗಿದ್ದವು.

ತಾತ್ಪರ್ಯ.--ಶ್ರೀರಾಮರು ರಾಜ್ಯಭಾರಮಾಡುತ್ತಿರುವಲ್ಲಿ ಸಮಸ್ತವಾದ ಸುಗಂಧದ್ರವ್ಯಗಳೂ ಅತಿಶಯವಾದ ಸುಗಂಧದಿಂದ ಮನೋಹೃದಯಗಳಿಗೆ ಬಹು ಹಿತಕರವಾಗಿದ್ದವು. ಪೇಯರಸಗಳು ಮನೋಹಾರಕವಾದ ರುಚಿಯುಳ್ಳವುಗಳಾಗಿದ್ದವು. ಸಮಸ್ತ ವಿಧವಾದ ಶಬ್ಧಗಳೂ ಬಹು ಇಂಪಾಗಿ ಶ್ರವಣಕ್ಕೆ ಬಹು ಹಿತಕರವಾಗಿದ್ದವು. ಮತ್ತು ಶರೀರಕ್ಕೆ ಯಾವ ಪದಾರ್ಥಗಳು ಸ್ಪರ್ಶವಾದಾಗ್ಯೂ ವಿರೋಧ ಕರ್ಕಶವಿಲ್ಲದೆ ಬಹು ಹಿತವಾದ ಸ್ಪರ್ಶವುಳ್ಳವುಗಳಾಗಿದ್ದವು.

ಅವತಾರಿಕೆ.—ಇದು ಮೊದಲು ಮೂರು ಶ್ಲೋಕಗಳಲ್ಲಿಯೂ ರಾಮ ರಾಜ್ಯದಲ್ಲಿ ಜನಗಳು ಯಾವರೀತಿ ಇದ್ದರೆಂಬ ವಿಷಯವನ್ನು ಪ್ರತಿಪಾದನ ಮಾಡುತ್ತಾರೆ.--

**ಶ್ಲೋಕ ॥ ನಕಸ್ಯಚಿದ್ದುಃಖಮಭೂತ್ಕಥಂಚಿ । ನ್ನವಿತ್ತಹಾನಿಶ್ಚ ಬಭೂವ ಕಸ್ಯ ಚಿತ್ ॥ ನಾಧರ್ಮಶೀಲೋ ನಚಕಶ್ಚ ನಾಪ್ರಜೋ । ನದುಷ್ಪ್ರಜೋ ನೈವಕುಭಾರ್ಯಕಶ್ಚ ।೯॥**

ಅರ್ಥ.---ಶ್ರೀರಾಮರ ರಾಜ್ಯಭಾರದಲ್ಲಿ, ಕಸ್ಯಚಿತ್=ಯಾವ ಮನು ಷ್ಯನಿಗೂ, ಕಥಂಚಿತ್-ಯಾವರೀತಿಯಿಂದಲೂ, ದುಃಖಂ = ವ್ಯಥೆಯು, ನಾಭೂತ್=ಉಂಟಾಗಲಿಲ್ಲವು, ಕಶ್ಚಿತ್=ಯಾವ ಮನುಷ್ಯನಿಗೂ, ವಿತ್ತಹಾ ನಿಶ್ಚ=ದ್ರವ್ಯನಾಶವೂ, ನಬಭೂವ=ಉಂಟಾಗಲಿಲ್ಲವು. ಮತ್ತು ಯಾವ ಮನುಷ್ಯನೂ, ಅಧರ್ಮಶೀಲಃ=ಧರ್ಮಭ್ರಷ್ಟನಾಗಿರಲಿಲ್ಲ, ಕಶ್ಚ = ಯಾವ ಪುರುಷನೂ. ನಾಪ್ರಜಃ=ಸಂತತಿ ರಹಿತನಾಗಿರಲಿಲ್ಲ. ಮತ್ತು ಯಾವ ಪು ರುಷನೂ, ನದುಷ್ಪ್ರಜಃ=ದುಷ್ಪುತ್ರ ಸಂತತಿಯುಳ್ಳವನಾಗಿರಲಿಲ್ಲ. ಮತ್ತು ಕುಭಾರ್ಯಕಶ್ಚ=ಕುತ್ಸಿತಳಾದ ಪತ್ನಿಯುಳ್ಳವನಾಗಿ, ಕಶ್ಚಿತ್=ಯಾವ ಪುರು ಷನೂ ಇರಲಿಲ್ಲವು.

ತಾತ್ಪರ್ಯ.--ಆ ರಾಮರಾಜ್ಯದಲ್ಲಿ ಯಾವ ಪುರುಷನಿಗೂ ಯಾವ ರೀತಿಯಿಂದಲೂ ದುಃಖವುಂಟಾಗಲಿಲ್ಲವು. (ಎಲ್ಲರೂ ಯಾವಾಗಲೂ ಸಂ ತೋಷವಾಗಿದ್ದರು.) ಯಾವ ಪುರುಷನಿಗೂ ದ್ರವ್ಯನಾಶವುಂಟಾಗಲಿಲ್ಲವು. ಮತ್ತು ಅಧರ್ಮ ಪ್ರವರ್ತಕನಾದ ಪುರುಷನು ಯಾವನೂ ಇರಲಿಲ್ಲವು. ಯಾವ ಮನುಷ್ಯನೂ ಸಂತತಿ ಇಲ್ಲದವನಾಗಿರಲಿಲ್ಲವು. ದುಸ್ಸಂತತಿ ಯಾ ರಿಗೂ ಇರಲಿಲ್ಲ. ಮತ್ತು ಕುರೂಪಿ, ಕೆಟ್ಟ ನಡತೆಯುಳ್ಳ ಪತ್ನಿಯನ್ನುಳ್ಳ ವರು ಯಾರೂ ಇರಲಿಲ್ಲ.

ಅವತಾರಿಕೆ.—ಪೂರ್ವಶ್ಲೋಕದಲ್ಲಿ ಪುರುಷರು ಯಾವ ರೀತಿಯಲ್ಲಿ ದ್ದರೆಂಬುದನ್ನು ನಿರೂಪಿಸಿ ಈ ಶ್ಲೋಕದಲ್ಲಿ ಸ್ತ್ರೀಯರು ಯಾವರೀತಿಯಲ್ಲಿ ದ್ದರೆಂಬ ವಿಷಯವನ್ನು ನಿರೂಪಣಮಾಡುತ್ತಾರೆ.—

**ಶ್ಲೋಕ ॥ ಸ್ತ್ರೀಯೋನಚಾಸನ್ನಿಧವಾಃ ಕಥಂಚಿ । ನ್ನವೈಪುಮಾಂಸೋ ವಿಧು ರಾ ಬಭೂವುಃ ॥ ನಾನಿಷ್ಟಯೋಗಶ್ಚ ಬಭೂವಕಸ್ಯಚಿ । ನ್ನಚೇಷ್ಟ ಹಾನಿರ್ನಚಪೂರ್ವಮೃತ್ಯುಃ ॥೧೦॥**

ಅರ್ಥ.--ಸ್ತ್ರೀಯಃ = ಸ್ತ್ರೀಯರು, ವಿಧವಾಃ = ಪತಿಯಿಲ್ಲದವರು, ನಚ=ಇರಲಿಲ್ಲವು, ಪುಮಾಂಸಃ=ಪುರುಷರು, ವಿಧುರಾಃ=ಪತ್ನಿಯಿಲ್ಲದವರು ನೈವಬಭೂವ=ಇರಲೇ ಇಲ್ಲವು. ಮತ್ತು ಕಸ್ಯಚಿತ್=ಯಾವ ಮನುಷ್ಯನಿಗೂ, ಅನಿಷ್ಟಯೋಗಃ=ಇಷ್ಟವಲ್ಲದ ದುರ್ಯೋಗಪ್ರಾಪ್ತಿಯು, ನಬಭೂವ=ಉಂಟಾಗಲಿಲ್ಲವು. ಮತ್ತು ಇಷ್ಟಹಾನಿಃ - ತನಗೆ ಪ್ರಿಯಕರವಾದ ಇಷ್ಟಾರ್ಥದ ಹಾನಿಯು, ಮತ್ತು ಪೂರ್ವಮೃತ್ಯುಶ್ಚ = ವೃದ್ಧಾವಸ್ಥೆಕಿಂತಲೂ ಪೂರ್ವದಲ್ಲಿ ಮರಣವು, ಕಸ್ಯಚಿತ್=ಯಾರಿಗೂ, ನಬಭೂವ=ಉಂಟಾಗಲಿಲ್ಲವು.

ತಾತ್ಪರ್ಯ.—ರಾಮರ ರಾಜ್ಯಭಾರದಲ್ಲಿ ಯಾವ ಸ್ತ್ರೀಯೂ ವಿಧವೆಯಾಗಲಿಲ್ಲವು. ಮತ್ತು ಯಾವ ಪುರುಷನೂ ವಿಧುರನಾಗಲಿಲ್ಲವು. ಮತ್ತು ಯಾವ ಮನುಷ್ಯನಿಗೂ ತನಗೆ ಅಪ್ರಿಯವಾದ ದುರ್ಯೋಗವುಂಟಾಗಲಿಲ್ಲವು ಮತ್ತು ತನಗೆ ಪ್ರಿಯಕರವಾದ ಇಷ್ಟಾರ್ಥಗಳಿಗೆ ಹಾನಿಯುಂಟಾಗಲಿಲ್ಲವು. ಮತ್ತು ಯಾವ ಪುರುಷ ಸ್ತ್ರೀಯರಿಗೂ ವೃದ್ಧರಾಗುವದಕ್ಕೆ (ಪೂರ್ವಂ-ತಾರುಣ್ಯದಲ್ಲಿ ಮೃತ್ಯುವಿರಲಿಲ್ಲ.)

ಅವತಾರಿಕೆ.—ಶ್ರೀರಾಮರು ರಾಜ್ಯವಾಳುತ್ತಿರಲು ಸರ್ವಸಾಮಾನ್ಯವಾಗಿಯೂ ಪ್ರಜೆಗಳು ಯಾವರೀತಿ ಇದ್ದರೆಂಬುವ ವಿಷಯವನ್ನು ನಿರೂಪಿಸುತ್ತಾರೆ.--

**ಶ್ಲೋಕ || ಯಥೇಷ್ಟಮಾಲ್ಯಾಭರಣಾನುಲೇಪನಾ | ಯಥೇಷ್ಟಪಾನಾಶನವಾಸಸೋಽಖಿಲಾಃ || ಬಭೂವುರೀಶೇ ಜಗತಾಂ ಪ್ರಶಾಸತಿ | ಪ್ರಕೃಷ್ಟಧರ್ಮೇಣ ಜನಾರ್ದನೇನೃಪೇ ||೧೧||**

ಅರ್ಥ.—ಜಗತಾಂ=ಸಮಸ್ತ ಲೋಕಗಳಿಗೂ, ಈಶೇ = ಸ್ವಾಮಿಯಾದ, ಜನಾರ್ದನೇ=ದುಷ್ಟಜನಮರ್ದಕನಾದ, ನೃಪೇ=ರಾಮಚಂದ್ರನು, ಪ್ರಕೃಷ್ಟಧರ್ಮೇಣ=ಉತ್ಕೃಷ್ಟವಾದ ಧರ್ಮದಿಂದ, ಪ್ರಶಾಸತಿ=ರಾಜ್ಯಪರಿಪಾಲನ ಮಾಡುತ್ತಿರಲಾಗಿ, ಅಖಿಲಾಃ=ಸಮಸ್ತ ಪ್ರಜೆಗಳೂ. ಯಥೇಷ್ಟ=ತಮ್ಮ ಇಷ್ಟಾನುಸಾರವಾದ, ಮಾಲ್ಯಾ=ಹಾರಗಳು, ಆಭರಣ = ಭೂಷಣಗಳು, ಅನುಲೇಪನ=ಸುವಾಸಿಕ ಗಂಧಾದಿ ಅನುಲೇಪನಗಳು, ಇವುಗಳುಳ್ಳವರೂ, ಯಥೇಷ್ಟ - ಸಮೃದ್ಧವಾದ, ಪಾನ = ಜಲ ಕ್ಷೀರ ಮೊದಲಾದ

ಪಾನೀಯಗಳು, ಅಶನ=ಅನ್ನಾದಿ ಭೋಜನಗಳು, ವಾಸಸಃ-ತಮಗೆ ಇಷ್ಟವಾದ ವಸ್ತ್ರಗಳೂ, ( ಇವುಗಳುಳ್ಳವರು) ಬಭೂವುಃ=ಆದರು.

ತಾತ್ಪರ್ಯ.— ಸಕಲ ಲೋಕಗಳಿಗೂ ಸ್ವಾಮಿಯಾದ, ದುಷ್ಟಜನ ಮರ್ದಕನಾದ ಶ್ರೀರಾಮಚಂದ್ರನು ರಾಜ್ಯಪರಿಪಾಲನ ಮಾಡುತ್ತಿರಲಾಗಿ ಸಮಸ್ತ ಪ್ರಜೆಗಳೂ ತಮತಮಗೆ ಬೇಕಾದ ಪುಷ್ಪಹಾರಾದಿಗಳಿಂದಲೂ ಬೇಕುಬೇಕಾದ ಸುವರ್ಣಮಯಾದಿ ಭೂಷಣಗಳುಳ್ಳವರಾಗಿದ್ದರು. ಮತ್ತು ತಮತಮಗೆ ಬೇಕಾದ ಸುಗಂಧ ದ್ರವ್ಯಾನುಲೇಪನಗಳುಳ್ಳವರಾಗಿದ್ದರು. ಮತ್ತು ಎಲ್ಲ ಪ್ರಜೆಗಳೂ ಸಮೃದ್ಧಿಯಾದ ಕ್ಷೀರಾದಿ ಪಾನಪದಾರ್ಥಗಳೂ, ಅನ್ನಾದಿ ಭೋಜನ ಪದಾರ್ಥಗಳೂ, ಮತ್ತು ಇಷ್ಟಾನುಸಾರವಾದ ವಸ್ತ್ರಗಳೂ ಇವುಗಳಿಂದ ಸಂಪೂರ್ಣ ಸಮೃದ್ಧಿಯುಳ್ಳವರಾಗಿದ್ದರು.

**ಶ್ಲೋಕ ॥ ಸಬ್ರಹ್ಮರುದ್ರ ಮರುದಶ್ವಿ ದಿವಾಕರಾದಿ । ಮೂರ್ಧನ್ಯರತ್ನ ಪರಿಘಟ್ಟಿತ ಪಾದಪೀಠಃ॥ ನಿತ್ಯಂಸುರೈಃ ಸಹನರೈರಥ ವಾನರೈಶ್ಚ । ಸಂಪೂಜ್ಯಮಾನಚರಣೋ ರಮತೇರಮೇಶಃ ॥೧೨॥**

ಅರ್ಥ.— ರಮೇಶಃ=ಶ್ರೀಲಕ್ಷ್ಮೀಪತಿಯಾದ, ಸಃ=ಶ್ರೀರಾಮಚಂದ್ರನು, ಬ್ರಹ್ಮ, ರುದ್ರ, ಮರುತ್, ಅಶ್ವಿನೀದೇವತೆಗಳು, ದಿವಾಕರ, ಆದಿ, ಮೂರ್ಧನ್ಯ, ರತ್ನ, ಪರಿಘಟ್ಟಿತ, ಪಾದಪೀಠಃ = ಬ್ರಹ್ಮದೇವರು, ರುದ್ರದೇವರು, ಮರುದ್ಗಣಗಳು, ಅಶ್ವಿನೀದೇವತೆಗಳು, ಸೂರ್ಯ, ಮೊದಲಾದ ದೇವತೆಗಳ, ಮೂರ್ಧನ್ಯ=ಶಿರಸ್ಸಿನಲ್ಲಿರುವ, ರತ್ನ = ಕಿರೀಟಗಳಲ್ಲಿ ಖಚಿತವಾದ ನವರತ್ನಗಳಿಂದ, ಪರಿಘಟ್ಟಿತ=ಉಜ್ಜಲ್ಪಟ್ಟ, ಪಾದಪೀಠಃ= ಪಾದಗಳುಳ್ಳವರಾಗಿ, ನಿತ್ಯಂ-ಸರ್ವಕಾಲದಲ್ಲಿಯೂ, ಸುರೈಃಸಹ=ದೇವತೆಗಳಿಂದಲೂ, ನರೈಃ=ಮನುಷ್ಯರಿಂದಲೂ, ಅಥ=ಮತ್ತು, ವಾನರೈಶ್ಚ-ವಾನರರಿಂದಲೂ ಸಹ, ಸಂಪೂಜ್ಯಮಾನ=ಚೆನ್ನಾಗಿ ಪೂಜೆಮಾಡಲ್ಪಡುತ್ತಿರುವ, ಚರಣಃಸ-ಪಾದಗಳುಳ್ಳವರಾಗಿ, ರಮತೇ=ವಿಹರಿಸುತ್ತಿದ್ದರು.

ತಾತ್ಪರ್ಯ.— ಶ್ರೀಲಕ್ಷ್ಮೀಪತಿಯಾದ ಶ್ರೀರಾಮಚಂದ್ರದೇವರು ಏವಂಗುಣಪರಿಪೂರ್ಣವಾದ ತಮ್ಮ ರಾಜ್ಯದಲ್ಲಿ ಬ್ರಹ್ಮಾದಿ ದೇವತೆಗಳ ಶಿರಸ್ಸಿನಲ್ಲಿರತಕ್ಕ ಕಿರೀಟದಲ್ಲಿ ಖಚಿತವಾದ ನವರತ್ನಗಳಿಂದ ಉಜ್ಜಲ್ಪಟ್ಟ ಪಾದಪೀಠಗಳುಳ್ಳವರಾಗಿಯೂ ನಿರಂತರದಲ್ಲಿಯೂ ದೇವತೆಗಳಿಂದಲೂ, ಮನುಷ್ಯರಿಂದಲೂ ವಾನರರಿಂದಲೂ ಸಹ ಪೂಜಿಸಲ್ಪಡುತ್ತಿರುವರಾಗಿಯೂ ವಿಹರಿಸುತ್ತಿದ್ದರು.

**ಶ್ಲೋಕ || ತಸ್ಯಾಖಿಲೇಶತುರನಾದ್ಯನುಗೈವಲಕ್ಷ್ಮೀಃ | ಸೀತಾಭಿಧಾತ್ಪರಮಯತ್ಸ್ವರತಂ ರಮೇಶಂ || ನಿತ್ಯಾವಿಯೋಗಿ ಪರಮೋಚ್ಚ ನಿಜ ಸ್ವಭಾವ | ಸೌಂದರ್ಯವಿಭ್ರಮ ಸುಲಕ್ಷಣ ಪೂರ್ವಭಾವಾ ||೧೩||**

ಅರ್ಥ — ಅಖಿಲೇಶತುಃ=ಸಮಸ್ತ ಜಗತ್ಪ್ರಭುಗಳಾದ, ತಸ್ಯ – ಶ್ರೀರಾಮಚಂದ್ರದೇವರ, ಅನಾದ್ಯನುಗಾ–ಅನಾದಿಕಾಲದಿಂದಲೂ ಅನುಸರಿಸಿ ಇರತಕ್ಕ, ನಿತ್ಯಾವಿಯೋಗಿ, ಪರಮೋಚ್ಚ, ನಿಜಸ್ವಭಾವ, ಸೌಂದರ್ಯ ವಿಭ್ರಮ, ಸುಲಕ್ಷಣ, ಪೂರ್ವ, ಭಾವಾ, ನಿತ್ಯಾವಿಯೋಗಿ – ನಿರಂತರ ವಿಯೋಗರಹಿತವಾದ. ಪರಮೋಚ್ಚ=ಅತ್ಯುತ್ಕೃಷ್ಟವಾದ, ನಿಜಸ್ವಭಾವ= ಸ್ವಸ್ವರೂಪಭೂತಗಳಾದ, ಸೌಂದರ್ಯ=ಸ್ಫುರದ್ರೂಪವು, ವಿಭ್ರಮ=ಹಾವಭಾವಗಳೂ, ಸುಲಕ್ಷಣ=ಅತ್ಯಂತ ಸಮೀಚೀನವಾದ ಲಕ್ಷಣಗಳು, (ಇವುಗಳೇ ) ಪೂರ್ವ=ಮೊದಲಾಗಿವುಳ್ಳ, ಭಾವ=ಸ್ವಭಾವವುಳ್ಳ, ಲಕ್ಷ್ಮೀರೇವ= ಸಾಕ್ಷಾನ್ಮಹಾಲಕ್ಷ್ಮೀದೇವಿಯೇ, ಸೀತಾಭಿಧಾತ್=" ಸೀತಾ " ಎಂಬ ಹೆಸರಿನಿಂದ, ತಂರಮೇಶಂ–ಪ್ರಭುವಾದ ಶ್ರೀರಾಮರಸಂಗಡ, ಅರಮಯತ್= ವಿಹಾರಮಾಡುತ್ತಿದ್ದಳು.

ತಾತ್ಪರ್ಯ.— ಜಗತ್ಪ್ರಭುಗಳಾದ ಶ್ರೀರಾಮರು ರಾಜ್ಯಭಾರಮಾಡುತ್ತಿರಲಾಗಿ, ಅನಾದಿವಿಯೋಗರಹಿತಳಾದ, ಅತ್ಯುತ್ತಮವಾದ, ಸ್ವಸ್ವರೂಪಭೂತಗಳಾದ, ಅತ್ಯುತ್ತಮ ಸುಂದರರೂಪವೂ, ಹಾವಭಾವಾದಿ ವಿಲಾಸಗಳೂ, ಅತ್ಯಂತ ಸಮೀಚೀನವಾದ ಸಲ್ಲಕ್ಷಣಗಳೂ, ಇವುಗಳು ಸ್ವಾಭಾವಿಕಗಳುಳ್ಳ ಸಾಕ್ಷಾತ್ ಶ್ರೀಮಹಾಲಕ್ಷ್ಮಿಯೇ ಶ್ರೀರಾಮರ ಸಂಗಡ ಪಟ್ಟದರಾಣಿಯಾಗಿ ವಿಹಾರಮಾಡುತ್ತಿದ್ದಳು.

**ಶ್ಲೋಕ || ರೇಮೇತಯಾ ಸಪರಮಃಸ್ವರತೋಽಪಿನಿತ್ಯಂ | ನಿತ್ಯೋನ್ನತ ಪ್ರಮದಭಾರಭೃತಃಸ್ವಭಾವಃ || ಪೂರ್ಣೋಡುರಾಜ ಸುವಿರಾಜಿತ ಸನ್ನಿಶಾಸು | ದೀಪ್ಯನ್ನಶೋಕವನಿಕಾಸು ಸುಪುಷ್ಪಿತಾಸು ||೧೪||**

ಅರ್ಥ.— ಪರಮಃ = ಸರ್ವೋತ್ತಮರಾದ, ಸಃ = ಆ ರಾಮಚಂದ್ರದೇವರು, ನಿತ್ಯಂ–ನಿರಂತರದಲ್ಲಿಯೂ, ಸ್ವರತೋಽಪಿ = ಸ್ವರಮಣರಾಗಿದ್ದಾಗ್ಯೂ, ನಿತ್ಯ=ನಿರಂತರವಾದ, ಉನ್ನತ=ಅತ್ಯುತ್ತಮವಾದ, ಪ್ರಮದಭಾರ –ಆನಂದಸಮೂಹದಿಂದ, ಭೃತ–ತುಂಬಿರುವ, ಸ್ವಭಾವಃಸ್ವ–ಸ್ವರೂಪವು

ಳ್ಳವರಾಗಿ, ಪೂರ್ಣೋಡುರಾಜ = ಷೋಡಶಕಳಾಪರಿಪೂರ್ಣನಾದ ಚಂದ್ರನಿಂದ, ಸುವಿರಾಜಿತ-ಪ್ರಕಾಶಮಾನವಾದ, ಸನ್ನಿಶಾಸು = ಉತ್ಕೃಷ್ಟವಾದ ರಾತ್ರಿಕಾಲಗಳಲ್ಲಿ, ಪುಷ್ಪಿತಾಸು – ಒಳ್ಳೇ ಪುಷ್ಪಗಳಿಂದ ಶೋಭಿಸುತ್ತಿರುವ, ಅಶೋಕವನಿಕಾಸು=ಶೋಕರಹಿತವಾದ (ಆನಂದಕರವಾದ) ಉದ್ಯಾನವನಗಳಲ್ಲಿ, ತಯಾ-ಸಾಕ್ಷಾತ್ ಲಕ್ಷ್ಮೀಸ್ವರೂಪಳಾದ ಸೀತಾದೇವಿಯಿಂದ. ದೀಪ್ಯ೯ (ಸ೯) = ವಿರಾಜಮಾನರಾಗಿ, ರೇಮೇ-ವಿಹಾರಮಾಡುತ್ತಿದ್ದರು.

ತಾತ್ಪರ್ಯ.—ಸರ್ವೋತ್ತಮರಾದ ಶ್ರೀರಾಮಚಂದ್ರದೇವರು, ನಿರಂತರ ಸ್ವರಮಣರಾದಾಗ್ಯೂ, ಅತ್ಯುತ್ತಮವಾದ, ಪೂರ್ಣವಾದ, ಆನಂದ ಸ್ವರೂಪವುಳ್ಳವರಾಗಿ, ಪೂರ್ಣಕಳಾಯುಕ್ತನಾದ ಚಂದ್ರನಿಂದ ಪ್ರಕಾಶಿಸುತ್ತಿರುವ ರಾತ್ರಿಗಳಲ್ಲಿ ಬಹು ಶ್ರೇಷ್ಠವಾದ ಪುಷ್ಪಾದಿಗಳಿಂದ ಶೋಭಿಸುತ್ತಿರುವ(ಆನಂದಕರಗಳಾದ) ಉದ್ಯಾನವನಗಳಲ್ಲಿ ಆ ಸಾಕ್ಷಾತ್ ಲಕ್ಷ್ಮೀಸ್ವರೂಪರಾದ ಸೀತಾದೇವಿಯರಿಂದ ಕೂಡಿ ಪ್ರಕಾಶಮಾನರಾಗಿ ವಿಹಾರ ಮಾಡುತ್ತಿದ್ದರು.

**ಶ್ಲೋಕ ॥ ಗಾಯಂತಿಚೈನ ಮನುರಕ್ತಧಿಯಃ ಸುಕಂಠಾಃ । ಗಂಧರ್ವಚಾರಣಗಣಾಃ ಸಹಚಾಪ್ಸರೋಭಿಃ ॥ ತಂತುಷ್ಟುವುರ್ಮುನಿಗಣಾಃ ಸಹಿತಾ ಸುರೇಶೈಃ ರಾಜಾನಏನಮನುಯಾಂತಿ ಸದಾಪ್ರಮತ್ತಾಃ ॥೧೫॥**

ಅರ್ಥ.—ಏನಂ-ಈ ಶ್ರೀರಾಮಚಂದ್ರದೇವರಲ್ಲಿ, ಅನುರಕ್ತಧಿಯಃ= ಅನುರಾಗವುಳ್ಳ, ಗಂಧರ್ವಚಾರಣಗಣಾಶ್ಚ=ಗಂಧರ್ವರು ಸಿದ್ಧರು ಚಾರಣರ ಸಮೂಹಗಳು, ಅಪ್ಸರೋಭಿಃಸಹ = ಅಪ್ಸರಸ್ತ್ರೀಯರಿಂದ ಸಹಿತರಾಗಿ, ಸುಕಂಠಾಃ-ಸಮೀಚೀನವಾದ ಶಾರೀರವುಳ್ಳವರಾಗಿ, ಗಾಯಂತಿ = ಗುಣವಿಶೇಷಣಗಳನ್ನು ಗಾನಮಾಡುತ್ತಾರೆ. ಸುರೇಶೈಃ=ದೇವತಾಶ್ರೇಷ್ಠರಿಂದ, ಸಹಿತಾಃ=ಯುಕ್ತರಾದ, ಮುನಿಗಣಾಃ=ಋಷಿಸಮೂಹಗಳು, ತಂ = ಶ್ರೀರಾಮರನ್ನು, ತುಷ್ಟುವುಃ=ಪೂಜಾದಿಗಳಿಂದ ಸಂತೋಷಪಡಿಸಿದರು. ಅಪ್ರಮತ್ತಾಃ=ಪ್ರಮಾದರಹಿತರಾದ, ರಾಜಾನಃ=ರಾಜರು, ಏನಂ=ಈ ಶ್ರೀರಾಮರನ್ನು, ಸದಾ=ಸರ್ವಕಾಲದಲ್ಲಿಯೂ, ಅನುಯಾಂತಿ=ಅನುಸರಿಸಿ ನಡೆದುಕೊಳ್ಳುತ್ತಿದ್ದರು.

ತಾತ್ಪರ್ಯ.—ಶ್ರೀರಾಮರು ರಾಜ್ಯಭಾರಮಾಡುತ್ತಿರುವಾಗ ಶ್ರೀರಾಮರಲ್ಲಿ ಅನುರಾಗವುಳ್ಳವರಾಗಿ ಸುಸ್ವರಶಾರೀರವುಳ್ಳ ಗಂಧರ್ವರೂ ಸಿದ್ಧಚಾರಣರ ಸಮೂಹಗಳು ಅಪ್ಸರಸ್ತ್ರೀಯರಿಂದ ಸಹಿತರಾಗಿ ನೃತ್ಯಗಾನವಾದ್ಯಾದಿಗಳಿಂದ ಶ್ಲಾಘ್ಯವಾಗಿ ಗಾಯನಮಾಡುತ್ತಿದ್ದರು. ಋಷಿಗಳ ಸಮೂಹಗಳು ದೇವತೆಗಳಿಂದ ಸಹಿತರಾಗಿ ಶ್ರೀರಾಮರನ್ನು ಸ್ತೋತ್ರಪೂಜಾದಿಗಳಿಂದ ಸಂತೋಷಪಡಿಸುತ್ತಿದ್ದರು. ರಾಜರುಗಳಾದರೋ ಪ್ರಮಾದರಹಿತರಾಗಿ ವಿನಯದಿಂದ ಶ್ರೀರಾಮರನ್ನು ಸರ್ವಕಾಲದಲ್ಲಿಯೂ ಅನುಸರಿಸಿ ನಡೆದುಕೊಳ್ಳುತ್ತಿದ್ದರು.

**ಶ್ಲೋಕ || ಏವಂ ತ್ರಯೋದಶ ಸಹಸ್ರಮಸೌ ಸಮಾಸ್ತು | ಪೃಥ್ವೀಂ ರರಕ್ಷ ವಿಜಿತಾರಿ ರಮೋಘ ವೀರ್ಯಃ|| ಆನಂದಮಿಂದುರಿವ ಸಂದಧದಿಂದಿರೇಶೋ | ಲೋಕಸ್ಯ ಸಾಂದ್ರ ಸುಖವಾರಿಧಿರಪ್ರಮೇಯಃ ||೧೬||**

ಅರ್ಥ.—ಅಪ್ರಮೇಯಃ - ಸಾಕಲ್ಯವಾಗಿ ತಿಳಿಯಲಸಾಧ್ಯರಾದ, ಸಾಂದ್ರಸುಖವಾರಿಧಿಃ = ನಿರವಕಾಶ ಸುಖಸಮುದ್ರರಾದ, ಇಂದಿರೇಶಃ= ಲಕ್ಷ್ಮೀಪತಿಗಳಾದ, ಅಮೋಘವೀರ್ಯಃ = ಅಪರಿಮಿತವಾದ ಪರಾಕ್ರಮವುಳ್ಳ, ವಿಜಿತಾರಿಃ= ಗೆಲ್ಲಲ್ಪಟ್ಟ ಶತೃಗಳುಳ್ಳ, ಅಸೌ = ಶ್ರೀರಾಮದೇವರು, ಏವಂ=ಪೂರ್ವೋಕ್ತಪ್ರಕಾರವಾಗಿ, ಅಖಿಲಲೋಕಸ್ಯ=ಸಮಸ್ತ ಜನಗಳಿಗೂ ಇಂದುರಿವ=ಪೂರ್ಣಚಂದ್ರನೋಪಾದಿಯಲ್ಲಿ, ಆನಂದಂ=ಪರಿಪೂರ್ಣಾನಂದವನ್ನು, ಸಂದಧತ್ (ಸನ್) - ಉಂಟುಮಾಡಿದವರಾಗಿ, ಪೃಥ್ವೀಂ = ಭೂಲೋಕವನ್ನು, ತ್ರಯೋದಶಸಹಸ್ರಸಮಾಸ್ತು=ಹದಿಮೂರುಸಾವಿರ ವರ್ಷಕಾಲ, ರರಕ್ಷ-ಸಂರಕ್ಷಿಸಿದರು.

ತಾತ್ಪರ್ಯ.—ಅಪರಿಮಿತ ಬಲಪರಾಕ್ರಮವುಳ್ಳ, ಸಮಸ್ತ ಶತೃಗಳನ್ನೂ ಗೆದ್ದಂಥಾ, ತಿಳಿದುಕೊಳ್ಳಲು ಶಕ್ಯರಲ್ಲದ ಸಂಪೂರ್ಣ ಸಂತೋಷದಿಂದ ಸಮುದ್ರಸ್ಥಾನೀಯರಾದ, ಲಕ್ಷ್ಮೀಪತಿಗಳಾದ ಶ್ರೀರಾಮದೇವರು ಸಮಸ್ತ ಪ್ರಜೆಗಳೂ (ತಥಾಲೋಕಕ್ಕೇವೇ) ಪೂರ್ಣಚಂದ್ರನೋಪಾದಿಯಲ್ಲಿ ಆನಂದವನ್ನು ಪಡಿಸುತ್ತಾ ಹದಿಮೂರುಸಹಸ್ರ ವರ್ಷಗಳಕಾಲ ರಾಜ್ಯಭಾರ ಮಾಡಿದರು.

**ಶ್ಲೋಕ ||ದೇವ್ಯಾಂಸಜಾಜನಯದಿಂದ್ರಹುತಾಶನೌದ್ವೌ | ಪುತ್ರೌಯಮೌ ಕುಶಲವೌ ಬಲಿನೌ ಗುಣಾಢ್ಯೌ || ಶತ್ರುಘ್ನತೋ ಲವಣಮುಲ್ಬಣ ಬಾಣದಗ್ಧಂ | ಕೃತ್ವಾಚಕಾರ ಮಧುರಾಂ ಪುರಮುಗ್ರವೀರ್ಯಃ ||೧೭||**

ಅರ್ಥ.—ಸಃ=ಆ ರಾಮಚಂದ್ರನು, ದೇವ್ಯಾಂ=ಸೀತಾದೇವಿಯಲ್ಲಿ, ಇಂದ್ರಹುತಾಶನೌ=ಇಂದ್ರ ಅಗ್ನಿಗಳ ಅಂಶಭೂತರಾದ, ಕುಶಲವೌ=ಕುಶ ಮತ್ತು ಲವ ಎಂಬ ಹೆಸರುಳ್ಳ, ಬಲಿನೌ=ಬಲಿಷ್ಟರಾದ, ಗುಣಾಡ್ಯೌ – ಅತ್ಯಂತ ಗುಣವಂತರಾದ, ಯಮೌ = ಅವಳಿಜವುಳಿಗಳಾದ, ದ್ವೌಪುತ್ರೌ-ಇಬ್ಬರು ಮಕ್ಕಳನ್ನು, ಅಜನಯುತ್=ಪಡೆದರು. ಉರುವೀರ್ಯಃ=ಸಹಿಸಲಶಕ್ಯವಾದ ಪರಾಕ್ರಮವುಳ್ಳ ಶ್ರೀರಾಮರು, ಶತ್ರುಘ್ನತಃ=ಶತೃಘ್ನನಿಂದ, ಲವಣಂ=ಲವಣನಾಮಕ ಅಸುರನನ್ನು, ಉಲ್ಬಣ=ಅತಿ ಕ್ರೂರವಾದ, ಬಾಣ=ಬಾಣದಿಂದ, ದಗ್ಧಂ-ದಹಿಸಲ್ಪಟ್ಟವನನ್ನಾಗಿ ಮಾಡಿಸಿ, ಮಧುರಾಂ-ಮಧುರನಾಮಕವಾದ, ಪುರೀಂ=ಪಟ್ಟಣವನ್ನು, ಕಾರಯಾಮಾಸ = ಏರ್ಪಡಿಶಿದರು.

ತಾತ್ಪರ್ಯ.—ಶ್ರೀರಾಮರು ಸೀತಾದೇವಿಯಲ್ಲಿ ಪರಾಕ್ರಮಿಗಳೂ ಗುಣಾಢ್ಯರೂ ಆದ ಇಂದ್ರ ಮತ್ತು ಅಗ್ನಿ ಸ್ವರೂಪರಾದ, ಕುಶ ಮತ್ತು ಲವನಾಮಕರಾದ ಅವುಳಿಜವುಳಿ ಮಕ್ಕಳನ್ನು ಪಡೆದರು. ಮತ್ತು ಸಹಿಸಲಸಾಧ್ಯವಾದ ಪರಾಕ್ರಮವುಳ್ಳ ರಾಮದೇವರು ಸ್ವಹಸ್ತದಲ್ಲಿದ್ದ ಬಾಣದಿಂದ ಶತೃಘ್ನನ ದೆಶೆಯಿಂದ ಲವಣಾಸುರನನ್ನು ಸಂಹಾರಮಾಡಿಶಿ ಮಧುರಾನಾಮಕ ಪಟ್ಟಣವನ್ನು ಏರ್ಪಡಿಶಿದರು.

**ಶ್ಲೋಕ || ಕೋಟಿತ್ರಯಂ ಸನಿಜಘಾನ ತಥಾಸುರಾಣಾಂ | ಗಂಧರ್ವಜನ್ಮ ಭರತೇನಸತಾಂಚ ಧರ್ಮಂ || ಸಂಶಿಕ್ಷಯನ್ನಯಜದುತ್ತಮ ಕಲ್ಪಕೈಃಸ್ವಂ | ಯಜ್ಞೈರ್ಭವಾಬ್ಜಜಮುಖ ಸತ್ಯಚಿವಾಕ್ಷಯತ್ರ ||೧೮||**

ಅರ್ಥ.—ಸಃ-ಶ್ರೀರಾಮರು, ಗಂಧರ್ವಜನ್ಮ=ಗಂಧರ್ವ ಜನ್ಮವನ್ನು ಹೊಂದಿದ್ದ, ಅಸುರಾಣಾಂ=ದೈತ್ಯರುಗಳ, ಕೋಟಿತ್ರಯಂ=ಮೂರುಕೋಟಿಯನ್ನು, ಭರತೇನ=ಭರತನಿಂದ, ನಿಜಘಾನ – ಸಂಹಾರಮಾಡಿಶಿದರು, ತಥಾ=ಹಾಗೆಯೇ, ಸತಾಂಚ = ಸಜ್ಜನರಿಗೆ, ಧರ್ಮಂ = ಸದ್ಧರ್ಮವನ್ನು, ಶಿಕ್ಷಯನ್-ಶಿಕ್ಷೆಮಾಡಿಸುತ್ತಾ, ಯತ್ರ-ಯಾವ ಯಜ್ಞಗಳಲ್ಲಿ, ಭವಾಬ

ಮುಖಸತ್ಸಚಿವಾಃ=ಭವ=ರುದ್ರದೇವರು, ಅಜ=ಬ್ರಹ್ಮದೇವರು, ಇವರ್ಗ ಗಳು, ಮುಖ=ಮೊದಲಾಗಿವುಳ್ಳ, ಸತ್ಸಚಿವಾಃ=ಸತ್ = ಸಜ್ಜನರುಗಳೇ, ಸಚಿವಾಃ-ಪರಿಚಾರಕರಾಗಿದ್ದಾರೆಯೋ, ತತ್ರ=ಅಂತಹ, ಉತ್ತಮಕಲ್ಪ ಕೈಃ=ಎಥೇಷ್ಟವಾದ ದಕ್ಷಿಣಾ ದಾನಾದಿಗಳುಳ್ಳ, ಯಜ್ಞೈಃ-ಯಜ್ಞಗಳಿಂದ ಸ್ವಂ=ವಿಷ್ಣು ಸ್ವರೂಪರಾದ ತನ್ನನ್ನು ಉದ್ದೇಶಿಸಿ, ಆಯಜತ್ - ಯಜ್ಞ ಮಾಡಿಶಿದರು.

ತಾತ್ಪರ್ಯ.—ಶ್ರೀರಾಮರು ಗಂಧರ್ವ ಜನ್ಮದಲ್ಲಿ ಉದ್ಭವಿಸಿದ್ಧ ಮೂರುಕೋಟಿ ಸಂಖ್ಯಾಕರಾದ ದೈತ್ಯರನ್ನು ಭರತನಿಂದ ಸಂಹಾರಮಾಡಿಶಿ ದರು. ಪ್ರಪಂಚಕ್ಕೆ ಸಮೀಚೀನವಾದ ಧರ್ಮಗಳನ್ನು ಶಿಕ್ಷಿಸಿದವರಾಗಿ ಬ್ರಹ್ಮ ರುದ್ರಾದಿಗಳೇ ಮೊದಲಾದ ಸಮೀಚೀನರಾದ ಹೋತ್ರ ಅಧ್ವರ್ಯು ಮೊದ ಲಾದ ಪರಿಚಾರಕರುಳ್ಳ ಯಜ್ಞಗಳಿಂದ ತಮ್ಮ ಮೂಲಸ್ವರೂಪಭೂತರಾದ ಶ್ರೀವಿಷ್ಣುವನ್ನೇ ಕುರಿತು ಯಜನಮಾಡಿದರು.

**ಶ್ಲೋಕ ॥ ಅಥಶೂದ್ರ ತಪಶ್ಚರ್ಯಾ । ನ್ನಿಹತಂ ವಿಪ್ರಪುತ್ರಕಂ ॥ ಉಜ್ಜೀವ ಯಾಮಾಸವಿಭುಃ । ಹತ್ವಾತಂ ಶೂದ್ರತಾಪಸಂ ॥೧೯॥**

ಅರ್ಥ.—ಅನಂತರ, ಸವಿಭುಃ-ಪ್ರಭುಗಳಾದ ಶ್ರೀರಾಮರು, ಶೂ ದ್ರ = ಶೂದ್ರನು, ತಪಶ್ಚರ್ಯಾತ್=ತಪಸ್ಸು ಮಾಡುವದರ ದೋಷದಿಂದ, ನಿಹತಂ=ಮೃತನಾದ, ವಿಪ್ರಪುತ್ರಕಂ=ಬ್ರಾಹ್ಮಣನ ಪುತ್ರನನ್ನು, ಉಜ್ಜೀ ವಯಾಮಾಸ=ಬದುಕಿಸಿದರು, ತಂ=ಆ, ಶೂದ್ರತಾಪಸಂ – ಶೂದ್ರತಪಸ್ವಿ ಯನ್ನು, ಹತ್ವಾ=ಸಂಹಾರಮಾಡಿದರು.

ತಾತ್ಪರ್ಯ.—ಶ್ರೀರಾಮರು ಯಜ್ಞಮಾಡಿದನಂತರ ತಪಸ್ಸು ಮಾ ಡುತ್ತಿದ್ದ ಶೂದ್ರತಪಸ್ವಿಯನ್ನು ಸಂಹಾರಮಾಡಿ ಶೂದ್ರತಪಶ್ಚರ್ಯದ ದೋ ಷದಿಂದ ಮೃತಪಟ್ಟ ಬ್ರಾಹ್ಮಣ ಪುತ್ರನನ್ನು ಬದುಕಿಸಿದರು.

**ಶ್ಲೋಕ ॥ ಜಂಘುನಾಮಾಸುರಃ ಪೂರ್ವಂ । ಗಿರಿಜಾವರದಾನತಃ ॥ ಬಭೂವ ಶೂದ್ರಃ ಕಲ್ಪಾಯುಃ । ಸಲೋಕಕ್ಷಯಕಾಮ್ಯಯಾ ॥೨೦॥**

ಅರ್ಥ.—ಪೂರ್ವಂ=ಪೂರ್ವದಲ್ಲಿ, ಜಂಘುನಾಮಾ = ಜಂಘುನಾಮಕ ನಾದ, ಅಸುರಃ=ಅಸುರನು, ಲೋಕಕ್ಷಯಕಾಮ್ಯಯಾ=ಪ್ರಪಂಚವನ್ನೆಲ್ಲಾ ನಾಶಮಾಡಬೇಕೆಂಬ ಇಛ್ಛೆಯಿಂದ, ಗಿರಿಜಾವರದಾನತಃ=ಗಿರಿಜಾ-ಪಾರ್ವತೀ

ದೇವಿಯ, ವರದಾನತಃ=ವರಪ್ರಸಾದದಿಂದ, ಕಲ್ಪಾಯುಃ=ಕಲ್ಪಾಂತವಾದ ಆಯುಃಸ್ಸುಳ್ಳವನಾಗಿ, ಶೂದ್ರಃ = ಶೂದ್ರ ಜನ್ಮವುಳ್ಳವನಾಗಿ, ಬಭೂವ= ಆದನು.

ತಾತ್ಪರ್ಯ.—ಪೂರ್ವದಲ್ಲಿ ಜಾಂಘ ಎಂದು ಹೆಸರುಳ್ಳ (ಜಂಘಾಸುರನು) ಗಿರಿಜಾ (ಪಾರ್ವತೀದೇವಿಯ) ವರಪ್ರಸಾದ ಬಲದಿಂದ ಪ್ರಪಂಚಕ್ಕೆ ನಾಶನವುಂಟುಮಾಡಬೇಕೆಂಬ ಉದ್ದೇಶ್ಯದಿಂದ ಕಲ್ಪಾಂತ ಪರಿಯಂತ ಆಯುಃಪ್ರಮಾಣವುಳ್ಳವನಾಗಿ ಶೂದ್ರ ಜನ್ಮದಲ್ಲಿ ಹುಟ್ಟಿದನು.

ವಿಶೇಷಾರ್ಥ.—ತಾನು ಶೂದ್ರನಾಗಿ ತಪಸ್ಸು ಮಾಡಬೇಕೆಂತಲೂ ಲೋಕದಲ್ಲಿ ಶೂದ್ರತಪಶ್ಚರಣ ದೋಷಯುಕ್ತವಾದ್ದರಿಂದ ಶೂದ್ರನಾದವನು ತಪಶ್ಚರಣದಲ್ಲಿ ಪ್ರವರ್ತಿಸಿವ ಅನ್ಯಾಯ ಪ್ರವೃತ್ತಿಯಿಂದ ಲೋಕಕ್ಷಯ ಉಂಟಾಗುತ್ತದೆ ಆದರಿಂದ ತನ್ನ ಇಷ್ಟಸಿದ್ಧಿಯಾಗುವದೆಂಬ ಇಚ್ಛೆಯಿಂದ ಆ ಜಂಘಾಸುರನು ಪಾರ್ವತೀದೇವಿಯುರ ವರದಿಂದ ಕಲಾಂತ ಆಯುಃಪ್ರಮಾಣವುಳ್ಳವನಾಗಿ ಶೂದ್ರ ಜನ್ಮವನ್ನು ಹೊಂದಿದನು.

**ಶ್ಲೋಕ ॥ ತಪಶ್ಚಚಾರ ದುರ್ಬುದ್ಧಿಃ ರಿಚ್ಛನ್ಮಾಹೇಶ್ವರಂ ಪದಂ । ಅನನ್ಯವಧ್ಯಂ ತಂತಸ್ಮಾಜ್ಜಘಾನ ಪುರುಷೋತ್ತಮಃ ॥೨೦॥**

ಅರ್ಥ.—ದುರ್ಬುದ್ಧಿಃ-ದುಷ್ಟಬುದ್ಧಿಯುಳ್ಳ ಆ ಜಂಘಾಸುರನು, ಮಾಹೇಶ್ವರಂ=ರುದ್ರದೇವರ, ಪದಂ-ಪದವಿ( ಪಾರ್ವತೀಪತಿತ್ವ) ಯನ್ನು ಇಛ್ಛ್ನ್ (ಸನ್) = ಅಪೇಕ್ಷಿಸಿದವನಾಗಿ, ತಪಃ-ತಪಸ್ಸನ್ನು, ಚಚಾರ=ಆಚರಿಸಿದನು. ಅತಃ-ಆ ಕಾರಣದಿಂದ, ತಸ್ಮಾತ್-ಪಾರ್ವತಿಯ ವರಪ್ರಸಾದ ಬಲದಿಂದ, ಅನನ್ಯವಧ್ಯಂ=ಶ್ರೀಪರಮಾತ್ಮನ ವಿನಹಾ ಅನ್ಯರಿಂದ ಸಂಹರಿಸಲಸಾಧ್ಯನಾದ, ತಂ=ಆ ಶೂದ್ರನನ್ನು, ಪುರುಷೋತ್ತಮಃ-ಉತ್ತಮ ಪುರುಷರಾದ ಶ್ರೀರಾಮರು, ಜಘಾನ-ಸಂಹಾರಮಾಡಿದರು.

ತಾತ್ಪರ್ಯ.—ಆ ದುರ್ಬುದ್ಧಿಯುಳ್ಳ ಜಂಘಾಸುರನು ಪಾರ್ವತೀಪತಿತ್ವರೂಪವಾದ ರುದ್ರದೇವರ ಪದವಿಯನ್ನು ಹೊಂದಬೇಕೆಂಬ ದುರಾಶೆಯಿಂದ ತಪಶ್ಚರಣವನ್ನು ಆಚರಿಸಿದನು. ಆ ಕಾರಣಧಿಂದ, ಶ್ರೀಪಾರ್ವತಿಯ ವರಪ್ರದಾನದ ಬಲದಿಂದ ಕಲ್ಪಾಯುಸ್ಸುಳ್ಳ, ಶ್ರೀಪರಮಾತ್ಮನಿಂದ ಹೊರತು ಮತ್ತ್ಯಾರಿಂದಲೂ ಸಂಹರಿಸಲಸಾಧ್ಯನಾದ, ಆ ಶೂದ್ರ

ನನ್ನು ಪರಮಪುರುಷ ಸ್ವರೂಪರಾದ ಶ್ರೀರಾಮರು ಸಂಹಾರಮಾಡಿದರು. ಶೂದ್ರನಿಗೆ ತಪಶ್ಚರ್ಯವು ನಿಷೇಧವಾದಾಗ್ಯೂ ತನಗೆ ಯೋಗ್ಯವಲ್ಲದ ಕರ್ಮಾಚರಣೆಮಾಡುತ್ತಿದ್ದ ಆ ಜಂಘಾಸುರನನ್ನು ಪುರುಷೋತ್ತಮರಾದ ಶ್ರೀರಾಮರು ಸಂಹರಿಸಿದರು.

**ಶ್ಲೋಕ ॥ ಶ್ವೇತದತ್ತಾಂ ತಥಾ ಮಾಲಾಂ । ಅಗಸ್ತ್ಯಾ ದಾಪರಾಘವಃ ॥೨೨॥**

ಅರ್ಥ.—ರಾಘವಃ=ಶ್ರೀರಾಮರು, ತಥಾ=ಹಾಗೆಯೇ, ಶ್ವೇತ=ಶ್ವೇತರಾಜನಿಂದ, ದತ್ತಾಂ=ತಮಗಾಗಿ ಕಳುಹಿಸಿಕೊಟ್ಟಿದ್ದ, ಮಾಲಾಂ-ಮಾಲಿಕೆಯನ್ನು, ಅಗಸ್ತ್ಯಾತ್-ಅಗಸ್ತ್ಯಋಷಿಗಳಿಂದ, ಆಪ=ಹೊಂದಿದರು.

ತಾತ್ಪರ್ಯ.—ಮತ್ತು ಶ್ರೀರಾಮರು ಶ್ವೇತರಾಜನು ತಮಗೆ ಕೊಡು ವಂತೆ ಹೇಳಿ ಅಗಸ್ತ್ಯರ ವಶಕ್ಕೆ ಕೊಟ್ಟಿದ್ದ ಪುಷ್ಪಮಾಲಿಕೆಯನ್ನು ಅಗಸ್ತ್ಯಋಷಿ ಗಳ ಹಸ್ತದಿಂದ ತೆಗೆದುಕೊಂಡರು.

**ಶ್ಲೋಕ ॥ ಅನನ್ನ ಯಜ್ಞಕೃಚ್ಛ್ವೇತೋ । ರಾಜಾಕ್ಷುದ್ವಿನಿವರ್ತನಂ ॥ ಕುರ್ವ ನ್ಸ್ವಮಾಂಸೈರ್ಧಾತ್ರೋಕ್ತೋ । ಮಾಲಾಂ ರಾಮಾರ್ಥ ಮರ್ಪ ಯತ್ ॥೨೩॥**

ಅರ್ಥ.—ಅನನ್ನ=ಅನ್ನದಾನವಿಲ್ಲದ, ಯಜ್ಞ=ಯಜ್ಞವನ್ನು, ಕೃತ್=ಯಜನಮಾಡಿದ, ಶ್ವೇತ=ಶ್ವೇತನಾಮಕನಾದ, ರಾಜಾ – ರಾಜನು, ಸ್ವ ಮಾಂಸೈಃ–ತನ್ನ ಶರೀರದ ಮಾಂಸದಿಂದ, ಕ್ಷುತ್=ಕ್ಷುದ್ಬಾಧೆಯ (ಹಸಿವ ನ್ನು) ವಿನಿವರ್ತನಂ=ಪರಿಹಾರವನ್ನು, ಕುರ್ವನ್ (ಸನ್) – ಮಾಡಿಕೊಳ್ಳು ತ್ತಿರುವಾಗ, ಬ್ರಹ್ಮದೇವರನ್ನು ಕಂಡು ಅವರನ್ನು ಕೇಳಿಕೊಳ್ಳಲು, ಧಾ ತ್ರೋಕ್ತಃ (ಸನ್) = ಧಾತ್ರಾ=ಬ್ರಹ್ಮದೇವರಿಂದ, ಉಕ್ತಃ(ಸನ್) – ಹೇಳಿಸಿ ಕೊಂಡವನಾಗಿ, ರಾಮಾರ್ಥಂ=ರಾಮರಿಗೋಸ್ಕರ. ಮಾಲಾಂ = ಮಾಲಿಕೆ ಯನ್ನು, ಅರ್ಪಯತ್=ಅಗಸ್ತ್ಯರಮೂಲಕ ಸಮರ್ಪಿಸಿದನು.

ತಾತ್ಪರ್ಯ.—ಈ ಶ್ವೇತರಾಜನು ಅನ್ನದಾನವಿಲ್ಲದೆ ಶುಷ್ಕಯಜ್ಞ ಗಳನ್ನು ಮಾಡಿದ್ದನಾದುದರಿಂದ ಅವನಿಗೆ ಹಸಿವು ಪರಿಹಾರಮಾಡಿಕೊಳ್ಳುವ ದಕ್ಕೆ ಅನ್ನ ಆಹಾರಗಳಿಗೆ ಅವಕಾಶವಿಲ್ಲವಾಯಿತು, ಆದ್ದರಿಂದ ಅವನಿಗೆ ಕ್ಷುದ್ಬಾಧೆಯುಂಟಾದಾಗ ಅನ್ನಾದಿಗಳು ಸಿಕ್ಕದೆ ತನ್ನ ಶರೀರಗತವಾದ ಮಾಂಸವನ್ನೇ ಕಿತ್ತು ತಿನ್ನುತ್ತಾ ಹಸಿವು ಪರಿಹಾರ ಮಾಡಿಕೊಳ್ಳುತ್ತಿದ್ದ

ನು. ಹೀಗಿರುವಲ್ಲಿ ತನ್ನ ಕ್ಷುದ್ಬಾಧೆ ಪರಿಹಾರವಾಗಲು ಉಪಾಯವೇ ನೆಂದು ಬ್ರಹ್ಮದೇವರನ್ನು ಕೇಳಿಕೊಂಡನು. ಆ ಬ್ರಹ್ಮದೇವರು ಈ ಶ್ವೇತ ರಾಜನನ್ನು ಕುರಿತು ನೀನು ಅನ್ನದಾನವಿಲ್ಲದೆ ಯಜ್ಞವನ್ನು ಮಾಡಿದಕಾರಣ ನಿನಗೆ ಕ್ಷುದ್ಬಾಧೆಯುಂಟಾಗಿದೆ. ಈ ಕ್ಷುದ್ಬಾಧಾಪರಿಹಾರವಾಗುವುದಕ್ಕಾಗಿ ಶ್ರೀರಾಮರಿಗೆ ಒಂದು ಮಾಲಿಕೆಯನ್ನು ಅಗಸ್ತ್ಯಋಷಿಗಳ ಮೂಲಕ ಸಮ ರ್ಪಣೆಮಾಡಿಸು ಎಂದು ಹೇಳಿದರು. ಅವನು ಅದೇ ಪ್ರಕಾರ ಮಾಲಿಕೆ ಯನ್ನು ಅಗಸ್ತ್ಯರಲ್ಲಿ ಕೊಟ್ಟು ಶ್ರೀರಾಮರಿಗೆ ಸಮರ್ಪಣೆ (ಮಾಡಿಸಿ) ಎಂದು ಹೇಳಿದನು.

ಶ್ಲೋಕ ॥ ಅಗಸ್ತ್ಯಾಯನಸಾಕ್ಷಾತ್ತು । ರಾಮೇದದ್ಯಾದಯಂ ನೃಪಃ ॥ ಕ್ಷು ದಭಾವಮಾತ್ರ ಫಲದಂ । ನಸಾಕ್ಷಾದ್ರಾಘವೇಽರ್ಪಿತಂ ॥೨೪॥

ಶ್ಲೋಕ ॥ ಕ್ಷುದಭಾವಮಾತ್ರ ಮಾಕಾಂಕ್ಷನ್ । ಮಾಮಸೌ ಪರಿಪೃಚ್ಛತಿ ॥ ವ್ಯವಧಾನಸ್ತತೋರಾಮೇ । ದದ್ಯಾಚ್ಛ್ವೇತ ಇತಿಪ್ರಭುಃ ॥ ಮತ್ವಾ ಬ್ರಂಹ್ಮಾದಿಶನ್ಮಾಲಾಂ । ಪ್ರದಾತುಂ ಕುಂಭಯೋನಯೇ ॥೨೫॥

ಅರ್ಥ.—ಅಸೌಶ್ವೇತಃ=ಈ ಶ್ವೇತರಾಜನು, ಕ್ಷುದಭಾವಮಾತ್ರಂ= ಹಸಿವೆಯಭಾಧೆ ಇಲ್ಲದಿರುವದು ಮಾತ್ರವನ್ನೇ, ಆಕಾಂಕ್ಷನ್=ಅಪೇಕ್ಷಿಸಿದವ ನಾಗಿ, ಮಾಂ–ನನ್ನನ್ನು, ಪರಿಪೃಚ್ಛತಿ=ಪರಿಹಾರೋಪಾಯವನ್ನು ಕೇಳು ತ್ತಾನೆ, ರಾಘವೇ–ಶ್ರೀರಾಮರಲ್ಲಿ, ಸಾಕ್ಷಾತ್–ಪ್ರತ್ಯಕ್ಷವಾಗಿ, ಅರ್ಪಿತಂ– ಅರ್ಪಣಮಾಡೋಣವು, ಕ್ಷುದಭಾವಮಾತ್ರಫಲದಂ=ಕ್ಷುತ್ಪರಿಹಾರ ಮಾ ತ್ರವೇ ಫಲದಾಯಕವಾದದ್ದು, ನಭವತಿ–ಆಗುವುದಿಲ್ಲವು. ಕಿಂತು–ಮ ತ್ತೇನೆಂದರೆ—ಸರ್ವಪುರುಷಾರ್ಥಫಲದಂಭವತಿ=ಸಮಸ್ತವಾದ ಮೋಕ್ಷಾದಿ ಪುರುಷಾರ್ಥಫಲಗಳೂ ಆಗುತ್ತವೆ. ತತಃ=ಆದಕಾರಣ, ಅಯಂನೃಪಃ= ಆ ರಾಜನು, ರಾಮೇ=ಶ್ರೀರಾಮರಲ್ಲಿ, ( ಮಾಲಿಕಾಂ=ಮಾಲಿಕೆಯನ್ನು) ಸಾ ಕ್ಷಾತ್ತು–ಪ್ರತ್ಯಕ್ಷವಾಗಿ, ನದದ್ಯಾತ್=ಕೊಡಬಾರದು. ಅಗಸ್ತ್ಯಾಯ= ಅಗಸ್ತ್ಯರಿಗೆ, ದದ್ಯಾತ್=ಕೊಡಲಿ (ಏತಕ್ಕೆಂದರೆ) ॥೨೪॥

ಅಸೌ–ಈ ಶ್ವೇತರಾಜನು, ಕ್ಷುದಭಾವಮಾತ್ರಂ=ಕ್ಷುದ್ಬಾಧೆ ಪರಿಹಾರ ವನ್ನು ಮಾತ್ರ, ಆಕಾಂಕ್ಷನ್–ಅಪೇಕ್ಷಿಸಿಕೊಂಡು, ಮಾಂ=ನನ್ನನ್ನು, ಪರಿ ಪೃಚ್ಛತಿ=ತತ್ಪರಿಹಾರೋಪಾಯವನ್ನು ಕೇಳಿಕೊಳ್ಳುತ್ತಾನೆ. ತತಃ=ಅದುದ

ರಿಂದ, ಪ್ರಭುಃ-ರಾಜನಾದ, ಶ್ವೇತಃ=ಶ್ವೇತನು, ರಾಮೇ=ಶ್ರೀರಾಮರಲ್ಲಿ (ಮಾಲಿಕೆಯನ್ನು) ವ್ಯವಧಾನತ ಏವ=ವ್ಯಕ್ತಿವ್ಯವಧಾನದಿಂದ (ಸ್ವತಃ ಅಲ್ಲದೆ ಮತ್ತೊಬ್ಬರಾದ ಅಗಸ್ತ್ಯರ ಹಸ್ತದಿಂದ) ದದ್ಯಾತ್-ಕೊಡಲಿ, ಇತಿ-ಹೀಗೆಂದು, ಬ್ರಹ್ಮಾ=ಬ್ರಹ್ಮದೇವರು, ಮತ್ವಾ-ತಿಳಿದು, ಮಾಲಾಂ=ಮಾಲಿಕೆಯನ್ನು, ಕುಂಭಯೋನಯೇ=ಕುಂಭವೇ ಉತ್ಪತ್ತಿ ಸ್ಥಾನವಾಗಿವುಳ್ಳ ಅಗಸ್ತ್ಯರಿಗೆ, ಪ್ರದಾತುಂ=ಕೊಡುವುದಕ್ಕಾಗಿ, ಆದಿಶತ್=ಶ್ವೇತರಾಜನಿಗೆ ಆಜ್ಞಾಪಿಸಿದರು

ತಾತ್ಪರ್ಯ.—ರಾಮರಿಗೆ ಮಾಲಿಕೆಯನ್ನು ಸಾಕ್ಷಾತ್ ಸಮರ್ಪಣೆ ಮಾಡದೆ ಅಗಸ್ತ್ಯರ ಮೂಲಕ ಕೊಡುವದಾಗಿ ಬ್ರಹ್ಮದೇವರು ಹೇಳಿದರು. ಏತಕ್ಕೆಂದರೆ.—ಸಾಕ್ಷಾತ್ತಾಗಿ ಸಮರ್ಪಣಮಾಡುವಿಕೆಯಿಂದ ಕೇವಲ ಕ್ಷುದ್ಬಾಧಾ ಪರಿಹಾರರೂಪವಾದ ಫಲಮಾತ್ರವೇ ಆಗುವುದಲ್ಲದೆ ಮೋಕ್ಷಾದಿ ಸಕಲ ಪುರುಷಾರ್ಥಗಳೂ ಫಲದಾಯಕವಾಗುತ್ತವೆ. ಆದುದರಿಂದ ಈ ರಾಜನು ಕೇವಲ ಕ್ಷುದ್ಬಾಧಾ ಪರಿಹಾರದ ಉಪಾಯವನ್ನು ಮಾತ್ರ ಕೇಳಿಕೊಂಡಿದ್ದಾನೆಯೇ ಹೊರತು ಪುರುಷಾರ್ಥ ಪ್ರಾಪ್ತಿ ಫಲವನ್ನು ಕೇಳಿಕೊಳ್ಳಲಿಲ್ಲ. ಈ ಶ್ವೇತರಾಜನು ರಾಮರಲ್ಲಿ ಮಾಲಿಕೆಯನ್ನು ಸ್ವಯಂ ಸಮರ್ಪಣೆ ಮಾಡದೇ ಆಗಸ್ತ್ಯರಿಗೇ ಕೊಡಬೇಕೆಂದು ಆಜ್ಞಾಪಿಸಿದರು.

**ಶ್ಲೋಕ ॥ ತಾಮಗಸ್ತ್ಯ ಕರಪಲ್ಲವಾರ್ಪಿತಾಂ । ಭಕ್ತ ಏಷ ಮಮ ಕುಂಭಸಂಭವಃ ॥ ಇತ್ಯವೇತ್ಯ ಜಗೃಹೇ ಜನಾರ್ದನ । ಸ್ತೇನಸಂಸ್ತುತ ಉಪಾಗಮತ್ಪುರಂ ॥೨೬॥**

ಅರ್ಥ.—ಜನಾರ್ದನಃ - ದುಷ್ಟಜನಸಂಹಾರಕರಾದ ಶ್ರೀರಾಮರು, ಏಷಃ=ಕುಂಭಸಂಭವಃ-ಕುಂಭದಲ್ಲಿ ಉತ್ಪನ್ನರಾದ (ಅಗಸ್ತ್ಯರು) ಮಮ=ನನಗೆ, ಭಕ್ತಃ=ಭಕ್ತರು, ಇತಿ=ಹೀಗೆಂದು, ಅವೇತ್ಯ = ಭಾವಿಸಿಕೊಂಡು, ಅಗಸ್ತ್ಯ = ಅಗಸ್ತ್ಯಋಷಿಗಳ, ಕರಪಲ್ಲವ = ಚಿಗುರುಗಳಿಗೆ ಸಮಾನವಾದ ಹಸ್ತಗಳಿಂದ, ಅರ್ಪಿತಾಂ-ಸಮರ್ಪಿಸಲ್ಪಟ್ಟ, ತಾಂ=ಆ ಶ್ವೇತರಾಜನಿಂದ ಕೊಡಲ್ಪಟ್ಟ ಮಾಲಿಕೆಯನ್ನು, ಜಗೃಹೇ = ತೆಗೆದುಕೊಂಡರು. ತೇನ=ಆ ಅಗಸ್ತ್ಯಋಷಿಗಳಿಂದ, ಸಂಸ್ತುತಃ (ಸನ್) = ಸ್ತುತಿಸಲ್ಪಟ್ಟವರಾಗಿ, ಪುರಂ-ಅಯೋಧ್ಯಾನಗರವನ್ನು ಕುರಿತು, ಉಪಾಗಮತ್-ಹೊರಟುಬಂದರು

ತಾತ್ಪರ್ಯ.—ಶ್ರೀರಾಮರು ಮಾಲಿಕೆಯನ್ನು ತಂದಿರುವ ಈ ಅಗಸ್ತ್ಯರು ನನ್ನ ಭಕ್ತರೇ ಆಗಿರುವುದರಿಂದ ಈ ಮಾಲಿಕೆಯನ್ನು ನಾನು ತೆಗೆದುಕೊಳ್ಳತಕ್ಕದ್ದು ಯುಕ್ತವೇ ಎಂದು ತಿಳಿದು ಶ್ವೇತದತ್ತವಾದ ಮಾಲಿಕೆಯನ್ನು ತೆಗೆದುಕೊಂಡು ಅಗಸ್ತ್ಯರಿಂದ ಸ್ತೋತ್ರಮಾಡಿಸಿಕೊಂಡವರಾಗಿ ಅಯೋಧ್ಯಾನಗರಕ್ಕೆ ಹೊರಟುಬಂದರು.

ಅವತಾರಿಕೆ.—ಈ ಶ್ಲೋಕದಲ್ಲಿ ಅಥ ಎಂಬ ಶಬ್ಧ ಪ್ರಯೋಗಮಾಡಿರುವದರಿಂದ ಆ ಅಥ ಶಬ್ಧವು ಕಥಾಂತರವನ್ನು ಹೇಳುತ್ತದೆಂದು ಸೂಚಿತವಾಗುತ್ತದೆ. ಆದುದರಿಂದ ಬೇರೆ ಒಂದು ಕಥೆಯು ನಿರೂಪಣಮಾಡಲ್ಪಟ್ಟಿದೆ

**ಶ್ಲೋಕ || ಅಥಕೇಚಿದಾಸುರಸುರಾಃ ಸುರಾಣಕಾ | ಇತ್ಯುರುಪ್ರಥಿತಪೌರುಷಾಃ ಪುರಾ || ತೇತಪಃಸ್ಸುಮಹದಾಸ್ಥಿತಾವಿಭುಂ | ಪದ್ಮಸಂಭವ ಮವೇಕ್ಷ್ಯ ಚೋಚಿರೇ ||೨೭||**

ಅರ್ಥ.—ಅಥ-ಅನಂತರದಲ್ಲಿ, ಪುರಾ=ಪೂರ್ವದಲ್ಲಿ, ಉರುಪ್ರಥಿತ ಪೌರುಷಾಃ=ಅತ್ಯಂತ ಪ್ರಸಿದ್ಧವಾದ ಪೌರುಷಾಃ=ಪರಾಕ್ರಮುವುಳ್ಳ, ಸುರಾಣಕಾಃ - ಸುರಾಣಕರೆಂದು ಹೆಸರುಳ್ಳ, ಕೇಚಿತ್=ಕೆಲವು, ಅಸುರಾಃ-ದೈತ್ಯರು, ಆಸುಃ=ಇದ್ದರು. ತೇ-ಆ ದೈತ್ಯರು, ಮಹತ್ = ಪ್ರಬಲವಾದ, ತಪಸ್ಸು=ತಪಸ್ಸನ್ನ, ಆಸ್ಥಿತಾಃ=ಮಾಡಿದವರಾಗಿ, ಪದ್ಮಸಂಭವಂ-ಕಮಲದಲ್ಲಿ ಉತ್ಪನ್ನರಾದ, ವಿಭುಂ=ಬ್ರಹ್ಮದೇವರನ್ನು, ಅವೇಕ್ಷ್ಯಚ - ಪ್ರತ್ಯಕ್ಷೀಕರಿಸಿಕೊಂಡು, ಊಚಿರೇ-ಮಾತನಾಡಿದರು.

ತಾತ್ಪರ್ಯ.—ಪೂರ್ವದಲ್ಲಿ ಅತ್ಯಂತ ಪರಾಕ್ರಮಶಾಲಿಗಳೆಂದು ಪ್ರಸಿದ್ಧರಾದ ಸುರಾಣಕ ನಾಮಕರಾದ ಕೆಲವು ದೈತ್ಯರಿದ್ದರು. ಇವರುಗಳು ಮಹತ್ತರಗಳಾದ ತಪಃಸುಗಳನ್ನು ಮಾಡಿ ಕಮಲೋದ್ಭವರಾದ ಬ್ರಹ್ಮದೇವರನ್ನು ಪ್ರತ್ಯಕ್ಷವಾಗಿ ನೋಡಿ ಅವರನ್ನು ಕುರಿತು ಈ ಪ್ರಕಾರ ಮಾತನಾಡಿದರು.

**ಶ್ಲೋಕ || ಭೂರಿಪಾಪ ಕೃತಿನೋಽಪಿ ನಿಶ್ಚಯಾ | ನ್ಮುಕ್ತಿಮಾಪ್ನುಮ ಉದಾರ ಸದ್ಗುಣ || ಇತ್ಯುದೀರಿತಮುಜೋವಧಾರ್ಯ ತತ್ಸ್ಮಾಹಚ ಪ್ರಹಸಿತಾನನಃಪ್ರಭುಃ ||೨೮||**

ಅರ್ಥ.—ಹೇ ಉದಾರಸದ್ಗುಣ=ಉತ್ಕೃಷ್ಟಗಳಾದ ಸಮೀಚೀನವಾದ ಗುಣಗಳುಳ್ಳ (ಬ್ರಹ್ಮದೇವರೇ) (ವಯಂ-ನಾವುಗಳು) ಭೂರಿ=ಬಹಳವಾದ, ಪಾಪ=ಪಾಪಗಳನ್ನು, ಕೃತಿನೋಪಿ=ಮಾಡಿರತಕ್ಕವರಾಗಿದ್ದಾಗ್ಯೂ, ನಿಶ್ಚಯಾತ್-ಖಂಡಿತವಾಗಿ, ಮುಕ್ತಿಂ=ಮೋಕ್ಷವನ್ನು, ಆಪ್ನುಮಃ = ಹೊಂದಬೇಕು. ಇತಿ-ಈ ಪ್ರಕಾರ, ಉದೀರಿತಃ=ಹೇಳಲ್ಪಟ್ಟ, ಅಜಃ=ಬ್ರಹ್ಮದೇವರು, ತತ್=ಆ ವಾಕ್ಯವನ್ನು, ಅವಧಾರ್ಯ=ಗಮನಿಸಿ, ಪ್ರಹಸಿತಾ=ಮಂದಹಾಸಯುಕ್ತವಾದ, ಆನನಃ=ಮುಖವುಳ್ಳವರಾಗಿ, ಪ್ರಭುಃ-ಪ್ರಭುವಾದ ಬ್ರಹ್ಮದೇವರು, ಪ್ರಾಹಚ=ಹೇಳಿದರು.

ತಾತ್ಪರ್ಯ.—ಆ ಸುರಾಣಕ ದೈತ್ಯರು ಬ್ರಹ್ಮದೇವರನ್ನು ಕುರಿತು ಮಹತ್ತರವಾದ ತಪಸ್ಸುಮಾಡಿ ಪ್ರತ್ಯಕ್ಷೀಕರಿಸಿಕೊಂಡು ವರವನ್ನು ಕೇಳಿಕೊಳ್ಳುತ್ತಾರೆ.—ಹೇಗೆಂದರೆ ಹೇ ಮಹಾದಾತರಾದ ಉತ್ಕೃಷ್ಟ ಗುಣಗಳುಳ್ಳ ಬ್ರಹ್ಮದೇವರೇ ಮಹತ್ತರಗಳಾದ ಪಾಪಗಳನ್ನು ಮಾಡಿದವರಾಗಿದ್ದಾಗ್ಯೂ ನಾವುಗಳು ಖಂಡಿತವಾಗಿಯೂ ಮೋಕ್ಷವನ್ನು ಪಡೆಯಬೇಕು. ಈ ಮಾತನ್ನು ಕೇಳಿ ಬ್ರಹ್ಮದೇವರು ನಗುಮುಖವುಳ್ಳವರಾಗಿ ಆ ದೈತ್ಯರನ್ನು ಕುರಿತು ಮುಂದೆ ಹೇಳುವ ಪ್ರಕಾರ ಹೇಳಿದರು.

**ಶ್ಲೋಕ ॥ ಯಾವದೇವ ರಮಯಾ ರಮೇಶ್ವರಂ । ನೋ ವಿಯೋಜಯಥ ಸದ್ಗುಣಾರ್ಣವಂ ॥ ತಾವದುಚ್ಚ ಮಪಿ ದುಷ್ಕೃತಂ ಭವ । ನ್ಮೋಕ್ಷಮಾರ್ಗ ಪರಿಪಂಥಿನೋಭವೇತ್ ॥೨೯॥**

ಅರ್ಥ.—ಪ್ರಭುಃ=ಸ್ವಾಮಿಯಾದ ಬ್ರಹ್ಮದೇವರು, ತಾನ್=ಆ ದೈತ್ಯರನ್ನು ಕುರಿತು, ಯೂಯಂ-ನೀವುಗಳು, ಸದ್ಗುಣಾರ್ಣವಂ-ಸಮೀಚೀನವಾದ ಗುಣಗಳಿಂದ ಸಮುದ್ರಪ್ರಾಯರಾದ, ರಮೇಶ್ವರಂ = ಲಕ್ಷ್ಮೀಪತಿಯಾದ, ಶ್ರೀಹರಿಯನ್ನು (ರಾಮರನ್ನು) ರಮಯಾಸಹ=ಲಕ್ಷ್ಮೀದೇವಿಯರಿಂದ, ಯಾವದೇವ-ಯಾವತ್ಪರ್ಯಂತರವಾಗಿ, ನೋವಿಯೋಜಯಥ-ವಿಯೋಗವನ್ನು ಮಾಡಿಸುವದಿಲ್ಲವೋ, ತಾವತ್=ಆವರೆವಿಗೂ, ದುಷ್ಕೃತಂ-ನಿಮ್ಮಗಳ ಮಹಾಪಾತಕಗಳು, ಉಚ್ಚಮಪಿ=ಮಹಾಪ್ರಬಲಗಳಾಗಿದ್ದಾಗ್ಯೂ ಭವನ್ಮೋಕ್ಷಮಾರ್ಗಪರಿಪಂಥಿ—ಭವತ್=ನಿಮ್ಮಗಳಿಗೆ, ಮೋಕ್ಷಮಾರ್ಗ-ಮೋಕ್ಷಮಾರ್ಗಕ್ಕೆ ಪರಿಪಂಥಿ=ಬಾಧಕವು, ನೋಭವೇತ್=ಆಗುವದಿಲ್ಲವು.

ತಾತ್ಪರ್ಯ.—ಬ್ರಹ್ಮದೇವರು ಆಸುರಾಣಕ ದೈತ್ಯರಿಗೆ ಹೇಳುತ್ತಾರೆ ಯೆಂದರೆ ನೀವುಗಳು ರಮೇಶನಾದ, ಸದ್ಗುಣಗಳಿಗೆ ಸಮುದ್ರಸ್ಥಾನೀಯು ನಾದ ಶ್ರೀಹರಿಗೂ (ರಾಮರಿಗೂ) ಮತ್ತು ರಮಾಸ್ವರೂಪಳಾದ ಶೀತಾದೇವಿ ಗೂ ವಿಯೋಗವನ್ನು ಯಾವ ಪರಿಯಂತರ ಉಂಟುಮಾಡುವದಿಲ್ಲವೋ ಆ ಪರ್ಯಂತರ ನಿಮ್ಮ ಪಾತಕಗಳು ಬಹು ಕ್ರೂರ ಮತ್ತು ಪ್ರಬಲಗಳಾಗಿ ದ್ದಾಗ್ಯೂ ಅವು ನಿಮಗೆ ಮೋಕ್ಷಮಾರ್ಗಕ್ಕೆ ವಿರೋಧಿಗಳಾಗುವುದಿಲ್ಲ.

ವಿಶೇಷಾಭಿಪ್ರಾಯ.—ಈ ಸುರಾಣಕರು ದೈತ್ಯರು ತಮೋಯೋ ಗ್ಯರು, ಮೋಕ್ಷವನ್ನು ಹೊಂದುವುದಕ್ಕೆ ಅರ್ಹರಲ್ಲ. ಇಂತಹ ಅಸುರರು ತಾವು ಅತ್ಯುಗ್ರವಾದ ದುಷ್ಕೃತ್ಯಗಳನ್ನು ಮಾಡಿದ್ದಾಗ್ಯೂ ಮೋಕ್ಷಕ್ಕೆ ಹೋಗ ಬೇಕೆಂದು ಬ್ರಹ್ಮದೇವರನ್ನು ಕುರಿತು ವರವನ್ನು ಕೇಳಿಕೊಂಡರು. ತಮಗೆ ಅನರ್ಹವಾದ ವರವನ್ನು ಕೇಳಿಕೊಂಡದ್ದರಿಂದ ಬ್ರಹ್ಮದೇವರಿಗೆ ಆಶ್ಚರ್ಯ ವುಂಟಾಗಿ ನಗುತ್ತಾ ಉಪಾಯಾಂತರ (ಮರ್ಮವಾದ) ವರವನ್ನು ಕೊಟ್ಟ ರು. ಅದೇನೆಂದರೆ—ನೀವುಗಳು ಸದ್ಗುಣಪೂರ್ಣನಾದ, ರಮಾಕಾಂತನಾದ ಶ್ರೀಪರಮಾತ್ಮನಿಗೂ (ರಾಮರಿಗೂ) ನಿತ್ಯಾವಿಯೋಗಿನಿಯಾದ ರಮಾಸ್ವರೂ ಪಳಾದ ಶೀತಾದೇವಿಗೂ ವಿಯೋಗವನ್ನು ಉಂಟುಮಾಡಬಾರದು. ಹಾಗೆ ವಿಯೋಗವನ್ನು ಎಷ್ಟು ಪರಿಯಂತರ ಉಂಟುಮಾಡುವದಿಲ್ಲವೋ ಅಷ್ಟು ಪರಿ ಯಂತರ ನಿಮ್ಮಗಳ ಸ್ವಮಾತೃಗಮನ ಮತ್ತು ಬ್ರಹ್ಮಹತ್ಯಾದಿ ಮಹಾಪಾತ ಕಗಳು ಎಷ್ಟು ಬಲವಾಗಿದ್ದಾಗ್ಯೂ ಅವು ನಿಮ್ಮ ಮೋಕ್ಷಸಾಧನೆಗೆ ಅನುಕೂ ಲವಾದ ವಿಷ್ಣುಭಕ್ತ್ಯಾದಿಗಳಿಗೆ ವಿರೋಧಗಳಾಗುವುದಿಲ್ಲವು. ಮೋಕ್ಷವನ್ನು ಹೊಂದುತ್ತೀರಿ. ಅನ್ಯಥಾ ಶೀತಾರಾಮರಿಗೆ ವಿಯೋಗ ಉಂಟುಮಾಡಿದ್ದೇ ಆದರೆ ಅದು ಮಾತ್ರ ನಿಮ್ಮ ಮೋಕ್ಷ ಮಾರ್ಗಕ್ಕೆ ವಿರೋಧವಾಗುತ್ತದೆ. ನಿಮಗೆ ಮೋಕ್ಷ ಪ್ರಾಪ್ತಿಯಾಗುವುದಿಲ್ಲ. ಎಂದು ಮರ್ಮಯುಕ್ತವಾದ ವರವನ್ನು ಕೊಟ್ಟರು ಎಂದು ಅಭಿಪ್ರಾಯವು.

**ಶ್ಲೋಕ ॥ ಇತ್ಯುದೀರಿತ ಮವೇತ್ಯತೇ ಸುರಾಃ । ಕ್ಷಿಪ್ರಮೋಕ್ಷ ಗಮನೋತ್ಸು ಕಾಃ ಕ್ಷಿತೌ ॥ ಸಾಧನೋಪಚಯ ಕಾಂಕ್ಷಿಣೋಹರೌ । ಶಾಸತಿಕ್ಷಿತಿ ಮ ಶೇಷತೋಭವನ್ ॥೩೦॥**

ಅರ್ಥ.—ಇತಿ=ಈ ರೀತಿಯಾಗಿ, ಉದೀರಿತಂ=ಹೇಳಲ್ಪಟ್ಟದ್ದನ್ನು, ಅವೇತ್ಯ=ತಿಳಿದುಕೊಂಡು, ಕ್ಷಿಪ್ರ=ಶೀಘ್ರವಾಗಿ, ಮೋಕ್ಷಗಮನ = ಮೋಕ್ಷಕ್ಕೆ ಹೋಗಬೇಕೆಂದು ಉತ್ಪನ್ನವಾದ, ಉತ್ಸುಕಾಃ-ಉತ್ಸಾಹವುಳ್ಳ, ತೇ-ಆ, ಅಸುರಾಃ=ಸುರಾಣಕ ದೈತ್ಯರು, ಸಾಧನ = ಮೋಕ್ಷಸಾಧನದ, ಉಪಚಯ=ಆಧಿಕ್ಯವನ್ನು, ಕಾಂಕ್ಷಿಣಃಸಂತಃ=ಅಪೇಕ್ಷಿಸಿಕೊಂಡವರಾಗಿ, ಹರೌ-ಶ್ರೀಹರಿಯಾದ (ಶ್ರೀರಾಮರು) ಕ್ಷಿತಿಂ=ಭೂಲೋಕವನ್ನು, ಶಾಸತಿಸತಿ-ಆಳುತ್ತಿರಲಾಗಿ, ಕ್ಷಿತೌ=ಭೂಲೋಕದಲ್ಲಿ, ಅಶೇಷತಃ-ಸಮಗ್ರವಾಗಿ, ಭವನ್=ಹುಟ್ಟಿದರು.

ತಾತ್ಪರ್ಯ.—ಬ್ರಹ್ಮದೇವರಿಂದ ಹೇಳಲ್ಪಟ್ಟ ವಾಕ್ಯವನ್ನು ತಿಳಿದುಕೊಂಡು ಜಾಗ್ರತೆಯಾಗಿ ಮೋಕ್ಷಕ್ಕೆ ಹೋಗಬೇಕೆಂದು ಉತ್ಸುಕರಾದ ಆ ರಾಕ್ಷಸರು ರಾಮರು ರಾಜ್ಯಪರಿಪಾಲನಮಾಡುತ್ತಿರುವ ಕಾಲದಲ್ಲಿ ಅಧಿಕವಾದ ಮೋಕ್ಷಸಾಧನಾಪೇಕ್ಷೆಯುಳ್ಳವರಾಗಿ ಭೂಲೋಕದಲ್ಲಿ ಸರ್ವತ್ರ ಹುಟ್ಟಿದರು.

**ಶ್ಲೋಕ ॥ ತಾನನಾದಿಕೃತ ದೋಷ ಸಂಚಯೈ । ರ್ಮೋಕ್ಷಮಾರ್ಗ ಗತಿ**
**ಯೋಗ್ಯತೋ ಜ್ಝಿತಾನ್ ॥ ಮೈಥಿಲಸ್ಯ ತನಯಾ ವ್ಯಚಾಲಯ ।**
**ನ್ಮಾಯಯಾ ಸ್ವತನುವಾ ಸ್ವಮಾರ್ಗತಃ ॥೩೧॥**

ಅರ್ಥ.—ಅನಾದಿ - ಬಹುಕಾಲದಿಂದಲೂ, ಕೃತ - ಮಾಡಲ್ಪಟ್ಟ, ದೋಷ=ಪಾತಕಗಳ, ಸಂಚಯೈಃ=ಸಮೂಹಗಳಿಂದ, ಮೋಕ್ಷಮಾರ್ಗ-ಮೋಕ್ಷಮಾರ್ಗದ, ಗತಿ-ಪ್ರಾಪ್ತಿಯಿಂದ, ಉಜ್ಝಿತಾನ್ = ಭ್ರಷ್ಟರಾದ, ತಾನ್=ಅಸುರಾಣಕರನ್ನು, ಮೈಥಿಲಸ್ಯ - ಜನಕರಾಜನ, ತನಯಾ - ಮಗಳಾದ ಶೀತಾದೇವಿಯರು, ಸ್ವತನುವಾ - ಸ್ವಸ್ವರೂಪಭೂತವಾದ ದುರ್ಗಾರೂಪವಾದ, ಮಾಯಯಾ=ಮೋಹದಿಂದ ( ತಾನ್=ಆ ರಾಕ್ಷಸರನ್ನು) ಸ್ವಮಾರ್ಗತಃ-ಸ್ವತಂತ್ರರೂಪನಾದ ಶ್ರೀವಿಷ್ಣುವಿನ ನಿಮಿತ್ತಕವಾದ ಜ್ಞಾನಮಾರ್ಗದ್ವೆಶೆಯಿಂದ, ವ್ಯಚಾಲಯತ್=ತಪ್ಪಿಸಿಬಿಟ್ಟರು.

ತಾತ್ಪರ್ಯ.—ಬಹುಕಾಲದಿಂದಲೂ ಮಾಡಲ್ಪಟ್ಟ ಮಹಾಪಾತಕಗಳ ದೋಷದಿಂದ ಮೋಕ್ಷಪ್ರಾಪ್ತಿಮಾರ್ಗದಿಂದ ದೂರರಾದ ಆ ಸುರಾಣಕ ದೈತ್ಯರನ್ನು ಶೀತಾದೇವಿಯರು, ಸ್ವಸ್ವರೂಪಭೂತವಾದ ದುರ್ಗಾ ಮಾಯೆ

ಯಿಂದ ಮೋಹಗೊಳಿಸಿ, ಸರ್ವತಂತ್ರಸ್ವತಂತ್ರನಾದ, ಶ್ರೀವಿಷ್ಣುಪದ ಪ್ರಾಪ್ತಿರೂಪವಾದ ಮೋಕ್ಷಮಾರ್ಗದಿಂದ ತಪ್ಪಿಸಿದರು.

**ಶ್ಲೋಕ ॥ ಆಜ್ಞಯೈವಹಿ ಹರೇಸ್ತು ಮಾಯಯಾ । ಮೋಹಿತಾಸ್ತು ದಿತಿಜಾವ್ಯ ನಿಂದಯನ್ ॥ ರಾಘವೋ ನಿಶಿಚರಾಹೃತಾಂ ಪುನಃ । ಜಾನಕೀಂ ಜಗೃಹ ಇತ್ಯನೇಕಶಃ ॥೩೨॥**

ಅರ್ಥ.—ಹರೇಸ್ತು-ಶ್ರೀಪರಮಾತ್ಮನ, ಆಜ್ಞಯೈವ=ಸಂಕಲ್ಪಾನುಸಾರವಾಗಿ, ಮಾಯಯಾ=ದುರ್ಗಾದೇವಿಯರ ಮಾಯೆಯಿಂದ, ಮೋಹಿತಾಃ=ಮೋಹಿತರಾದ, ದಿತಿಜಾಸ್ತು=ಆ ದೈತ್ಯರು, ರಾಘವಃ - ಶ್ರೀರಾಮಚಂದ್ರನು, ನಿಶಿಚರ - ರಾವಣನಿಂದ. ಅಪಹೃತಾಂ = ಅಪಹರಿಸಿಕೊಂಡು ಹೋಗಿದ್ದ, ಜಾನಕೀಂ=ಶೀತಾದೇವಿಯರನ್ನು, ಪುನಃ=ಮತ್ತೆ, ಜಗೃಹೇ-ಪರಿಗ್ರಹಮಾಡಿದರು. ಇತಿ=ಹೀಗೆಂದು, ಅನೇಕಶಃ-ಬಹುಪ್ರಕಾರವಾಗಿ, ವ್ಯನಿಂದಯತ್=ನಿಂದನೆಮಾಡಿದರು.

ತಾತ್ಪರ್ಯ.—ಶ್ರೀಪರಮಾತ್ಮನ ಪ್ರೇರಣೆಯಿಂದ ದುರ್ಗಾಮಾಯೆಯಿಂದ ಮೋಹಿತರಾದ ಆಸುರಾಣಕ-ಅಸುರರು, ಶ್ರೀರಾಮರು ರಾಕ್ಷಸನಿಂದ ಅಪಹರಿಸಿಕೊಂಡು ಹೋಗಿದ್ದ ತನ್ನ ಹೆಂಡತಿಯನ್ನು ಪುನಃ ತಾನು ಪರಿಗ್ರಹ ಮಾಡಿದನೆಂದು ಪ್ರಪಂಚದಲ್ಲೆಲ್ಲಾ ಬಹು ವಿಧವಾಗಿ ನಿಂದನೆ ಮಾಡಿದರು.

**ಶ್ಲೋಕ ॥ ಬ್ರಹ್ಮವಾಕ್ಯ ಮೃತ ಮೇವಕಾರಯ । ನ್ಪಾತಯಂಸ್ತಮಸಿ ಚಾಂಧ ಆಸುರಾನ್ ॥ ನಿತ್ಯಮೇವ ಸಹಿತೋಽಪಿ ಸೀತಯಾ । ಸೋಗ್ನಿಸಾಕ್ಷಿಕ ಮಭೂ ದ್ವಿಯುಕ್ತವತ್ ॥೩೩॥**

ಅರ್ಥ.—ಸಃ-ಶ್ರೀರಾಮರು, ಬ್ರಹ್ಮವಾಕ್ಯಂ-ಬ್ರಹ್ಮದೇವರ ವಾಕ್ಯವನ್ನು, ಋತಂ=ಸತ್ಯವಾದದ್ದನ್ನಾಗಿ, ಕಾರಯನ್ನೇವ-ಮಾಡುವದಕ್ಕೋಸ್ಕರಲೂ, ಆಸುರಾನ್=ಅಸುರರನ್ನು, ಅಂಧಂತಮಸಿ=ಅಂಧತಮಃಸ್ಸಿನಲ್ಲಿ, ಪಾತಯನ್-ಬೀಳಿಸುವುದಕ್ಕೋಸ್ಕರಲೂ, ಸೀತಯಾ=ಸೀತಾದೇವಿಯರಿಂದ, ನಿತ್ಯಮೇವ-ನಿರಂತರದಲ್ಲಿಯೂ, ಸಹಿತೋಽಪಿ=ಕೂಡಿರತಕ್ಕವರಾದಾಗ್ಯೂ, ಅಗ್ನಿಸಾಕ್ಷಿಕಂ=ಅಗ್ನಿಪ್ರವೇಶಮೂಲಕ, ವಿಯುಕ್ತವತ್-ಸೀತೆಯನ್ನು ತ್ಯಾಗಮಾಡಿದವರೋಪಾದಿಯಲ್ಲಿ, ಅಭೂತ್=ಆದರು.

ತಾತ್ಪರ್ಯ.—ಬ್ರಹ್ಮದೇವರು ಸುರಾಣಕರಿಗೆ ಕೊಟ್ಟಿದ್ದ ವರವನ್ನು ಸತ್ಯವಾದದ್ದನ್ನಾಗಿ ಮಾಡುವುದಕ್ಕೂ ಈ ಅಸುರರನ್ನು ಅಂಧಂತಮಃಸ್ಸಿನಲ್ಲಿ ಹಾಕುವದಕ್ಕೂ, ಶ್ರೀರಾಮರು ಸೀತಾದೇವಿಯರಿಂದ ನಿರಂತರದಲ್ಲೂ ಕೂಡಿರತಕ್ಕವರಾದಾಗ್ಯೂ ಸೀತಾದೇವಿಯರನ್ನು ಅಗ್ನಿಪ್ರವೇಶ ಮಾಡಿಸುವದರ ಮೂಲಕ ತಾವು ಸೀತಾದೇವಿಯರಿಂದ ನಿಯೋಗವುಳ್ಳವರ ಹಾಗೆ ತೋರ್ಪಡಿಸಿದರು.

ಶ್ಲೋಕ ॥ ತೇನಚಾಂಧ ತಮ ಈಯುರಾಸುರಾಃ । ಯಜ್ಞಮಾಹ್ವಯ ದಸೌ ಚಮೈಥಿಲೀಂ । ತತ್ರಭೂಮಿ ಶಪಥಬ್ಬಲಾನ್ನೃಣಾಂ । ದೃಷ್ಟಿಮಾರ್ಗ ಮಪಹಾಯ ಸಾಸ್ಥಿತಾ ॥೩೪॥

ಅರ್ಥ.—ಅಸೌ=ಶ್ರೀರಾಮರು, ಮೈಥಿಲೀಂಚ=ಸೀತಾದೇವಿಯರನ್ನು ಯಜ್ಞಂ=ಯಜ್ಞಕ್ಕಾಗಿ, ಆಹ್ವಯಚ್ಚ-ಕರಸಿದರು. ತತ್ರ = ಆ ಯಜ್ಞಭೂಮಿಯಲ್ಲಿ, ಭೂಮಿಪಥಬ್ಬಲಾತ್-ಭೂಮಿಶಪಥ = ಭೂಮಿದೇವಿಯ ಪ್ರತಿಜ್ಞೆಯ, ಬಲಾತ್ = ಕಾರಣದಿಂದ, ಸಾ=ಆ ಸೀತಾದೇವಿಯರು, ನೃಣಾಂ=ಜನಗಳ, ದೃಷ್ಟಿಮಾರ್ಗಂ=ದೃಷ್ಟಿಗೆ ಕಾಣುವಿಕೆಯನ್ನು, ಅಪಹಾಯ =ಬಿಟ್ಟವರಾಗಿ, ಸ್ಥಿತಾ-ಶ್ರೀರಾಮರ ಸನ್ನಿಧಾನದಲ್ಲಿ ಇರತಕ್ಕವರಾದರು. ತೇನ=ಆ ಸೀತಾರಾಮರುಗಳ ವಿಯೋಗದಿಂದ, ಆಸುರಾಃ = ಆ ಸುರಾಣಕ ದೈತ್ಯರು, ಅಂಧತಮಃ = ಅಂಧಂತಮೋಲೋಕವನ್ನು, ಈಯುಃ = ಹೊಂದಿದರು.

ತಾತ್ಪರ್ಯ.—ಶ್ರೀರಾಮರು ಯಜ್ಞಮಾಡಿ ಆ ಯಜ್ಞಕ್ಕೆ ಸೀತಾದೇವಿಯನ್ನು ಕರೆಸಿಕೊಂಡಿದ್ದರು. ಆ ಯಜ್ಞದಲ್ಲಿ ಸೀತಾದೇವಿಯರು ಶಪಥಪೂರ್ವಕವಾಗಿ ಅಗ್ನಿಪ್ರವೇಶಮಾಡಿ ಜನಗಳ ದೃಷ್ಟಿಗೆ ಅಗೋಚರರಾಗಿ ರಾಮರ ಸನ್ನಿಧಾನದಲ್ಲಿಯೇ ಇದ್ದರು. (ನಿತ್ಯಾ ವಿಯೋಗಿನೀಂ ದೇವೀಂ ಎಂಬಂತೆ) ಆ ಶಪಥವಾದರೋ ನಾನು ರಾಕ್ಷಸಗಾಮಿಯೇ ಆಗಿದ್ದಪಕ್ಷದಲ್ಲಿ ಭೂಮಿದೇವಿಯು ನನ್ನನ್ನು ನುಂಗಿಹಾಕಲಿ ಎಂದು ಶಪಥಮಾಡಿದರು.

ಶ್ಲೋಕ ॥ ಗುರುಂಹಿ ಜಗತೋ ವಿಷ್ಣು । ಬ್ರಹ್ಮಾಣಮಸೃಚತ್ಸ್ವಯಂ ॥ ತೇನ ತದ್ವಚನಂ ಸತ್ಸು । ನಾನೃತಂ ಕುರುತೇ ಕ್ವಚಿತ್ ॥೩೫॥

ಅರ್ಥ.—ವಿಷ್ಣುಃ=ರಾಮರೂಪರಾದ ವಿಷ್ಣುಪರಮಾತ್ಮರು, ಬ್ರಹ್ಮಾಣಂ=ಬ್ರಹ್ಮದೇವರನ್ನು, ಜಗತಂ-ಪ್ರಪಂಚಕ್ಕೆ, ಗುರುಂ=ಗುರುವನ್ನಾಗಿ, ಸ್ವಯಂ=ತಾನೇ, ಅಸೃಜತ್=ಸೃಷ್ಟಿಮಾಡಿದ್ದಾರೆ. ಹಿ=ನಿಶ್ಚಯವು. ತೇನ=ಆದುದರಿಂದ, ತದ್ವಚನಂ=ಆ ಬ್ರಹ್ಮದೇವರ ವಾಕ್ಯವನ್ನು, ಸತ್ಸು=ಸದ್ವಿಷಯದಲ್ಲಿ, ಕ್ವಚಿತ್=ಯಾವಾಗಲೂ, ಅನೃತಂ=ಸುಳ್ಳನ್ನಾಗಿ, ನಕುರುತೇ=ಮಾಡುವದಿಲ್ಲವು.

ತಾತ್ಪರ್ಯ.— ಶ್ರೀರಾಮ ರೂಪಿಯಾದ ವಿಷ್ಣುಪರಮಾತ್ಮನು ತಾನೇ ಬ್ರಹ್ಮದೇವರನ್ನು ಈ ಜಗತ್ತಿಗೆ ಗುರುವನ್ನಾಗಿ ಸೃಷ್ಟಿಮಾಡಿದ್ದಾನೆ. ಆದ್ದರಿಂದ ಅವರ ವಾಕ್ಯವನ್ನು ಸದ್ವಿಷಯಗಳಲ್ಲಿ ಇಹಪರಗಳಲ್ಲಿಯೂ ಸತ್ಯವನ್ನಾಗಿಯೇ ಮಾಡಿಸುತ್ತಾನೆಯೇ ಹೊರತು ಸುಳ್ಳನ್ನಾಗಿ ಎಂದಿಗೂ ಮಾಡಿಸುವದಿಲ್ಲ.

ಅವತಾರಿಕೆ.—ಮತ್ತು ಬ್ರಹ್ಮದೇವರ ವಾಕ್ಯವನು ಶ್ರೀಪರಮಾತ್ಮನು ಕೆಲವು ವೇಳೆಗಳಲ್ಲಿ ವ್ಯರ್ಥವನ್ನಾಗಿಮಾಡುವದೂ ಉಂಟು ಎಂಬ ವಿಷಯವನ್ನು ಈ ಶ್ಲೋಕದಲ್ಲಿ ನಿರೂಪಿಸುತ್ತಾರೆ.—

**ಶ್ಲೋಕ॥ ನಾಸತ್ಸ್ವಪ್ಯನೃತಂ ಕುರ್ಯಾ । ದ್ವಚನಂಪಾರಲೌಕಿಕಂ ॥ ಐಹಿಕಂತ್ವ ಸುರೇಷ್ವೇವ । ಕ್ವಚಿದ್ಧಂತಿ ಜನಾರ್ದನಃ ॥೩೬॥**

ಅರ್ಥ.—ಜನಾರ್ದನಃ=ಶ್ರೀಪರಮಾತ್ಮನು, ಅಸತ್ಸಪಿ=ಅಯೋಗ್ಯರ ವಿಷಯದಲ್ಲಿ, ಪಾರಲೌಕಿಕಂ-ಪರಲೋಕ ಸಂಬಂಧವಾದ, ವಚನಂ= ಬ್ರಹ್ಮದೇವರ ವಾಕ್ಯವನ್ನು, ಅನೃತಂ=ವ್ಯರ್ಥವಾದದ್ದನ್ನಾಗಿ, ಕುರ್ಯಾತ್= ಮಾಡುತ್ತಾನೆ. ( ಸಜ್ಜನೇಷು=ಸಜ್ಜನರಾದ ದೇವತೆಗಳ ವಿಷಯದಲ್ಲಿ, ನ= ವ್ಯರ್ಥಮಾಡುವದಿಲ್ಲವು. ಐಹಿಕಂತು - ಅವಧ್ಯಾದಿ-ಭೂಲೋಕ ಸಂಬಂಧವಾದ, ( ವಚನಂ-ಬ್ರಹ್ಮದೇವರ ವರರೂಪವಾದ ವಾಕ್ಯವನ್ನು ) ಅಸುರೇಷ್ವೇವ=ದೈತ್ಯರುಗಳಲ್ಲೇ, ಕ್ವಚಿತ್=ಕೆಲವು ಸಂದರ್ಭಗಳಲ್ಲಿ, ಹಂತಿ-ನಾಶ ಮಾಡಿರುತ್ತಾನೆ. ಕೆಲವು ಸಂದರ್ಭಗಳಲ್ಲಿ ಬ್ರಹ್ಮ ವಚನವನ್ನು ಮಾನ್ಯವೂ ಮಾಡಿರುತ್ತಾನೆ.

ತಾತ್ಪರ್ಯ.—ಶ್ರೀಪರಮಾತ್ಮನು ಬ್ರಹ್ಮದೇವರ ಮೋಕ್ಷ ಉಂಟಾಗಲಿಯೆಂಬ ಪರಲೋಕ ಸಂಬಂಧವಾದ ವಾಕ್ಯವನ್ನು ದೈತ್ಯರುಗಳಾದ

ದುಷ್ಟರ ವಿಷಯದಲ್ಲಿ ನಾಶಮಾಡುತ್ತಾನೆ. ಸಜ್ಜನರ ವಿಚಾರದಲ್ಲಿ ಹಾಗಿಲ್ಲವು. ಮತ್ತು (ಭೂ) ಇಹಲೋಕ ಸಂಬಂಧವಾದ ಬ್ರಹ್ಮದೇವರ ಅವಧ್ಯಾದಿ ವಾಕ್ಯಗಳನ್ನು ಕೆಲವು ವೇಳೆ ನಾಶಪಡಿಸುತ್ತಾನೆ, ಕೆಲವು ವೇಳೆಗಳಲ್ಲಿ ಮಾನ್ಯವೂ ಮಾಡುತ್ತಾನೆ.

**ಶ್ಲೋಕ || ನಿಜಾಧಿಕ್ಯಸ್ಯ ವಿಜ್ಞಪ್ತ್ಯೈ | ಕ್ವಚಿದ್ವಾಯುಸ್ತದಾಜ್ಞಯಾ || ಹಂತಿ ಬ್ರಹ್ಮತ್ವಮಾತ್ಮೀಯ | ಮದ್ಧಾಜ್ಞಾಪಯಿತುಂಪ್ರಭುಃ ||೩೭||**

ಅರ್ಥ.— ಪ್ರಭುಃ=ಪರಮಾತ್ಮನು, ನಿಜಾಧಿಕ್ಯಸ್ಯ–ನಿಜ–ತನ್ನ, ಆಧಿಕ್ಯಸ್ಯ=ಬ್ರಹ್ಮದೇವರಗಿಂತಲೂ, ಆಧಿಕ್ಯ=ಉತ್ತಮತ್ವವನ್ನು, ಸತಾಂ= ಸಜ್ಜನರಿಗೆ, ವಿಜ್ಞಪ್ತ್ಯೈ–ಜ್ಞಾಪನಮಾಡುವದಕ್ಕೋಸ್ಕರ, ಬ್ರಹ್ಮವಚನಂ–ಬ್ರಹ್ಮದೇವರ ವರರೂಪವಾದ ವಾಕ್ಯವನ್ನು, ಹಂತಿ = ನಾಶಮಾಡುತ್ತಾನೆ. ವಾಯುಃ=ವಾಯುದೇವರೂನೂ, ತದಾಜ್ಞಯಾ–ಶ್ರೀಪರಮಾತ್ಮನ ಆಜ್ಞೆಯಿಂದ, ಆತ್ಮೀಯಂ=ಸ್ವಕೀಯವಾದ, ಬ್ರಹ್ಮತ್ವಂ=ಭಾವಿಬ್ರಹ್ಮಪದವನ್ನು ಸತಾಂವಿಜ್ಞಾಪ್ತ್ಯೈ–ಸಜ್ಜನರ ಜ್ಞಾಪಕಕ್ಕೋಸ್ಕರ, ಪ್ರಭುಃ – ವಾಯುದೇವರು, ಅದ್ಧಾ–ನಿಶ್ಚಯತ್ವದಿಂದ ಜ್ಞಾಪನಮಾಡುವದಕ್ಕೋಸ್ಕರ, ಕ್ವಚಿತ್=ಕೆಲವು ಸಂದರ್ಭಗಳಲ್ಲಿ, ಹಂತಿ–ನಾಶಮಾಡುತ್ತಾರೆ.

ತಾತ್ಪರ್ಯ.—ಶ್ರೀಪರಮಾತ್ಮನು ಬ್ರಹ್ಮದೇವರಿಗಿಂತಲೂ ತಾನು ಶ್ರೇಷ್ಟನೆಂದು ಸಜ್ಜನರಿಗೆ ಜ್ಞಾಪನಮಾಡುವದಕ್ಕೋಸ್ಕರ ಒಂದೊಂದು ಸಂದರ್ಭದಲ್ಲಿ ದುಷ್ಟರ ವಿಚಾರದಲ್ಲಿ ಬ್ರಹ್ಮದೇವರ ವಚನವನ್ನು ಮುರಿದು ಬಿಡುತ್ತಾನೆ. ವಾಯುದೇವರೂನು ಶ್ರೀಪರಮಾತ್ಮನ ಆಜ್ಞೆಯಿಂದ ತಮ್ಮ ಭಾವಿ ಬ್ರಹ್ಮಪದವನ್ನು ಸಜ್ಜನರಿಗೆ ಜ್ಞಾಪನಮಾಡುವುದಕ್ಕೋಸ್ಕರ ಬ್ರಹ್ಮದೇವರ ಐಹಿಕ ಸಂಬಂಧವಾದ ವರರೂಪವಾದ ವಚನವನ್ನು ಖಂಡಿತವಾಗಿಯೂ ಮುರಿದುಬಿಡುತ್ತಾರೆ.

**ಶ್ಲೋಕ || ನಾನ್ಯಃಕಶ್ಚಿತ್ತದ್ವರಣಾಂ | ಶಾಪಾನಾಮಪ್ಯತಿಕ್ರಮಾ || ಅಯೋಗ್ಯೇಷುತುರುದ್ರಾದಿ | ವಾಕ್ಯಂತಾ ಕುರುತೋಽಪ್ಯೃಷಾ ||೩೮||**

ಅರ್ಥ.—ತದ್ವರಾಣಾಂ–ಬ್ರಹ್ಮದೇವರ ವರಗಳನ್ನಾಗಲೀ, ಶಾಪಾನಾಮಪಿ–ಶಾಪಗಳನ್ನಾಗಲೀ, ಅತಿಕ್ರಮಿಸತಕ್ಕ, ಕಶ್ಚಿದನ್ಯಃ = ಬ್ರಹ್ಮವಾಯು ಉಭಯರಿಗಿಂತಲೂ ಯಾರೂ ಪರಕೀಯರು, ನಾಸ್ತಿ – ಇಲ್ಲವು.

ಅಯೋಗ್ಯೇಷಿತು=ಅಯೋಗ್ಯರಾದ ದೈತ್ಯರ ವಿಷಯದಲ್ಲಿಯಾದರೋ, ಯೋಗ್ಯತಾಧಿಕರಾದ ರುದ್ರಾದಿ ದೇವತೆಗಳ, ವಾಕ್ಯಂ-ಶಾಪಾನುಗ್ರಹಾದಿ ವಚನಗಳನ್ನು, ತೌ=ಆ ಬ್ರಹ್ಮವಾಯುರುಗಳು, ಮೃಷಾ - ಸುಳ್ಳಾದದನ್ನಾಗಿ, ಕುರುತಃ=ಮಾಡುತ್ತಾರೆ.

ತಾತ್ಪರ್ಯ.—ಬ್ರಹ್ಮವಾಯುರುಗಳ ಶಾಪಾನುಗ್ರಹಾದಿ ವಚನಗಳನ್ನು ಅತಿಕ್ರಮಿಸತಕ್ಕವನು ಯಾವ ಪುರುಷನು ಇಲ್ಲವು. ಅಯೋಗ್ಯರುಗಳ ವಿಷಯದಲ್ಲಿಯಾದರೋ ಯೋಗ್ಯತಾಧಿಕ್ಯರಾದ ರುದ್ರಾದಿದೇವತೆಗಳ ವಾಕ್ಯಗಳ (ಶಾಪ ಮತ್ತು ವರಗಳನ್ನೂ) ಈ ಪರಮಾತ್ಮ ವಾಯುರುಗಳುಭಯತ್ರರೂ (ಸುಳ್ಳು) ವ್ಯರ್ಥವಾದವುಗಳನ್ನಾಗಿ ಮಾಡಿಬಿಡುತ್ತಾರೆ.

**ಶ್ಲೋಕ॥ ಏಕದೇಶೇನಸತ್ಯಂತು । ಯೋಗ್ಯೆಷ್ವಪಿಕದಾಚನ॥ ಸವಿಷ್ಣೋರ್ವಚನಂ ಕ್ವಾಪಿ ಮೃಷಾಭವತಿಕಸ್ಯಚಿತ್ ॥ ಯೇತದರ್ಥೋಽವತಾರಸ್ತು ವಿಷ್ಣೋರ್ಭವತಿ ಸರ್ವದಾ ॥೩೯॥**

ಅರ್ಥ.—ವಿಷ್ಣೋಃ=ಶ್ರೀಪರಮಾತ್ಮನ, ವಚನಂ = ಶಾಪಾನುಗ್ರಹರೂಪವಾದ ವಾಕ್ಯವು, ಕಸ್ಯಚಿತ್ = ಯಾವ ಪುರುಷನ ವಿಷಯದಲ್ಲಿಯೇ ಆಗಲಿ, ಕ್ವಾಪಿ=ಯಾವ ಕಾಲದೇಶಗಳಲ್ಲಿಯೂ, ಮೃಷಾ-(ಸುಳ್ಳು) ವ್ಯರ್ಥವಾದದ್ದು, ನಭವತಿ-ಆಗುವದಿಲ್ಲವು. ಯೋಗ್ಯಷ್ವಪಿ=ಸಜ್ಜನರ ವಿಷಯದಲ್ಲೂ, ಕದಾಚನ=ಒಂದೊಂದು ಕಾಲದಲ್ಲಿ, ಏಕದೇಶೇ=ಬಹಳ ಅಪರೂಪವಾಗಿ, ಸತ್ಯಂತು=ನೈಜವಾದದ್ದು, ನಭವತಿ=ಅಗುವದಿಲ್ಲವು. ವಿಷ್ಣೋಃ=ಶ್ರೀವಿಷ್ಣುಪರಮಾತ್ಮನ, ಅವತಾರಸ್ತು-ಅವತಾರವಾದರೋ, ಏಕದೇವ=ಸ್ವವರ ರಕ್ಷಣ, ಅನ್ಯವರ ವಿನಾಶನ ರೂಪವಾದ, ಅರ್ಥಃ = ಪ್ರಯೋಜನವುಳ್ಳದ್ದು, ವಿಷ್ಣೋಃ=ಶ್ರೀಪರಮಾತ್ಮನ (ಇಂತಹ ಅವತಾರವು) ಸರ್ವದಾ-ಸರ್ವಕಾಲದಲ್ಲಿಯೂ, ಭವತಿ=ಆಗುತ್ತದೆ.

ತಾತ್ಪರ್ಯ.—ಶ್ರೀವಿಷ್ಣುಪರಮಾತ್ಮನ ಶಾಪಾನುಗ್ರಹರೂಪವಾದ ವಾಕ್ಯವು ಯಾವ ಪುರುಷನ ವಿಷಯದಲ್ಲಿ ಯಾವ ದೇಶಕಾಲಗಳಲ್ಲಿಯೂ ಎಂದಿಗೂ ವ್ಯರ್ಥವಾಗುವುದಿಲ್ಲವು. ಒಂದೊಂದು ವೇಳೆ ಯೋಗ್ಯರಾದ ಸಜ್ಜನರ ವಿಷಯದಲ್ಲಾದರೋ ಶ್ರೀವಿಷ್ಣುಪರಮಾತ್ಮನ ಸ್ವವರರಕ್ಷಣ ಅನ್ಯವರ

ಧ್ವಂಸ ರೂಪವಾದ ವಚನವು ವ್ಯರ್ಥವಾಗುವದೂ ಉಂಟು. ಯೇವಂಚ ಶ್ರೀವಿಷ್ಣುಪರಮಾತ್ಮನ ಅವತಾರವು ಇದೇ ಪ್ರಕಾರದ ಪ್ರಯೋಜನವುಳ್ಳದ್ದು ಇಂತಹ ಅವತಾರವು ಸರ್ವದಾ ಉಂಟಾಗುತ್ತಲಿರುತ್ತದೆ.

ಅವತಾರಿಕೆ.—ಇನ್ನು ಮುಂದೆ ಪ್ರಕೃತ ಕಥಾವನ್ನು ನಿರೂಪಣ ಮಾಡುತ್ತಾರೆ.—

**ಶ್ಲೋಕ ॥ ಪ್ರವಿಶ್ಯಭೂಮೌ ಸಾದೇವೀ । ಲೋಕದೃಷ್ಟ್ಯನುಸಾರತಃ॥ ರೇಮೇ ರಾಮೇಣಾನಿಯುಕ್ತಾ । ಭಾಸ್ಕರೇಣಪ್ರಭಾಯಥಾ ॥೪೦॥**

ಅರ್ಥ.—ಸಾದೇವೀ – ಅಗ್ನಿ ಪ್ರವೇಶ ಮಾಡಿದ ಸೀತಾದೇವಿಯು, ಲೋಕದೃಷ್ಟ್ಯನುಸಾರತಃ=ಲೋಕದೃಷ್ಟಿ=ಇಹಲೋಕ ಜನರ ದೃಷ್ಟಿಪಥವನ್ನು, ಅನುಸಾರತ=ಅನುಸರಿಸಿ, ಭೂಮೌ = ಭೂಮಿಯಲ್ಲಿ, ಪ್ರವಿಶ್ಯ=(ಅಗ್ನಿಪ್ರವೇಶಮೂಲಕ ) ಪ್ರವೇಶಿಸಿ, ಭಾಸ್ಕರೇಣ–ಸೂರ್ಯನಿಂದ, ಪ್ರಭಾ=ಅದ್ದು ಕಾಂತಿಯು, ಯಥಾ=ಹ್ಯಾಗೋ ಹಾಗೆ (ಈ ಸೀತಾದೇವಿಯು ರಾಮೇಣ=ಶ್ರೀರಾಮರಿಂದ, ಅವಿಯುಕ್ತಾ=ವಿಯೋಗವಿಲ್ಲದೆ (ಎಡೆಬಿಡದೆ) ರೇಮೇ=ವಿಹರಿಸುತ್ತಿದ್ದರು.

ತಾತ್ಪರ್ಯ.—ಸೀತಾದೇವಿಯರು ಅಗ್ನಿಪ್ರವೇಶಮೂಲಕ ಲೋಕದೃಷ್ಟಿಗೆ ಅನುಸಾರವಾಗಿ ಭೂಮಿಯಲ್ಲಿ ಪ್ರವೇಶಮಾಡಿ ಸೂರ್ಯನನ್ನು ಅದರ ಕಾಂತಿಯು ಎಡೆಬಿಡದೆ ಅನುಸರಿಸಿರುತ್ತದೆಯೋ ಆ ಪ್ರಕಾರ ಸೀತಾದೇವಿಯರು ( ನಿತ್ಯಾವಿಯೋಗಿನಿಯರಾದ್ದರಿಂದ ) ಶ್ರೀರಾಮರಿಂದ ಸಹಿತರಾಗಿಯೇ ಎಡೆಬಿಡದೆ ವಿಹಾರಮಾಡಿಕೊಂಡಿದ್ದರು.

**ಶ್ಲೋಕ ॥ ಏವಂರಮಾ ಲಾಲಿತ ಪಾದಪಲ್ಲವಃ । ಪುನಶ್ಚ ಯಜ್ಞೈರಯುಜತ್ಸ್ವಮೇವ ॥ ವರಾಶ್ಚ ಮೇಧಾದಿಭಿರಾಪ್ತಕಾಮೋ । ರೇಮೇಭಿ ರಾಮೋ ನೃಪತೀನ್ ವಿಶಿಕ್ಷಯನ್ ॥೪೧॥**

ಅರ್ಥ.—ಏವಂ=ಈ ಪ್ರಕಾರವಾಗಿ, ರಮಾಲಾಲಿತಪಾದಪಲ್ಲವಃ= ರಮಾದೇವಿಯರಿಂದ, ಲಾಲಿತ=ಪೂಜಿಸಲ್ಪಟ್ಟ, ಪಾದಪಲ್ಲವಃ–ಚಿಗರಿನೋಪಾದಿಯಲ್ಲಿ ಕೋಮಲವಾದ ಪಾದಗಳುಳ್ಳ, ಅಭಿರಾಮಃ = ಮನೋಹರನಾದ ರಾಮನು, ಪುನಶ್ಚ–ತಿರಿಗಿತಿರಿಗೀ, ನೃಪತೀನ್–ರಾಜರುಗಳನ್ನು, ವಿಶಿ

ಕ್ಷರ್ಯ=ಶಿಕ್ಷಣಮಾಡತಕ್ಕವರಾಗಿ, ವರಾಶ್ವಮೇಧಾದಿಭಿಃ=ವರಾ=ಶ್ರೇಷ್ಠಗಳಾದ, ಅಶ್ವಮೇಧಾದಿಭಿಃ-ಅಶ್ವಮೇಧಾದಿ ಯಜ್ಞವೇ ಮೊದಲಾದ, ಯಜ್ಞೈಃ=ಯಾಗಗಳಿಂದ, ಸ್ವಮೇವ=ಸರ್ವೋತ್ತಮನಾದ ತನ್ನನ್ನೆ, ಅಯಜತ್=ಯಜ್ಞಮಾಡಿದರು. (ರಾಮಃ=ಶ್ರೀರಾಮರು) ಆಪ್ತಕಾಮಃಸನ್=ಹೊಂದಲ್ಪಟ್ಟ ಪುರುಷಾರ್ಥಾದಿ ಇಷ್ಟಸಿದ್ಧಿಯುಳ್ಳವರಾಗಿ, ರೇಮೇ=(ಸೀತಾದೇವಿಯರಿಂದಕೂಡಿ) ವಿಹರಿಸಿದರು.

ತಾತ್ಪರ್ಯ.—ಈ ಪ್ರಕಾರವಾಗಿ ಸೀತಾರಾಧಿತ ಕೋಸಲ ಯೋಷಮಾದವುಳ್ಳ ಮನೋಹರರಾದ ಶ್ರೀರಾಮರು, ಪುನಃ ಅಶ್ವಮೇಧಾದಿ ಯಜ್ಞಗಳನ್ನು ಸರ್ವೋತ್ತಮತ್ವೇನ ತಮ್ಮನ್ನ ತಾವೇ ಯಾಗಮಾಡಿ, ಇದರಿಂದ ರಾಜರುಗಳನ್ನು ಶಿಕ್ಷಣಮಾಡಿ ಸಕಲ ಪುರಷಾರ್ಥಾದಿ ಇಷ್ಟಸಿದ್ಧಿಗಳನ್ನು ಹೊಂದಿ ಸೀತಾದೇವಿಯರಿಂದ ಸಹಿತರಾಗಿ ಬಹುಕಾಲ ವಿಹರಿಸಿದರು.

ಶ್ಲೋಕ ॥ ರಾಮಸ್ಯದೃಶ್ಯಾತ್ವನ್ಯೇಷಾ । ಮದೃಶ್ಯಾ ಜನಕಾತ್ಮಜಾ ॥ ಭೂಮಿಪ್ರವೇಶಾದೂರ್ಧ್ವಂಸಾ । ರೇಮೇಸಪ್ತಶತಂ ಸಮಾಃ ॥೪೨॥

ಅರ್ಥ.—ಜನಕಾತ್ಮಜಾ=ಜನಕರಾಜನ ಕುಮಾರಿಯಾದ, ಸಾ = ಆ ಸೀತಾದೇವಿಯರು, ಭೂಮಿಪ್ರವೇಶಾತ್=(ಅಗ್ನಿಪ್ರವೇಶದ ಮೂಲಕ) ಭೂಪ್ರವೇಶಮಾಡಿದ, ಊರ್ಧ್ವಂ=ಅನಂತರ, ರಾಮಸ್ಯ-ರಾಮರಿಗೆ, ದೃಶ್ಯಾ-ದೃಷ್ಟಿಗೋಚರಳಾಗಿ, ಅನ್ಯೇಷಾಂತು=ಇತರರಿಗೆ, ಅದೃಶ್ಯಾ=ದೃಷ್ಟಿಪಥಕ್ಕೆ ಅಗೋಚರಳಾಗಿ, ಸಪ್ತಶತಂಸಮಾಃ-ಏಳುನೂರು ವರ್ಷಗಳು, (ರಾಮರಿಂದ ಸಹಿತರಾಗಿ,) ರೇಮೇ-ವಿಹಾರಮಾಡಿದರು.

ತಾತ್ಪರ್ಯ.—ಸೀತಾದೇವಿಯರು ಅಗ್ನಿಪ್ರವೇಶದ ಮೂಲಕ ಭೂಪ್ರವೇಶಮಾಡಿದನಂತರ ರಾಮರಿಗೆ ದೃಷ್ಟಿಗೋಚರರಾಗಿಯೂ, ಪ್ರಪಂಚದ ಇತರರಿಗೆ ಅಗೋಚರರಾಗಿಯೂ ಏಳುನೂರು ವರ್ಷಗಳಕಾಲ ಪರಿಯಂತ ಶ್ರೀರಾಮರೊಡನೆ ವಿಹಾರಮಾಡಿಕೊಂಡಿದ್ದರು.

ಶ್ಲೋಕ ॥ ಏವಂವಿಧಾನ್ಯ ಗಣಿತಾನಿ ಜನಾರ್ದನಸ್ಯ । ರಾಮಾವತಾರ ಚರಿತಾನಿ ತದನ್ಯಪುಂಭಿಃ ॥ ಶಕ್ಯಾನಿನೈವ ಮನಸಾಪಿ ಹಿತಾನಿಕರ್ತುಂ । ಬ್ರಹ್ಮೇಶಶೇಷ ಪುರುಹೂತ ಮುಖೈಃ ಸುರೈಶ್ಚ ॥೪೩॥

ಅರ್ಥ.—ಜನಾರ್ದನಸ್ಯ = ಶ್ರೀಪರಮಾತ್ಮನ, ಏವಂವಿಧಾನಿ – ಈ ವರೆಗೆ ನಿರೂಪಿಸಲ್ಪಟ್ಟ, ಅಗಣಿತಾನಿ-ಗಣನಾಶಕ್ಯಗಳಾದ, ರಾಮಾವತಾರದ ಚರಿತ್ರೆಗಳನ್ನು, ಹಿ-ಯಾವ ರೀತಿಯಿಂದಲೂ, ಸುರೈಶ್ಚ = ಬ್ರಹ್ಮಾದಿ ದೇವತೆಗಳಿಂದಲೂ ಸಹ, ಮನಸಾಪಿ-ಮನಸ್ಸಿನಿಂದಲೂ ಕೂಡ, ಕರ್ತ್ಯಂ-ಗಣನಮಾಡಲು, ನೈವಶಕ್ಯಾನಿ=ಶಕ್ಯವಾಗುವದೇ ಇಲ್ಲವೋ, ತಾನಿ-ಅಂತಹ ರಾಮಾವತಾರದ ಚರಿತ್ರೆಗಳನ್ನು, ಬ್ರಹ್ಮೇಶ ಶೇಷ ಪುರುಹೂತ ಮುಖ್ಯೈಃ-ಬ್ರಹ್ಮದೇವರು, ರುದ್ರದೇವರು, ಗರುಡದೇವರು, ಶೇಷದೇವರು, ಇಂದ್ರನೇ ಮೊದಲಾದ ದೇವತೆಗಳಿಗಿಂತಲೂ, ಅನ್ಯ=ಅನ್ಯರಾದ (ಅವರರಾದ)ಪುಂಭಿಃ= ಋಷ್ಯಾದಿಗಳಿಂದ, ತಾನಿ=ಆ ರಾಮಾವತಾರ ಚರಿತೆಗಳನ್ನು, ಮನಸಾಪಿ= ಮನಸ್ಸಿನಿಂದಲೂ ಕೂಡ, ಕರ್ತುಂ-ಗಣನಮಾಡಲು, ನೈವಶಕ್ಯಾನಿ-ಶಕ್ಯವಾಗುವದೇ ಇಲ್ಲವೆಂಬುದು, ಕಿಂವಕ್ತವ್ಯಂ=ಹೇಳತಕ್ಕದ್ದೇನಿದೆ.

ತಾತ್ಪರ್ಯ.—ಶ್ರೀವಿಷ್ಣುಪರಮಾತ್ಮನ ಪೂರ್ವೋಕ್ತಪ್ರಕಾರಗಳಾದ ಶ್ರೀರಾಮಾವತಾರಚರಿತ್ರೆಗಳನ್ನು, ಬ್ರಹ್ಮ, ರುದ್ರ, ಶೇಷ, ಗರುಡ ದೇವೇಂದ್ರ ಮೊದಲಾದ ದೇವತೆಗಳೂ ಮನಸ್ಸಿನಿಂದಲೂ ಕೂಡ ಗಣನ ಮಾಡಲು ಅಶಕ್ಯವಾಗಿರುವಾಗ್ಯೆ ತದಪರರಾದ ಋಷ್ಯಾದಿಗಳಿಂದ ಶ್ರೀರಾಮಾವತಾರ ಚರಿತ್ರೆಗಳನ್ನು ಮನಸ್ಸಿನಿಂದಲೂ ಕೂಡ ಗಣನಮಾಡಲು ಶಕ್ಯವಾಗುವದೇ ಇಲ್ಲವೆಂದು ಹೇಳತಕ್ಕದ್ದೇನಿದೆ.

**ಶ್ಲೋಕ ॥ ತಸ್ಯೈವಮಬ್ಜ ಭವಲೋಕ ಸಮಾಮಿಮಾಂಕ್ಷ್ಮಾಂ ಕೃತ್ವಾನುಶಾಸತ ಉದೀಕ್ಷ್ಯ ಗುಣಾನ್ಧರಾಯಾಃ ॥ ವೈಶೇಷ್ಯಮಾತ್ಮ ಸದನಸ್ಯ ಹಿ ಕಾಂಕ್ಷಮಾಣಾ ಬೃಂದಾರಕಾಃ ಕಮಲ ಜಂಪ್ರತಿತಥ್ಯಶಂಸುಃ ॥೪೪॥**

ಅರ್ಥ.—ತಸ್ಯ=ಅಗಣಿತಗುಣಯುಕ್ತರಾದ ಶ್ರೀರಾಮರ, ಇಮಾಂ ಕ್ಷ್ಮಾಂ=ಈ ಭೂಲೋಕವನ್ನು, ಅಬ್ಜಭವಲೋಕಸಮಾಂ=ಅಬ್ಜಭವ=ನಾಭಿಕಮಲೋದ್ಭವನಾದ ಬ್ರಹ್ಮದೇವರ, ಲೋಕ=ಲೋಕವಾದ ಸತ್ಯಲೋಕಕ್ಕೆ ಸಮಾಂ=ಸಮಾನವಾದದ್ದನ್ನಾಗಿ, ಕೃತ್ವಾ=ಮಾಡಿ, ಅನುಶಾಸತಃ (ಧರಾಯಾಃ) ಸತಃ – ರಾಜ್ಯಭಾರಮಾಡುತ್ತಿರಲಾಗಿ, ಏವಂ = ಈ ಪ್ರಕಾರವಾದದ್ದರನ್ನು, ವೃಂದಾರಕಾಃ=ದೇವತೆಗಳು, ಧರಾಯಾಃ – ಭೂಲೋಕದ, ಗು

ಣಾ೯=ಗುಣಗಳನ್ನು, ಉದೀಕ್ಷ್ಯ - ನೋಡಿ, ಆತ್ಮಸದನಸ್ಯ=ತಮ್ಮ ಸ್ವಂತವಾದ ಅಂತರಿಕ್ಷಾದಿ ದೇವಲೋಕ ಪಟ್ಟಣಗಳ, ವೈಶೇಷ್ಯಂಹಿ = ಭೂಲೋಕಕಿಂತಲೂ ವಿಶೇಷ ಹೆಚ್ಚಿಗೆಯಾಗಿರುವದರನ್ನಾಗಿ, ಕಾಂಕ್ಷಮಾಣಾಃಸಂತಃ-ಅಪೇಕ್ಷೆಪಟ್ಟವರಾಗಿ, ಕಮಲಜಂಪ್ರತಿ=ಬ್ರಹ್ಮದೇವರನ್ನು ಕುರಿತು, ತತ್ ಆ ವರ್ತಮಾನವನ್ನು, ಶಶಂಸುಃ-ಹೇಳಿದರು.

ತಾತ್ಪರ್ಯ.—ಆ ಅಗಣಿತಗುಣಸಂಪನ್ನರಾದ ಶ್ರೀರಾಮರು, ಈ ಭೂಲೋಕವನ್ನು ಬ್ರಹ್ಮದೇವರ ಸತ್ಯಲೋಕಕ್ಕೆ ಸಮಾನವಾದದ್ದನ್ನಾಗಿ ಮಾಡಿ ರಾಜ್ಯಭಾರಮಾಡುತ್ತಿರುವದನ್ನು ನೋಡಿ, ದೇವತೆಗಳು ಈ ಭೂಲೋಕದ ಗುಣವೈಭವಾದಿಗಳು ತಮ್ಮ ಸ್ವಲೋಕಗಳಾದ ಅಂತರಿಕ್ಷಾದಿ ಆರು ಊರ್ಧ್ವಲೋಕಗಳ ಉತ್ತೇಜನ ವಿಶೇಷಗಳನ್ನು ಬಯಿಸಿದವರಾಗಿ ಬ್ರಹ್ಮದೇವರನ್ನು ಕುರಿತು ಈ ಭೂಲೋಕದ ವೈಭವಗಳ ವಿಷಯದಲ್ಲಿ ತಮ್ಮ ದೇವತಾಲೋಕದ ಶ್ರೇಷ್ಠತ್ವದ ವಿಷಯದಲ್ಲಿ ವಕ್ಷ್ಯಮಾಣಪ್ರಕಾರ ಹೇಳಿದರು.

**ಶ್ಲೋಕ ॥ ಆಮಂತ್ರ್ಯ ತೈಃಸಹ ವಿಭುರ್ಭಗವತ್ಪ್ರಯಾಣಂ । ಸ್ವೀಯಾಯ ಸದ್ಮ ಸ ಇಯೇಷದಿದೇಶಚಾಥ ॥ ರುದ್ರಂ ಸ್ವಲೋಕ ಗಮನಾಯ ರಘೂತ್ತಮಸ್ಯ । ಸಂಪ್ರಾರ್ಥನೇ ಸಚ ಸಮೇತ್ಯ ವಿಭುಂಯಯಾಚೇ ॥೪೫॥**

ಅರ್ಥ.— ವಿಭುಃ=ಬ್ರಹ್ಮದೇವರು, ತೈಃಸಹ = ಆ ದೇವತೆಗಳಿಂದ ಕೂಡಿ, ಆಮಂತ್ರ್ಯ=ವಿಚಾರಮಾಡಿ, ಸ್ವಿಯಾಯ-ತಮ್ಮ ಸ್ವಕೀಯವಾದ, ಸದ್ಮನೇ=ವೈಕುಂಠಲೋಕಕ್ಕೆ, ಭಗವತ್ಪ್ರಯಾಣಂ=ಭಗವಂತನಾದ ಶ್ರೀರಾಮರ ಪ್ರಯಾಣವನ್ನು, ಇಯೇಷ=ಇಚ್ಛಿಸಿದರು. ಅಥ=ಅನಂತರ, ಸಃ=ಬ್ರಹ್ಮದೇವರು, ರಘೋತ್ತಮಸ್ಯ=ರಘುಕುಲ ಶ್ರೇಷ್ಠರಾದ ಶ್ರೀರಾಮರ, ಸ್ವಲೋಕಗಮನಾಯ - ತಮ್ಮ ಸ್ವಕೀಯವಾದ ವೈಕುಂಠಲೋಕಕ್ಕೆ ಹೊರಡುವದಕ್ಕಾಗಿ. ಸಂಪ್ರಾರ್ಥನ=ಶ್ರೀರಾಮರನ್ನು ಪ್ರಾರ್ಥನ ಮಾಡುವದಕ್ಕಾಗಿ, ರುದ್ರಂ=ರುದ್ರದೇವರನ್ನು. ದಿದೇಶ-ಆಜ್ಞೆಮಾಡಿದರು. ಸಚ = ಆ ರುದ್ರದೇವರಾದರೋ, ವಿಭುಃ=ಶ್ರೀರಾಮರನ್ನು, ಸಮೇತ್ಯ-ಹೊಂದಿ (ಬಂದು) ಯಯಾಚೆ=ಯಾಚನೆ ( ಪ್ರಾರ್ಥನೆ ) ಮಾಡಿದರು.

ತಾತ್ಪರ್ಯ.—ಬ್ರಹ್ಮದೇವರು ತಮ್ಮ ಬಳಿ ಬಂದಿರುವ ದೇವತೆಗ ಳಿಂದ ಸಹಿತರಾಗಿ ವಿಚಾರಮಾಡಿ ಶ್ರೀರಾಮರ ವೈಕುಂಠಲೋಕ ಪ್ರಯಾಣ ವನ್ನು ಕುರಿತು ಅಪೇಕ್ಷ್ಯಾಮಾಡಿದರು. ಅನಂತರ ಶ್ರೀರಾಮ ಪರಮಾತ್ಮನ ನ್ನು ಸ್ವಕೀಯವಾದ ವೈಕುಂಠಲೋಕಕ್ಕೆ ಬರಬೇಕೆಂದು ಪ್ರಾರ್ಥನೆಮಾಡು ವುದಕ್ಕಾಗಿ ಶ್ರೀರುದ್ರದೇವರಿಗೆ ಆಜ್ಞಾಪಿಸಿದರು. ಆ ರುದ್ರದೇವರು ರಾ ಮರ ಬಳಿಗೆ ಬಂದು ಪ್ರಾರ್ಥಿಸಿದರು.

ಅವತಾರಿಕೆ.—ಇಲ್ಲಿಂದ ರುದ್ರದೇವರು ಶ್ರೀರಾಮರನ್ನು ಯಾಚನ ಮಾಡಿದರೆಂಬುದನ್ನು ವಿಶದಪಡಿಸುತ್ತಾರೆ.

**ಶ್ಲೋಕ || ಏಕಾಂತಮೇತ್ಯ ರಘುಪೇಣ ಸಮುಸ್ತಕಾಲೋ | ರುದ್ರೋ ಜಗಾ ದವಚನಂ ಜಗತೋ ವಿಧಾತುಃ || ವೈಶೇಷ್ಯಮಾತ್ಮ ಸದನಸ್ಯ ಹಿಕಾಂ ಕ್ಷಮಾಣಾ | ಸ್ತ್ವಾಮರ್ಥಯಂತಿ ವಿಬುಧಾಃ ಸಹಿತಾ ವಿಧಾತ್ರಾ ||೪೭||**

ಅರ್ಥ.—ಸಮುಸ್ತಕಾಲಃ = ಸಮಸ್ತ ಜಗತ್ತನ್ನೂ, ಕಾಲಃ - ನಾಶ ಮಾಡತಕ್ಕ ಕಲಿನಾಮಕನಾದ, ರುದ್ರಃ - ರುದ್ರದೇವರು, ರಘುಪೇಣ= ರಘುಪತಿಯಾದ ರಾಮದೇವರಿಂದ ಸಹಿತರಾಗಿ, ಏಕಾಂತಂ = ಅಂತರಂಗ ಸ್ಥಳವನ್ನು ಕುರಿತು, ಏತ್ಯ=ಬಂದು, ಜಗತಃ=ಜಗತ್ತಿಗೆ, ವಿಧಾತುಃ – ಉ ತ್ಪತ್ತಿ ಉಂಟುಮಾಡತಕ್ಕ, ವಚನಂ=ವಾಕ್ಯವನ್ನು, ಜಗಾದ=ಹೇಳಿದರು, ಕಿಮಿತಿ=ಏನೆಂದರೆ, ವಿಧಾತ್ರಾ=ಬ್ರಹ್ಮದೇವರಿಂದ, ಸಹಿತಾಃ=ಸಹಿತರಾದ, ವಿಬುಧಾಃ=ದೇವತೆಗಳು, ಆತ್ಮಸದನಸ್ಯ-ತಮ್ಮ ಸ್ಥಳವಾದ ಊರ್ಧ್ವಲೋ ಕಗಳ, ಭೂಮೇರಪಿ=ಭೂಲೋಕಕ್ಕಿಂತಲೂ, ವೈಶೇಷ್ಯಂ=ಶ್ರೇಷ್ಠತ್ವವನ್ನು ಕಾಂಕ್ಷಮಾಣಾಃಸಂತಃ=ಅಪೇಕ್ಷ್ಯಾವುಳ್ಳವರಾಗಿ, ತ್ವಾಂ–ನಿನ್ನನ್ನು, ಕುರಿತು ಅರ್ಥಯಂತಿ=ಪ್ರಾರ್ಥಿಸುತ್ತಾರೆ. (ಎಂದು ರುದ್ರದೇವರು ಶ್ರೀರಾಮರಿಗೆ ಹೇಳಿದರು.)

ತಾತ್ಪರ್ಯ.—ಸಮಸ್ತವನ್ನು ನಾಶಮಾಡತಕ್ಕ ಕಾಲನಾಮಕ ರುದ್ರ ದೇವರು ಬ್ರಹ್ಮದೇವರ ಆಜ್ಞಾಪ್ರಕಾರ ಶ್ರೀರಾಮದೇವರ ಬಳಿ ಬಂದು ಏಕಾಂತದಲ್ಲಿ ರಹಸ್ಯವಾಗಿ ರಾಮರನ್ನು ಕುರಿತು ಹೇ ಪರಮಾತ್ಮಾ ಜಗತ್ ಸೃಷ್ಟಿಮಾಡುವ ಬ್ರಹ್ಮದೇವರಿಂದ ಸಹಿತರಾದ ಸಮಸ್ತ ದೇವತೆಗಳೂ

**ವೈಕುಂಠಾದಿ ದೇವಲೋಕಗಳನ್ನು ಈ ಭೂಲೋಕಕ್ಕಿಂತಲೂ ವಿಶೇಷವುಳ್ಳ** ದ್ದರನ್ನಾಗಿ ಮಾಡಬೇಕೆಂಬ ಅಪೇಕ್ಷೆಯಿಂದ ನಿನ್ನನ್ನ ಪ್ರಾರ್ಥಿಸುತ್ತಾರೆಂಬ ಬ್ರಹ್ಮದೇವರ ವಚನವನ್ನು ಕಾಲನಾಮಕ ಖುದ್ರದೇವರು ಶ್ರೀರಾಮುರನ್ನು ಕುರಿತು ಅಂತರಂಗದಲ್ಲಿ ರಹಸ್ಯವಾಗಿ ಹೇಳಿದರು.

ಇಲ್ಲಿ ವಿಶೇಷ ವಿಷಯವೇನೆಂದರೆ.--ಸಮಸ್ತಕಾಲಃ ಎಂಬಲ್ಲಿ ಕಾಲ ಯತಿ ನಾಶಯತೀತಿ ಸಮಸ್ತ ಕಾಲಃ, ಸಮಸ್ತ ಜಗತ್ತನ್ನು ನಾಶಮಾಡುವ ದೆಂದು ಅರ್ಥವು. ಕಲಚ್ಛೇದಃ, ಎಂಬ ಧಾತುವಿನ ದೆಸೆಯಿಂದ ನಾಶ ಮಾಡತಕ್ಕವನು (ಕಾಲ) ಎಂಬ ಹೆಸರು ಬಂದಿತು. ಈ ಕಾರಣದಿಂದ (ಕಾಲಃ ಪ್ರಾರ್ಥಯಾಮಾಸ) ಎಂಬ ಗ್ರಂಥಾಂತರದಲ್ಲಿ ಉಕ್ತವಾದ ವಿರೋಧವು ಪರಿಹಾರವಾಯಿತು. ಏವಂಚ (ಸಮಸ್ತಕಾಲಃ ಖುದ್ರಃ ಎಂದು ಈ ಶ್ಲೋಕವಲ್ಲಿ ನಿರೂಪಣಮಾಡಿರುವ ಸಮಸ್ತಕಾಲ=ಕಾಲನಾಮಕಖುದ್ರಃ –ಕಾಲನಾಮಕ ಖುದ್ರದೇವರು ಬ್ರಹ್ಮದೇವರ ವಾಕ್ಯವನ್ನು ಶ್ರೀರಾಮರಿಗೆ ಅಂತರಂಗದಲ್ಲಿ ಹೇಳಿದರೆಂದು ತತ್ವಾಭಿಪ್ರಾಯವು.

ಅವತಾರಿಕೆ.--ಖುದ್ರದೇವರು ಶ್ರೀರಾಮರನ್ನು ಪ್ರಾರ್ಥಿಸುತ್ತಾರೆ.-

**ಶ್ಲೋಕ ॥ ಪುತ್ರಸ್ತವೇಶ ಕಮಲ ಪ್ರಭವಸ್ತಥಾಹಂ । ಪೌತ್ರಸ್ತು ಪೌತ್ರಕವ ಚೋ ಯುದಪಿಸ್ಯ ಯೋಗ್ಯಂ॥ ಸಂಭಾವಯಂತಿ ಗುಣಿನಸ್ತದಹಂ ಯಯಾಚೇ । ಗಂತುಂ ಸ್ವಸದ್ಮನತಿ ಪೂರ್ವಮಿತೋಭವಂತಂ॥೪೭॥**

ಅರ್ಥ.—ಹೇ ಈಶ=ಎಲೌ ಸ್ವಾಮಿಯೇ, ಕಮಲಪ್ರಭವಃ=ಬ್ರಹ್ಮನು, ತವ=ನಿನಗೆ, ಪುತ್ರಃ=ಕುಮಾರನು, ತಥಾ-ಹಾಗೇನೆ, ಅಹಂ-ನಾನೂ, ಪೌತ್ರಸ್ತು-ಮೊಮ್ಮಗನೇವೇ, ಪೌತ್ರಕವಚಃ=ಮೊಮ್ಮಗನ ಮಾತು, ಯದ್ಯಪಿ -ಒಂದುವೇಳೆ, ಅಯೋಗ್ಯಂ=ಅಸಂಭಾವಿತವಾದರೆ, ಗುಣಿನಃ= ಗುಣವಂತರು, ಸಂಭಾವಯಂತಿ=ಸಮದಾಯಿಸಿಕೊಳ್ಳುತ್ತಾರೆ. ತತ್=ಆದ್ದರಿಂದ, ಅಹಂ=ನಾನು, ಭವಂತಂ=ನಿನ್ನನ್ನು, ಇತಃ=ಈ ಭೂಲೋಕದ್ದೆಶೆಯಿಂದ, ಸ್ವಸದ್ಮ – ನಿನ್ನ ಸ್ವಂತವಾದ ವೈಕುಂಠಲೋಕವನ್ನು ಕುರಿತು, ಗಂತುಂ= ತೆರಳುವುದಕ್ಕಾಗಿ, ನತಿಪೂರ್ವಂ=ನಮಸ್ಕಾರಪೂರ್ವಕವಾಗಿ, ಯಯಾಚೇ= ಪ್ರಾರ್ಥನೆಮಾಡುತ್ತೇನೆ.

**ಶ್ಲೋಕ ॥ ಯತ್ಕಾರ್ಯ ಸಾಧನಕೃತೇ ವಿಬುಧಾರ್ಥಿತಸ್ತ್ವಂ । ಪ್ರಾದುಷ್ಕ ಕರ್ಥನಿಜರೂಪ ಮಶೇಷಮೇವ ॥ ತತ್ಸಾಧಿತಂಹಿ ಭವತಾ ತದಿತಃ ಸ್ವಧಾಮ । ಕ್ಷಿಪ್ರಂ ಪ್ರಯಾಹಿ ಹರ್ಷಂ ವಿಬುಧೇಷು ಕುರ್ವನ್ ॥೪೮॥**

ಅರ್ಥ.—ಯತ್ಕಾರ್ಯಸಾಧನಕೃತೇ-ಯಾವ ಕಾರ್ಯಸಾಧನೆಗೋಸ್ಕರ, ವಿಭುಧಾರ್ಥಿತಃ-ದೇವತೆಗಳಿಂದ ಪ್ರಾರ್ಥಿಸಲ್ಪಟ್ಟ, ತ್ವಂ= ನೀನು, ನಿಜರೂಪಂ=ನಿನ್ನ ಈ ರೂಪವನ್ನು, ಪ್ರಾತುಶ್ಚಕರ್ತ-ಪ್ರಕಟಪಡಿಸಿದೆಯೋ ತತ್‌ಅಶೇಷಂ=ಆ ಎಲ್ಲಾ ಕೆಲಸವೂ, ಭವತಾ=ನಿನ್ನಿಂದ, ಸಾಧಿತಮೇವ=ಸಾಧಿಸಲ್ಪಟ್ಟಿತು. ತತ್-ಸಾಧಿಸಲ್ಪಟ್ಟದ್ದರಿಂದ, ವಿಭುದೇಷು-ದೇವತೆಗಳಿಗೆ, ಹರ್ಷಂ=ಸಂತೋಷವನ್ನು, ಕುರ್ವನ್ಸನ್= ಮಾಡುವವನಾಗಿ, ಇತಃ-ಈ ಭೂಲೋಕದ ದೆಶೆಯಿಂದ, ಸ್ವಧಾಮ=ನಿನ್ನ ಮನೆಯಾದ ವೈಕುಂಠಕ್ಕೆ, ಕ್ಷಿಪ್ರಃ=ಜಾಗ್ರತೆಯಾಗಿ, ಪ್ರಯಾಹಿ-ಹೊರಡು.

**ಶ್ಲೋಕ ॥ ಓಮಿತ್ಯುವಾಚ ಭಗವಾಂಸ್ತದಶೇಷಮೇವ । ಶ್ರುತ್ವಾ ರಹಸ್ಯಥ ತನುಸ್ತ್ವಪರಾಹರಸ್ಯ ॥ ದೂರ್ವಾಸ ನಾಮಯುಗಿಹಾಗಮದಾಶು ರಾಮಂ । ಮಾಂಭೋಜಯೆ ಕ್ಷುಧಿತಮಿತ್ಯಸಕೃದ್ಬ್ರುವಾಣಾ ॥೬೯॥**

ಅರ್ಥ.—ಭಗವಾನ್-ಶ್ರೀರಾಮರು, ತದಶೇಷಂ=ಖುದ್ರದೇವರಿಂದ ಹೇಳಲ್ಪಟ್ಟ ವಿಶಿಷ್ಟವನ್ನೂ, ರಹಸಿ-ಅಂತರಂಗದಲ್ಲಿ, ಶೃತ್ವಾ(ಏವ)-ಕೇಳಿ, ಓಂ=ತಥಾಸ್ತು, ಇತಿ=ಹೀಗೆಂದು, ಉವಾಚ=ಹೇಳಿದರು. ಅಥ-ಅನಂತರದಲ್ಲಿ, ಹರಸ್ಯ-ಖುದ್ರದೇವರ, ಅಪರಾ = ಬೇರೆ, ತನುಃ = ರೂಪರಾದ, ದೂರ್ವಾಸನಾಮಯುಕ್-ದೂರ್ವಾಸ ಎಂಬ ಹೆಸರಿನ ಮುನಿಯು, ಇಹ-ಇಲ್ಲಿಗೆ, ಅಗಮತ್=ಬಂದರು. ರಾಮಂ - ಶ್ರೀರಾಮರನ್ನು ಕುರಿತು ಕ್ಷುಧಿತಂ=ಹಸಿದಿರುವ, ಮಾಂ-ನನ್ನನ್ನು, ಆಶು-ಶೀಘ್ರವಾಗಿ, ಭೋಜಯ=ಭೋಜನಮಾಡಿಸು, ಇತಿ-ಹೀಗೆಂದು, ಅಸಕೃತ್= ಪದೇಪದೇ, ಬ್ರುವಾಣಾ=ಹೇಳಿದರು.

**ಶ್ಲೋಕ ॥ ಸಿದ್ಧಂನದೇಯ ಮುತಸಾಧ್ಯಮಪೀತಿವಾಚಂ। ಶ್ರುತ್ವಾಸ್ಯವಾಕ್ ಸಮಯಜಾತ ಮುರುಸ್ವಹಸ್ತಾತ್ ॥ ಅನ್ನಂಚತುರ್ಗುಣ ಮದಾದವ್ಯತೋಪಮಾನಂ। ರಾಮಸ್ತದಾಸ್ಯಬುಭುಜೇಥ ಮುನಿಃಸುತುಷ್ಟಃ ॥೭೦॥**

ಅರ್ಥ.—ರಾಮಃ=ಶ್ರೀರಾಮರು, ಅಸ್ಯ=ಆ ದೂರ್ವಾಸಮುನಿಯ, ಸಿದ್ಧಂ=ಇದಕ್ಕೆ ಮುಂಚೆಯೇ ಮಾಡಿರುವ ( ಸಿದ್ಧವಾಗಿರುವ) ಅನ್ನವನ್ನು ಕೊಡಕೂಡದು, ಉತ=ಮತ್ತು, ಸಾಧ್ಯಮಪಿ=ಇನ್ನು ಮೇಲೆ ಪಚನಮಾಡುವ ಅನ್ನವನ್ನೂ, ನದೇಯಂ=ಕೊಡಕೂಡದು. ಇತಿ=ಹೀಗೆಂಬ, ಅಸ್ಯ=

ಆ ಮುನಿಯು, ವಾಚಂ=ವಾಕ್ಯವನ್ನು, ಶ್ರುತ್ವಾ=ಕೇಳಿ, ವಾಕ್ಯಮಯುಮೇ ವ=ಮಾತನಾಡುತ್ತಾ ಇರುವ ಕಾಲದಲ್ಲಿಯೇ, ಜಾತಂ=ಸೃಷ್ಟಿಮಾಡಿ, ಉ ರು=ಉತ್ಕೃಷ್ಟವಾದ, ಅಮೃತೋಪಸಮಾನಂ=ಅಮೃತಕ್ಕೆ ಸಮಾನವಾದ, ಚ ತುರ್ಗುಣಂ=ಭಕ್ಷ್ಯ, ಭೋಜ್ಯ, ಲೇಹ್ಯ, ಪೇಯವೆಂಬ ನಾಲ್ಕು ಬಗೆಯ ಅನ್ನಂ=ಅನ್ನವನ್ನು, ಸ್ವಹಸ್ತಾತ್=ತಮ್ಮ ಹಸ್ತದಿಂದ, ಅದಾತ್=ಕೊಟ್ಟರು ಅಥ=ಅನಂತರದಲ್ಲಿ ಮುನಿಃ=ದೂರ್ವಾಸಮುನಿಯು ಸುತುಷ್ಟಃಸರ್=ಅ ತ್ಯಂತ ಸಂತುಷ್ಟರಾಗಿ, (ತದಾ=ಆಗ) ಅದನ್ನು, ಬುಭುಜೇ=ಭುಂಜಿಸಿದರು.

**ಶ್ಲೋಕ ॥ ತೃಪ್ತಾ್ಯಯುರ್ಯಯೌಚ ಸಕಲಾನ್ ಪ್ರತಿ ಕೋಪಯಾನಃ । ಕಶ್ಚಿನ್ನ ಮೇಽರ್ಥಿತವರಂ ಪ್ರತಿದಾತುಮೀಶಃ ॥ ಏವಂ ಪ್ರತಿಜ್ಞಕ ಋಷಿಃ ಸಹಿತತ್ಪ್ರತಿಜ್ಞಾಂ । ಮೋಘಾಂಚಕಾರ ಭಗವಾನ್ನತು ಕಶ್ಚಿದನ್ಯಃ ॥೫೧॥**

ಅರ್ಥ.—ಮೇ=(ಮಯಾ) – ನನ್ನಿಂದ, ಅರ್ಥಿತ=ಪ್ರಾರ್ಥಿತವಾದ, ವರಂ=ಅಭೀಷ್ಟವನ್ನು, ಪ್ರತಿದಾತುಂ=ಕೊಡುವುದಕ್ಕೋಸ್ಕರ, ಕಶ್ಚಿತ್= ಯಾವ ಪುರುಷನೂ, ಈಶಃ=ಸಮರ್ಥನು, ನ–ಇಲ್ಲವು. ಏವಂ=ಹೀಗೆಂದು, ಪ್ರತಿಜ್ಞಕ–ಪ್ರತಿಜ್ಞೆಮಾಡಿಕೊಂಡಿರುವರಾಗಿಯೂ, ಸಕಲಾನ್ಪ್ರತಿ=ಸಮಸ್ತ ರಲ್ಲೂ, ಕೋಪಯಾನಃ (ಸನ್) – ಕೋಪಮಾಡುವ ಸ್ವಭಾವ ಉಳ್ಳವರಾ ಗಿಯೂ ಇರುವ, ಋಷಿಃ=ದೂರ್ವಾಸರು, ಯುಯೌಚ=ಹೊರಟುಹೋದರು ಭಗವಾನ್–ಪೂಜ್ಯರಾದ ಶ್ರೀರಾಮರು, ತತ್ಪ್ರತಿಜ್ಞಾಂ=ಆ ದೂರ್ವಾಸಋಷಿ ಗಳ ಪ್ರತಿಜ್ಞೆಯನ್ನು, ಮೋಘಾಂಚಕಾರ – ವ್ಯರ್ಥವನ್ನಾಗಿಮಾಡಿದರು, ಸಹಿ=ಆ ದೂರ್ವಾಸಋಷಿಗಳಾದರೋ, ತೃಪ್ತಃ=ತೃಪ್ತಿಯನ್ನು ಹೊಂದಿ ದರು. ಅನ್ಯಃ=ರಾಮರ ಹೊರತು ಬೇರೆ, ಕಶ್ಚಿತ್=ಯಾವ ಪುರುಷನೂ, ನತುಚಕಾರ = ( ದೂರ್ವಾಸಮುನಿಗಳ ಪ್ರತಿಜ್ಞಾಭಂಗವನ್ನು ) ಮಾಡ ಲೇಲಾರನು.

ತಾತ್ಪರ್ಯ.—ದೂರ್ವಾಸರು, ನಾನು ಬೇಡುವ ಅಭೀಷ್ಟವನ್ನು ಯಾವ ಪುರುಷನೂ ಪೂರ್ಣಮಾಡಲಾರನೆಂದು ಪ್ರತಿಜ್ಞೆತಾಳಿರುವರಾಗಿಯೂ ಸಮಸ್ತರಲ್ಲೂ ಕೋಪಮಾಡಿದವರಾಗಿ ಅತೃಪ್ತರಾಗಿ ಹೊರಟುಹೋಗುತ್ತಿ ದ್ದರು. ಅಂತಹ ಕೋಪಿಷ್ಟರಾದ ದೂರ್ವಾಸರ ಪ್ರತಿಜ್ಞೆಯನ್ನು ಶ್ರೀರಾಮರು ವ್ಯರ್ಥಮಾಡಿಬಿಟ್ಟರು. ಶ್ರೀರಾಮರು ಆ ಋಷಿಗಳಿಗೆ ತೃಪ್ತಿಯಾಗಿ ಭೋ

ಜನಮಾಡಿಸುವದರಮೂಲಕ ದೂರ್ವಾಸರ ಪ್ರತಿಜ್ಞಾವನ್ನು ವ್ಯರ್ಥಮಾಡಿದರು. ಶ್ರೀರಾಮರ ವಿನಹಾ ಅನ್ಯರಾದ ಮತ್ಯಾರಿಗೂ ಇದು ಸಾಧ್ಯವಲ್ಲ.

**ಶ್ಲೋಕ ॥ ಕುಂತೀತು ತಸ್ಯಹಿ ಮುನೇರ್ವರ ರತೋಽಜಯತ್ತಂ । ರಾಮಃ ಸ ಕೃಷ್ಣ ತನುವಾ ಸ್ವಬಲಾಜ್ಜಿಗಾಯ ॥ ತಸ್ಮಿಂಚ್ಛಿವೇ ಪ್ರತಿಗತೇ ಮುನಿರೂಪ ಕೇಚ । ಯಾಹೀತಿ ಲಕ್ಷ್ಮಣ ಮುವಾಚ ರಮಾಪತಿಃಸಃ ॥೫೨॥**

ಅರ್ಥ.—ಕುಂತೀತು=ಕುಂತೀದೇವಿಯಾದರೋ, ತಸ್ಯಮುನೇಃ - ಆ ದೂರ್ವಾಸಮುನಿಗಳಿಗೆ, ವರತಃ=ತನಗೆ ಪ್ರಾಪ್ತವಾಗಿದ್ದ ವರದ ಬಲದಿಂದ, ತಂ=ಆ ದೂರ್ವಾಸರನ್ನು, ಅಜಯತ್–ಜಯಿಸಿದಳು. ಸಃರಾಮಃ (ತು) ತಂ=ಶ್ರೀರಾಮದೇವರು, ಕೃಷ್ಣತನುತ್ವಾತ್ - ಕೃಷ್ಣಾವತಾರದಲ್ಲೂನು ಸ್ವಬಲಾ - ತಮ್ಮ ಸ್ವರೂಪ ಸಾಮರ್ಥ್ಯದ್ವಿಶೆಯಿಂದ, ತಂ=ಆ ಮುನಿಯನ್ನು ಜಗಾಯ=ಗೆದ್ದರು. ಅಥ–ಅನಂತರ, ಮುನಿರೂಪಕೇ–ದೂರ್ವಾಸಮುನಿರೂಪವುಳ್ಳ, ತಸ್ಮಿಞ್ಛಿವೇ=ಆ ರುದ್ರದೇವರು, ಪ್ರತಿಗತೇಚ = ತೃಪ್ತರಾಗಿ ಹೊರಟುಹೋದಮೇಲೆ, ಸ ರಮಾಪತಿಃ= ಶ್ರೀರಮಾಪತಿಯಾದ ರಾಮರು, ಲಕ್ಷ್ಮಣಂಪ್ರತಿ=ಲಕ್ಷ್ಮಣರನ್ನು ಕುರಿತು, ಯಾಹೀತಿ–ಬಾಯೆಂದು, ಉವಾಚ=ಹೇಳಿದರು.

ತಾತ್ಪರ್ಯ.—ಕುಂತಿದೇವಿಯು ಮುನಿಗಳ ವರದ ಬಲದಿಂದ ಆ ದೂರ್ವಾಸರಿಗೆ ಮನೋಭಿಷ್ಟವಾದ ಅನ್ನಾದಿಗಳನ್ನು ಕೊಟ್ಟು ಅವರ ಪ್ರತಿಜ್ಞಾಭಂಗಮಾಡಿ ಗೆದ್ದಳು. ಶ್ರೀರಾಮರು ಕೃಷ್ಣಾವತಾರದ ಶರೀರವುಳ್ಳವರಾದ್ದರಿಂದ ಆ ಮುನಿಯನ್ನು ಜಯಿಸಿದರು. ಮುನಿರೂಪವುಳ್ಳ ರುದ್ರದೇವರು ಅಲ್ಲಿಂದ ಹೊರಟುಹೋಗುತ್ತಿರಲಾಗಿ ಶ್ರೀರಾಮರು ಲಕ್ಷ್ಮಣರನ್ನು ಕುರಿತು ತಮ್ಮ ಬಳಿಗೆ ಬಾಯೆಂದು ಹೇಳಿದರು.

ಅವತಾರಿಕೆ.—ಈ ಶ್ಲೋಕದಲ್ಲಿ ಶ್ರೀರಾಮರು ಲಕ್ಷ್ಮಣರನ್ನು ಸಮೀಪಕ್ಕೆ ಬಾರೆಂದು ಕರೆದದ್ದೇನಂದರೆ ಅದರ ಕಾರಣವನ್ನು ನಿರೂಪಿಸುತ್ತಾರೆ.

**ಶ್ಲೋಕ ॥ ಏಕಾಂತೇತು ಯದಾರಾಮ । ಶ್ಚಕ್ರೇ ರುದ್ರೇಣ ಸಂವಿದಂ ॥ ದ್ವಾರಪಾಲಂ ಸಕೃತವಾನ್ । ತದಾಲಕ್ಷ್ಮಣಮೇವಸಃ ॥೫೩॥**

ಅರ್ಥ.—ಸಃ=ರಾಮರು, ಯದಾ-ಯಾವಾಗ, ಏಕಾಂತೇತು=ರಹಸ್ಯಸ್ಥಳದಲ್ಲಿ, ಋದ್ರೇಣ-ಋದ್ರದೇವರ ಸಂಗಡ, ಸಂವಿದಂ=ವಿಚಾರವನ್ನು ಚಕ್ರೇ=ಮಾಡುತ್ತಿದ್ದರೋ, ತದಾ=ಆಗ, ಲಕ್ಷ್ಮಣಮೇವ-ಲಕ್ಷ್ಮಣರನ್ನೇ, ದ್ವಾರಪಾಲಂ=ದ್ವಾರಪಾಲಕನನ್ನಾಗಿ, ಕೃತವಾನ್=ಮಾಡಿದ್ದರು.

ತಾತ್ಪರ್ಯ.—ಶ್ರೀರಾಮರು ಋದ್ರದೇವರ ಸಂಗಡ ಮಾತನಾಡತಕ್ಕ ಕಾಲದಲ್ಲಿ ಲಕ್ಷ್ಮಣರನ್ನು ದ್ವಾರಪಾಲಕರನ್ನಾಗಿ ಮಾಡಿದ್ದರು.

**ಶ್ಲೋಕ || ಯದ್ಯತ್ರ ಪ್ರವಿಶೇತ್ಕಶ್ಚಿ । ದ್ಧನ್ಮಿತ್ವೇತಿವಚೋಬ್ರುವನ್ || ತದಂತ್ರಾಗತಮೃಷಿಂದೃಷ್ಟ್ವಾಮನ್ಯತ ಲಕ್ಷ್ಮಣಃ ||೫೪||**

ಅರ್ಥ.—ಸಃ=ರಾಮರು, ತಂ=ಲಕ್ಷ್ಮಣನನ್ನು ಕುರಿತು, ಅತ್ರ-ಈ ಏಕಾಂತ ಸ್ಥಳಕ್ಕೆ, ಪ್ರವಿಶೇದ್ಯದಿ=ಪ್ರವೇಶಮಾಡಿದರೆ. ತ್ವಾ=ನಿನ್ನನ್ನು, ಹನ್ಮೀತಿ-ಕೊಲ್ಲುತ್ತೇನೆಂಬ, ವಚಃ=ವಾಕ್ಯವನ್ನು, ಬ್ರುವನ್ - ಹೇಳಿದ್ದರು. ತದಂತರಾಗತಂ=ಆ ಸ್ಥಳಕ್ಕೆ ಅಷ್ಟರಲ್ಲಿಯೇ ಬಂದ, ಋಷಿಂ=ದೂರ್ವಾಸರನ್ನು, ಲಕ್ಷ್ಮಣಃ=ಲಕ್ಷ್ಮಣರು, ದೃಷ್ಟ್ವಾ-ನೋಡಿ, ಅಮನ್ಯತ=ಯೋಚಿಸಿದರು.

ತಾತ್ಪರ್ಯ.—ಶ್ರೀರಾಮರು ದ್ವಾರಪಾಲಕರಾದ ಲಕ್ಷ್ಮಣರನ್ನು ಕುರಿತು, ನಾವು ಉಭಯತ್ರರೂ ವಿಚಾರಮಾಡತಕ್ಕ ಸ್ಥಳಕ್ಕೆ ಯಾರಾದರೂ ಪ್ರವೇಶಿಸಿದ್ದೇ ಆದರೆ ನಿನ್ನನ್ನು ಕೊಲ್ಲುತ್ತೇನೆಂದು ಹೇಳಿದ್ದರು. ಅಷ್ಟರಲ್ಲಿಯೇ ಆ ಅಂತರಂಗಸ್ಥಳಕ್ಕೆ ದೂರ್ವಾಸಮುನಿಯು ಬಂದದನ್ನು ನೋಡಿ ಲಕ್ಷ್ಮಣರು ಯೋಚನೆಮಾಡಿದರು.

**ಶ್ಲೋಕ || ದೂರ್ವಾಸಸಃ ಪ್ರತಿಜ್ಞಾತು ರಾಮಂಪ್ರಾಪ್ಯೈವ ಭಜ್ಯತಾಂ || ಅನ್ಯಥಾತ್ವಯಶೋರಾಮೇ । ಕರೋತ್ಯೇಷ ಮುನಿರ್ಧ್ರುವಂ ||೫೫||**

ಅರ್ಥ.—ದೂರ್ವಾಸಸಃ=ದೂರ್ವಾಸರ ಪ್ರತಿಜ್ಞೆಯಾದರೋ, ರಾಮಂ=ರಾಮರನ್ನು, ಪ್ರಾಪ್ಯೈವ=ಹೊಂದಿಯೇವೇ, ಭಜ್ಯತಾಂ = ನಾಶವಾಗಲಿ, ಅನ್ಯಥಾತು=ಹಾಗೆ ಪ್ರತಿಜ್ಞಾ ಭಂಗವಾಗದೆ ಇದ್ದ ಪಕ್ಷದಲ್ಲಿ, ಏಷ ಮುನಿಃ=ಈ ದೂರ್ವಾಸಮುನಿಯು, ರಾಮೇ=ಶ್ರೀರಾಮರಲ್ಲಿ, ಅಯಶಃ= ಅಪಕೀರ್ತಿಯನ್ನು, ಧ್ರುವಂ=ನಿಶ್ಚಯವಾಗಿಯೂ, ಕರೋತಿತು=ಉಂಟು

ಮಾಡುತ್ತಾರೆ. ಇತಿ-ಹೀಗೆಂದು, ಲಕ್ಷ್ಮಣಃ=ಲಕ್ಷ್ಮಣರು, ಅಮನ್ಯತ=ತಿಳಿದುಕೊಂಡರು.

ತಾತ್ಪರ್ಯ.—ಈ ದೂರ್ವಾಸಋಷಿಗಳ ಪ್ರತಿಜ್ಞೆಯು (ನಿಯಮವು) ಶ್ರೀರಾಮರಿಂದಲೇ ಭಂಗವಾಯಿತು. ಹಾಗೆ ಶ್ರೀರಾಮರು ಅವರಿಂದ ಅಪೇಕ್ಷಿತವಾದ ಅನ್ನವನ್ನು ಕೊಡದೇ ಇದ್ದದ್ದೇ ಆದರೆ ಈ ದೂರ್ವಾಸ ಮುನಿಗಳು ರಾಮರಿಗೆ ಅಪಕೀರ್ತಿ ತರುತ್ತಿದ್ದರೆಂದು ಲಕ್ಷ್ಮಣರು ಯೋಚಿಸಿದರೆಂದು ಭಾವವು.

**ಶ್ಲೋಕ ॥ ರಾಘವೋಘ್ನನ್ನಪಿತುಮಾಂ । ಕರೋತ್ಯೇವದಾಯಾಂ ಮಯಿ ॥**
**ಇತಿಮತ್ವಾದದೌ ಮಾರ್ಗಂ । ಸತು ದೂರ್ವಾಸಸೇ ತದಾ ॥೫೬॥**

ಅರ್ಥ.--ರಾಘವಃ=ಶ್ರೀರಾಮರು, ಮಾಂ=ನನ್ನನ್ನು, ಘ್ನನ್ನಿತಿತು=ಕೊಲ್ಲುತ್ತೇನೆಂದು, ವದನ್ನಪಿ=ಹೇಳಿದವರಾದಾಗ್ಯೂ, ಮಯಿ - ನನ್ನಲ್ಲಿ, ದಯಾಂ=ಕರುಣೆಯನ್ನು, ಕರೋತ್ಯೇವ-ಮಾಡಿಯೇ ಮಾಡುತ್ತಾರೆ. ಇತಿ-ಈ ರೀತಿಯಾಗಿ, ಮತ್ವಾ = ತಿಳಿದು (ಯೋಚಿಸಿ,) ಸತು=ಆ ಲಕ್ಷ್ಮಣನು, ತದಾ-ಆಗ, ದೂರ್ವಾಸಸೇ=ದೂರ್ವಾಸಮುನಿಗಳಿಗೆ, ಮಾರ್ಗಂ=ರಾಮರ ಬಳಿಗೆ ಹೋಗುವದಕ್ಕೆ ದಾರಿಯನ್ನು, ದದೌ=ಕೊಟ್ಟರು.

**ಶ್ಲೋಕ ॥ ಸ್ವಲೋಕಗಮನಾಕಾಂಕ್ಷೀ ಸ್ವಯಮೇವತು ರಾಘವಃ ॥**
**ಇಯಂ ಪ್ರತಿಜ್ಞಾ ಹೇತುಃಸ್ಯಾ । ದಿತಿಹನ್ಮೀತಿಸೋಽಕರೋತ್ ॥೫೭॥**

ಅರ್ಥ.—ಸರಾಘವಃ=ಶ್ರೀರಾಮರು, ಸ್ವಲೋಕ=ತಮ್ಮ ವೈಕುಂಠ ಲೋಕವನ್ನು ಕುರಿತು, ಗಮನಾಕಾಂಕ್ಷೀ-ಹೋಗಲಪೇಕ್ಷೆಯುಳ್ಳವರಾಗಿ, ಸ್ವಯಮೇವ-ತಾವೇನೇ, ಇಯಂ=ಇದೇವೇ, ಹೇತ್ಯುಃಸ್ಯಾದಿತಿ=ಕಾರಣವಾಗಲೆಂದು, ಅಪಧಾರ್ಯ-ಭಾವಿಸಿ, (ತ್ವಾಂ) ಹನ್ಮೀತಿ=ನಿನ್ನನ್ನು ಕೊಲ್ಲುತ್ತೇನೆಂದು, ಪ್ರತಿಜ್ಞಾಂ=ಪ್ರತಿಜ್ಞೆಯನ್ನು ಮಾಡಿದರು.

ತಾತ್ಪರ್ಯ.—ಶ್ರೀರಾಮರು ತಾವು ಸ್ವಲೋಕವಾಗ ವೈಕುಂಠಲೋಕವನ್ನು ಕುರಿತು ಹೊರಡತಕ್ಕವರಾದ್ದರಿಂದ, ಲಕ್ಷ್ಮಣರನ್ನೂ ತಮ್ಮ ಸ್ವಲೋಕವಾದ ಶೇಷಲೋಕವನ್ನು ಕುರಿತು ಹೊರಡಲೆಂಬುದಾಗಿ ಯೋಚಿಸಿ ಅದರ ಕಾರಣಭೂತವಾಗಿ ನಿನ್ನನ್ನು ಕೊಲ್ಲುತ್ತೇನೆಂಬ ಪ್ರತಿಜ್ಞೆಯನ್ನು ಮಾಡಿದರು.

**ಶ್ಲೋಕ || ಅತ್ಯಂತಬಂಧು ನಿಧನಂ | ತ್ಯಾಗಯೇವೇತಿ ಚಿಂತಯರ್ನ || ಯಾಹಿ ಸ್ವಲೋಕಮಚಿರಾ | ದಿತ್ಯುವಾಚ ಸಲಕ್ಷ್ಮಣಂ ||೫೮||**

ಅರ್ಥ.--ಸಃ-ಶ್ರೀರಾಮರು, ಲಕ್ಷ್ಮಣಂ= ಲಕ್ಷ್ಮಣದೇವರನ್ನು ಕುರಿತು, ಅತ್ಯಂತ ಬಂಧು ನಿಧನಂ=ಅತ್ಯಂತ ಸ್ನೇಹವುಳ್ಳ ಬಂಧುವಿನ ಕೊಲ್ಲುವಿಕೆ ಎಂಬುದು, ತ್ಯಾಗಯೇವ-ಅವನ ತ್ಯಾಗವೇನೇ, ಇತಿ - ಹೀಗೆಂದು, ಚಿಂತಯರ್ನರ್ನ=ಯೋಚಿಸಿದವರಾಗಿ, ಲಕ್ಷ್ಮಣಂ=ಲಕ್ಷ್ಮಣರನ್ನು ಕುರಿತು, ಅಚಿರಾತ್-ತಕ್ಷಣವೇ, ಸ್ವಲೋಕಂಪ್ರತಿ=ನಿನ್ನ ಲೋಕವನ್ನು ಕುರಿತು, ಯಾಹಿ = ಹೊರಟುಹೋಗು, ಇತಿ – ಹೀಗೆಂದು, ಉವಾಚ= ಹೇಳಿದರು.

ತಾತ್ಪರ್ಯ.—ಶ್ರೀರಾಮರು ಅತ್ಯಂತ ಸ್ನೇಹಯುಕ್ತನಾದ ಬಂಧುವಿನ ತ್ಯಾಗವೇ ಅವನನ್ನು ಕೊಲ್ಲೋಣವು ಎಂದು ಭಾವಿಸಿ ಲಕ್ಷ್ಮಣರನ್ನು ಕುರಿತು ತಕ್ಷಣವೇ ನಿನ್ನ ಲೋಕವನ್ನು ಕುರಿತು ಹೊರಟು ಹೋಗೆಂದು ಹೇಳಿದರು.

**ಶ್ಲೋಕ || ಇತ್ಯುಕ್ತಃ ಸಯಯೌ ಜಗದ್ಭವಭಯಧ್ವಾಂತಛ್ಛಿದಂ ರಾಘವಂ | ಧ್ಯಾಯನ್ನಾಪಚ ತತ್ಪದಂ ದಶಶತೈರ್ಯುಕ್ತೋ ಮುಖಾಂಭೋರುಹೈಃ || ಆಸೀಛ್ಛೇಷ ಮಹಾಫಣೀ ಮುಸಲಭೃದ್ದಿವ್ಯಾಕೃತೀಲಾಂಗಲೀ | ಪರ್ಯಂಕತ್ವ ಮವಾಪ ಯೋಜಲನಿಧೌ ವಿಷ್ಣೋಃ ಶಯಾನಸ್ಯಚ ||೫೯||**

ಅರ್ಥ.—ಇತ್ಯುಕ್ತಃ=ಈ ಪ್ರಕಾರ ಹೇಳಲ್ಪಟ್ಟ, ಸಃ=ಲಕ್ಷ್ಮಣರು, ಜಗತ್=ಜಗತ್ತಿನ, ಭವ=ಸಂಸಾರದ, ಭಯ=ಭಯವೆಂಬ, ಧ್ವಾಂತ= ಕತ್ತಲೆಯನ್ನು, ಛಿದಂ = ಛೇದನ (ಪರಿಹಾರ) ಮಾಡತಕ್ಕ, ರಾಘವಂ= ಶ್ರೀರಾಮರನ್ನು, ಧ್ಯಾಯರ್ನ=ಧ್ಯಾನಮಾಡುತ್ತಾ, ಯಯೌ=ಹೊರಟುಹೋದರು. ( ವೈಕುಂಠದಲ್ಲಿ ) ದಶಶತೈಃ=ಸಹಸ್ರ ಸಂಖ್ಯಾತವಾದ, ಮುಖಾಂಭೋರುಹೈಃ-ಮುಖಕಮಲಗಳುಳ್ಳವರಾಗಿ, ತತ್ಪದಂ-ಶ್ರೀರಾಮರ ಪಾದವನ್ನು (ವೈಕುಂಠಸ್ಥಾನವನ್ನು) ಆಪಚ=ಹೊಂದಿ (ಶ್ರೀಮನ್ನಾರಾಯಣನ ಪಾದವನ್ನು) ದರು. ಮುಸಲಭೃದ್ದಿವ್ಯಾಂಗುಲೀ=ದುಂಡಗಾದ, ದಿವ್ಯಾಕೃತಿಃ=ದೇವಸ್ವರೂಪವಾದ ಪುಛ್ಛವುಳ್ಳ. ಮಹಾಫಣಿ-ಮಹತ್ತರವಾದ ಹೆಡೆ

ಗಳುಳ್ಳ, ಶೇಷಃ-ಶೇಷರೂಪವುಳ್ಳವರಾದರು, ಯಃ=ಯಾವ ಶೇಷದೇವರು, ಪಯೋಜಲನಿಧೌ-ಕ್ಷೀರಸಮುದ್ರದಲ್ಲಿ, ಶಯನಸ್ಯ=ಮಲಗತಕ್ಕ, ವಿಷ್ಣೋಃ-ಶ್ರೀವಿಷ್ಣುಪರಮಾತ್ಮನಿಗೆ, ಪರ್ಯಂಕತ್ವಂ=ಹಾಸಿಗೆ ಸ್ವರೂಪವನ್ನು, ಅವಾಪ=ಹೊಂದಿದರೋ, ಸಃ=ಲಕ್ಷ್ಮಣರು, ತತ್ಪದಂ=ಶ್ರೀರಾಮರ ಪಾದವನ್ನು, ಆಪಚ=ಪರ್ಯಂಕ ರೂಪದಿಂದ, ಮೂಲ ಶೇಷರೂಪದಲ್ಲಿ ಐಕ್ಯರಾದರು.

ತಾತ್ಪರ್ಯ.—ಲಕ್ಷ್ಮಣದೇವರು ಶ್ರೀರಾಮರ ಅಪ್ಪಣೆಯನ್ನು ಸ್ವೀಕಾರಮಾಡಿ ರಾಮರನ್ನ ಧ್ಯಾನಮಾಡಿಕೊಂಡು ಅವರ ಪಾದವನ್ನು-ವೈಕುಂಠವನ್ನು ಸೇರಿದರು. ಮತ್ತು ಶೇಷದೇವರ ಹಾಗೆ ಸಹಸ್ರ ಫಣಿ, ದಿವ್ಯಶರೀರ ದೇವತಾರೂಪವುಳ್ಳವರಾಗಿ ಕ್ಷೀರಸಮುದ್ರದ್ದಲ್ಲಿ ಶಯನಮಾಡುವ ಶ್ರೀಪರಮಾತ್ಮನ ಪರ್ಯಂಕರೂಪದಿಂದ ಮೂಲ ಶೇಷರೂಪದಲ್ಲಿ ಐಕ್ಯರಾಗಿ ಶ್ರೀವಿಷ್ಣುಪರಮಾತ್ಮನ ಪಾದವನ್ನು ಹೊಂದಿದರು.

**ಶ್ಲೋಕ॥ ಅಥರಾಘವಃ ಸ್ವಭವನೋಪಗತೌ।ವಿದಧೇಮತಿಂಸಹಜನೈರಖಿಳೈಃ ಸಮಘೋಷಯಚ್ಚ ಯ ಇಹೇಚ್ಛತಿತ। ತ್ಪದಮಕ್ಷಯಂ ಸಪದಿ ಮೈತ್ವಿತಿಸಃ ॥೬೦॥**

ಅರ್ಥ.—ಅಥ=ಲಕ್ಷ್ಮಣರ ಗಮನಾನಂತರ, ರಾಘವಃ=ಶ್ರೀರಾಮರು, ಅಖಿಳೈಃ=ಸಮಸ್ತರಾದ, ಜನೈಃ=ಭಕ್ತ ಜನರಿಂದ, ಸಹ=ಸಹಿತರಾಗಿ, ಸ್ವಭವನೋಪಗತೌ=ತಮ್ಮ ಸ್ವಂತ ಮನೆಯಾದ ವೈಕುಂಠಲೋಕವನ್ನು ಕುರಿತು, ಉಪಗತೌ-ಹೋಗುವದರಲ್ಲಿ, ಮತಿಂವಿದಧೇ-ಮನೋನಿಶ್ಚಯಮಾಡಿದರು. ಅಪಿ=ಮತ್ತು, ಸಃ-ಶ್ರೀರಾಮರು, ಇಹ= ಈ ಕರ್ಮಭೂಮಿಯಲ್ಲಿ ಇರತಕ್ಕವರಲ್ಲಿ, ಯಃ=ಯಾವನು, ಅಕ್ಷಯಂ – ನಾಶರಹಿತವಾದ, ತತ್ಪದಂ=ಪ್ರಸಿದ್ಧವಾದ ಶ್ರೀಪರಮಾತ್ಮನ ವೈಕುಂಠಸ್ಥಾನವನ್ನು, ಇಚ್ಛತಿ=ಅಪೇಕ್ಷಿಸುತ್ತಾನೆಯೋ, ಸಃ=ಅಂತಹ ಅಧಿಕಾರಿಯು, ಸಪದಿ-ಕೂಡಲೇ, ಮಾ=ನನ್ನನ್ನು ಕುರಿತು, ಏತು=ಬಂದು ಶೇರಲಿ, ಇತಿ-ಹೀಗೆಂದು ಸಮಘೋಷಯಚ್ಚ=ಡಂಗೋರ ಹಾಕಿಸಿದರು.

**ಶ್ಲೋಕ ॥ ಶ್ರುತ್ವಾತುತದ್ಯ ಇಹಮೋಕ್ಷ ಪದೇಚ್ಛವಸ್ತೇ। ಸರ್ವೇ ಸಮಾಯಯು ರಥಾತ್ತೃಣಮಾಪೀಲಂ ॥ ರಾಮಾಜ್ಞಯಾ ಗಮನಶಕ್ತಿರಭೂತ್ತೃಣಾದೇ। ಯೆತತ್ರದೀರ್ಘಭವಿನೋ ನಹಿತೇಶ್ರದ್ದೈಚ್ಛನ್॥**

ಅರ್ಥ.—ಶ್ರುತ್ವಾತು=ಆಹ್ವಾನಘೋಷವನ್ನು ಕೇಳಿ, ಇಹ=ಈ ಕರ್ಮ ಭೂಮಿಯಲ್ಲಿ, ಮೋಕ್ಷಪದೇಪ್ಸವಃ-ಮೋಕ್ಷಸ್ಥಾನವನ್ನಪೇಕ್ಷಿಸತಕ್ಕ, ಆತೃಣಂ-ತೃಣಪರ್ಯಂತ ಜಡಜೀವರುಗಳೂ, ಆಪಿಪೀಲಂ = ಇರುವೆಗಳಾದಿಯಾಗಿ ಸಮಸ್ತ ಚೇತನರುಗಳೂ ಸಹ, ಇಹ-ಈ ಅಯೋಧ್ಯಾನಗರಕ್ಕೆ, ಸಮಾಯಯುಃ=ಬಂದರು, ಅಥ-ಆ ಕಾಲದಲ್ಲಿ, ತೃಣಾದೇಃ=ತೃಣಾದಿ ಜಡಗಳಿಗೂ ಕೂಡ, ರಾಮಾಜ್ಞಯಾ=ಶ್ರೀರಾಮರ ಶಾಸನದಿಂದ, ಗಮನಶಕ್ತಿಃ-ಚಲನಶಕ್ತಿಯು, ಅಭೂತ್ = ಉಂಟಾಯಿತು. ತತ್ರ - ಆ ಕಾಲದಲ್ಲಿ, ಯೇದೀರ್ಘಭವಿನಃ=ಯಾರು ನಿತ್ಯ ಸಂಸಾರಿಗಳೋ, ತೇ=ಅವರು, ನತದ್ವೈಪ್ಸ್ಯ=ಮೋಕ್ಷವನ್ನಪೇಕ್ಷಿಸಲಿಲ್ಲ.

**ಶ್ಲೋಕ || ಸಂಸ್ಥಾಪಯಾಮಾಸ ಕುಶಂ ಸ್ವರಾಜ್ಯೇ । ತ್ವೈಃ ಸಾಕಮೇವಚ ಲವಂ ಯುವರಾಜಮೀಶಃ || ಸಂಸ್ಥಾಪ್ಯ ವಾಲಿತನಯಂ ಕಪಿರಾಜ್ಯ ಆಶು । ಸೂರ್ಯಾತ್ಮಜೋಽಪಿ ರಘುವೀರ ಸಮೀಪಮಾಯಾತ್ ||೬೨।**

ಅರ್ಥ.—ಈಶಃ=ಸರ್ವಸ್ವಾಮಿಯಾದ ಶ್ರೀರಾಮರು, ಆಶು=ಶೀಘ್ರದಲ್ಲಿಯೇ, ಸ್ವರಾಜ್ಯದಲ್ಲಿ, ಕುಶಂ=ತಮ್ಮ ಜೇಷ್ಠಪುತ್ರನಾದ ಕುಶನನ್ನು ಪಟ್ಟಕಟ್ಟಿ, ಲವಂ=ಲವನನ್ನು ಯುವರಾಜನನ್ನಾಗಿಮಾಡಿ, ಸಂಸ್ಥಾಪಯಾಮಾಸ ಪ್ರತಿಷ್ಠಾಮಾಡಿದರು. ಸೂರ್ಯಾತ್ಮಜೋಽಪಿ=ಸೂರ್ಯಪುತ್ರನಾದ ಸುಗ್ರೀವನೂಕೂಡ, ವಾಲಿತನಯಂ-ವಾಲಿಯ ಪುತ್ರನಾದ ಅಂಗದನನ್ನು, ಕಪಿರಾಜ್ಯದಲ್ಲಿ ಪಟ್ಟಕಟ್ಟಿ ಅವನನ್ನು ಕಪಿರಾಜ್ಯದಲ್ಲಿ ಸ್ಥಾಪನಮಾಡಿ ಅನಂತರ, ಸಮೀಪಂ=ಶ್ರೀರಾಮರ ಸಮೀಪವನ್ನು ಕುರಿತು, ಆಶು=ಜಾಗ್ರತೆಯಾಗಿ, ಆಯಾತ್=ಬಂದು ಶೇರಿದನು.

ತಾತ್ಪರ್ಯ.—ಅನಂತರದಲ್ಲಿ ಶ್ರೀರಾಮರು ತಮ್ಮ ಜೊತೆಯಲ್ಲಿ ಮೋಕ್ಷಕ್ಕೆ ಬಂದವರವಿನಹಾ ಉಳಿದಿರತಕ್ಕ ನಿತ್ಯ ಸಂಸಾರಿಗಳನ್ನು ರಕ್ಷಿಸಲು ತಮ್ಮ ರಾಜ್ಯದಲ್ಲಿ ಜೇಷ್ಠಪುತ್ರನಾದ ಕುಶನಿಗೆ ಪಟ್ಟಕಟ್ಟಿ ಲವನನ್ನು ಯುವರಾಜನನ್ನಾಗಿ ಮಾಡಿದರು. ಸೂರ್ಯ ಪುತ್ರನಾದ ಸುಗ್ರೀವನು ಕಪಿರಾಜ್ಯದಲ್ಲಿ ಅಂಗದನನ್ನು ರಾಜನನ್ನಾಗಿ ಮಾಡಿ ಶ್ರೀರಾಮರ ಸಮೀಪಕ್ಕೆ ಹೊರಟುಬಂದನು.

ಅವತಾರಿಕೆ.—ಈ ಶ್ಲೋಕದ ಮೊದಲು ಮುಂದೆ ವೈಕುಂಠಗಮನಾಕಾಂಕ್ಷಿಯಾದ ರಾಮರು ಬಾಕಿ ಇರತಕ್ಕ ಹನುಮಂತನೇ ಮೊದಲಾದ ದೇವತೆಗಳಿಗೆ ಅವರವರ ಯೋಗ್ಯತಾನುಸಾರ ವರಗಳನ್ನು ಕೊಟ್ಟು ಸರ್ವಶ್ರೇಷ್ಠರಾದ ಹನುಮಂತರಿಗೆ ವಕ್ಷ್ಯಮಾಣ ಪ್ರಕಾರ ಹೇಳುತ್ತಾರೆ.—

**ಶ್ಲೋಕ ॥ ಅಥಾಹ ವಾಯುನಂದನಂ । ಸರಾಘವಃ ಸಮಾಶ್ಲಿಷನ್ ॥ ತವಾಹ ಮಕ್ಷಿಗೋಚರಃ । ಸದಾಭವಾಮಿ ನಾನ್ಯಥಾ ॥೬೩॥**

ಅರ್ಥ.—ಅಥ = ಅನಂತರದಲ್ಲಿ, ಸರಾಘವಃ = ಶ್ರೀರಾಮರು, ವಾಯುನಂದನಂ=ವಾಯುಪುತ್ರನಾದ ಆಂಜನೇಯ (ಹನುಮಂತರ) ರನ್ನು ಸಮಾಶ್ಲಿಷನ್–ಚೆನ್ನಾಗಿ ಆಲಿಂಗನಮಾಡಿಕೊಂಡು, ಅಹಂ=ನಾನು, ತವ= ನಿನಗೆ, ಸದಾ–ಸರ್ವಕಾಲದಲ್ಲಿಯೂ, ಅಕ್ಷಿಗೋಚರಃ=ಪ್ರತ್ಯಕ್ಷಗೋಚರನು ಭವಾಮಿ=ಆಗುತ್ತೇನೆ. ನಾನ್ಯಥಾ=ಇದಕ್ಕೆ ಅನ್ಯಥಾಯಿಲ್ಲ. ಇತಿ = ಹೀಗೆಂದು, ಆಹ–ಹೇಳಿದರು.

**ಶ್ಲೋಕ ॥ ತ್ವಯಾ ಸದಾ ಮಹತ್ತಪಃ । ಸುಕಾರ್ಯ ಮುತ್ತಮೋತ್ತಮಂ ॥ ತದೇವಮೇ ಮಹಪ್ರಿಯಂ । ಚಿರಂ ತಪಸ್ತ್ವಯಾಕೃತಂ ॥೬೪॥**

ಅರ್ಥ.—(ಹೇ ವಾಯುನಂದನ=ವಾಯುಪುತ್ರನಾದ ಹನುಮಂತನೇ ) ತ್ವಯಾ=ನಿನ್ನಿಂದ, ಸದಾ=ಸರ್ವದಾ, ಉತ್ತಮೋತ್ತಮಂ=ಅತ್ಯುತ್ತಮವಾದ, ಮಹತ್ತಪಃ=ಶ್ರೇಷ್ಠವಾದ ತಪಸ್ಸು, ಸುಕಾರ್ಯಂ=ಚೆನ್ನಾಗಿ ಮಾಡಲ್ಪಡತಕ್ಕದ್ದು, ತ್ವಯಾ=ನಿನ್ನಿಂದ (ಯತ್–ಯಾವ ಪ್ರಕಾರ, ) ಚಿರಂ=ಸಾವಕಾಶವಾಗಿ, ಯತ್ತಪಃ–ಯಾವ ತಪಸ್ಸು, ಕೃತಂ=ಮಾಡಲ್ಪಟ್ಟಿತೋ, ತದೇವ=ಅದೇ, ಮೇ=ನನಗೆ, ಮಹತ್ಪ್ರಿಯಂ=ಅತ್ಯಂತ ಪ್ರಿಯಕರವಾದದ್ದು ( ಇತಿ=ಹೀಗೆಂದು) ವಾಯುನಂದನಂಪ್ರತಿಆಹ=ಹನುಮಂತರಿಗೆ ಹೇಳಿದರು.

**ಶ್ಲೋಕ ॥ ದಶಾಸ್ಯ ಕುಂಭಕರ್ಣಕೌ । ಯಥಾ ಸುಶಕ್ತಿಮಾನಪಿ ॥ ಜಘಂಥ ನ ಪ್ರಿಯಾಯಮೇ । ತಪೈವ ಜೀವಕಲ್ಪಕಂ ॥೬೫॥**

ಅರ್ಥ.—( ಹೇ ವಾಯುನಂದನ=ಹನುಮಂತನೇ) ತ್ವಂ=ನೀನು, ಸುಶಕ್ತಿಮಾನಪಿ=ಅತ್ಯಂತ ಶಕ್ತಿಯುಳ್ಳವನಾದಾಗ್ಯೂ, ಯಥಾ–ಯಾವ ಕಾರಣದಿಂದ, ಮೇ–ನನಗೆ, ಪ್ರಿಯಾಯ=ಪ್ರೀತ್ಯರ್ಥವಾಗಿ, ದಶಾಸ್ಯಕುಂಭ

ಕರ್ಣಕೌ=ರಾವಣ ಕುಂಭಕರ್ಣರನ್ನು, ನಜಘಂಘ-ಸಂಹಾರಮಾಡಲಿಲ್ಲವೋ ತಥೈವ=ಆ ಕಾರಣದಿಂದಲೇ, ತ್ವಂ-ನೀನು, ಕಲ್ಪಕಂ-ಕಲ್ಪಾವಧಿ ಪರ್ಯಂತರ ಜೀವ=ಜೀವಿಸು, ಇತ್ಯಾಹಿ-ಹೀಗೆಂದು ಹೇಳಿದರು.

ತಾತ್ಪರ್ಯ.—ಶ್ರೀರಾಮರು ಶ್ರೀಹನುಮಂತರಿಗೆ ಹೇಳುತ್ತಾರೆ. ಹೇ ವಾಯುನಂದನ ! ಲಂಕಾಪಟ್ಟಣದ ಯುದ್ಧದಲ್ಲಿ ರಾವಣಕುಂಭಕರ್ಣರನ್ನು ಸಂಹಾರಮಾಡಲು ನೀನು ಅತ್ಯಂತ ಶಕ್ತಿಯುಳ್ಳವನಾಗಿದ್ದಾಗ್ಯೂ ನನಗೆ ಪ್ರೀತಿಯಾಗುವದಕ್ಕೋಸ್ಕರ ಅವರನ್ನು ಸಂಹಾರ ಮಾಡಲಿಲ್ಲ. ಆ ಕಾರಣದಿಂದ ಆಬ್ರಹ್ಮಕಲ್ಪಾಂತವಾಗಿ ನೀನು ಜೀವಿಸು, (ಚಿರಂಜೀವಿಯಾಗಿರು.)

**ಶ್ಲೋಕ ॥ ಪಯೋಬ್ಧಿ ಮಧ್ಯಗಂಚಮೇ । ಸುಸದ್ಮಚಾನ್ಯದೇವವಾ ॥ ಯಥೇಷ್ಟತೋಗಮಿಷ್ಯಸಿ । ಸ್ವದೇಹ ಸಂಯುತೋಽಪಿಸ ॥೬೬॥**

ಅರ್ಥ.—ಅಪಿಚ – ಮತ್ತು, ಪಯೋಬ್ಧಿ=ಕ್ಷೀರಸಮುದ್ರದ, ಮಧ್ಯಗಂ=ಮಧ್ಯದಲ್ಲಿರುವ, ಮೇ=ನನ್ನ, ಸುಸದ್ಮ = ಸಮೀಚೀನ ಮನೆಯಾದ ಶ್ವೇತದ್ವೀಪವನ್ನಾಗಲೀ, ಅನ್ಯದೇವವಾ=ಇತರವಾದ ಅನಂತಾಸನ ಅಥವಾ ವೈಕುಂಠವನ್ನಾಗಲಿ, ಸ್ವದೇಹಸಂಯುತಸನ್ನಪಿ = ಈ ದೇಹದಿಂದಲೇ, ಯಥೇಷ್ಟತಃ=ನಿನ್ನ ಇಛ್ಛಾನುಸಾರ, ಗಮಿಷ್ಯಸಿ=ಪ್ರವೇಶಮಾಡುತ್ತೀ.

**ಶ್ಲೋಕ ॥ ಯಥೇಷ್ಟ ಭೋಗ ಸಂಯುತಃ । ಸುರೇಶಗಾಯಕಾದಿಭಿಃ ॥ ಸಮೀಡ್ಯಮಾನ ಸದ್ಯಶಾ । ರಮಸ್ವಮತ್ಪುರಃ ಸದಾ ॥೬೭॥**

ಅರ್ಥ.—ಸುರೇಶಗಾಯಕಾದಿಭಿಃ=ದೇವೇಂದ್ರನ ಗಾಯಕರು, ವಂದಿಮಾಗಧರು ಮೊದಲಾದ ದೇವತಾ ಸಮೂಹದಿಂದ, ಸಮೀಡ್ಯಮಾನಃ–ಚೆನ್ನಾಗಿ ಸ್ತೋತ್ರಮಾಡಲರ್ಹವಾದ, ಸದ್ಯಶಾಃ=ಸಮೀಚೀನವಾದ ಕೀರ್ತಿಯುಳ್ಳವನಾಗಿ, ಸದಾ=ಸರ್ವದಾ, ಯಥೇಷ್ಟಭೋಗಸಂಯುತಃ ಸಣ=ನಿನ್ನ ಇಛ್ಛಾನುಸಾರ ಭೋಗಸುಖಗಳಿಂದ ಯುಕ್ತನಾದವನಾಗಿ, ಸದಾ = ಸರ್ವಕಾಲದಲ್ಲಿಯೂ, ಮತ್ಪುರಃ=ನನ್ನ ಸಾಕ್ಷಾತ್ಸನ್ನಿಧಾನದಲ್ಲಿ, ರಮಸ್ವ=ವಿಹಾರಮಾಡು.

**ಶ್ಲೋಕ ॥ ತವೇಪ್ಸಿತಂ ನ ಕಿಂಚನ । ಕ್ವಚಿತ್ಕಥಾಚಿ ದೇವವಾ । ಮೃಷಾಭವೇತ್ರಿಯಶ್ಚಮೇ । ಪುನಃಪುನರ್ಭವಿಷ್ಯಸಿ ॥೬೮॥**

ಅರ್ಥ.—( ಹೇ ಹನುಮನ್=ಹನುಮಂತನೇ) ತವ=ನಿನಗೆ, ಈಪ್ಸಿತಂ=ಅಪೇಕ್ಷಿತವಾದದ್ದು, ಕಿಂಚನ=ಯಾವದೇ ಆಗಲಿ, ಕ್ವಚಿದಪಿ-ಯಾವ ಸ್ಥಳದಲ್ಲೇ ಅಗಲಿ, ಕದಾಚಿದೇವವಾ=ಯಾವ ಕಾಲದಲ್ಲಿಯೇ ಆಗಲಿ, ಮೃಷಾ=ವ್ಯರ್ಥವು (ದುರ್ಲಭವು) ನಭವೇತ್=ಆಗುವದಿಲ್ಲವು. ತ್ವಂ=ನೀನು, ಮೇ-ನನಗೆ, ಪುನಃಪುನಃ = ಪ್ರತಿಕಲ್ಪಗಳಲ್ಲಿಯೂ, ಪ್ರಿಯಶ್ಚ = ಅತ್ಯಂತ ಪ್ರೀತಿಪಾತ್ರನೇ, ಭವಿಷ್ಯಸಿ=ಆಗುತ್ತೀಯೆ.

**ಶ್ಲೋಕ || ಇತೀರಿತೋ ಮರುತ್ಸುತೋ | ಜಗಾದ ವಿಶ್ವನಾಯಕಂ || ವಿಧೇಹಿ ಪಾದಪಂಕಜೇ | ತವೇಶ ಭಕ್ತಿ ಮುತ್ತಮಾಂ ||೬೯||**

ಅರ್ಥ.—ಇತೀರಿತಃ=ಈ ರೀತಿಯಾಗಿ ರಾಮರಿಂದ ಹೇಳಿಸಿಕೊಳ್ಳಲ್ಪಟ್ಟ, ಮರುತ್ಸುತಃ - ವಾಯುಪುತ್ರರಾದ ಹನುಮಂತರು, ವಿಶ್ವನಾಯಕಂ=ಪ್ರಪಂಚಕ್ಕೆ ಪ್ರಭುವಾದ ಶ್ರೀರಾಮರನ್ನು ಕುರಿತು, ಹೆ ! ಈಶ-ಎಲೌ ಸ್ವಾಮಿಯೇ, ಮೇ - ನನಗೆ, ತವ-ನಿನ್ನ, ಪಾದಪಂಕಜೇ=ಪಾದಕಮಲದಲ್ಲಿ, ವುತ್ತಮಾಂ=ಉತ್ಕೃಷ್ಟವಾದ, ಭಕ್ತಿಂ - ಭಕ್ತಿಯನ್ನು, ವಿಧೇಹಿ-ದಯಪಾಲಿಸು, (ಎಂದು) ಜಗಾದ-ಹೇಳಿದರು (ಪ್ರಾರ್ಥಿಸಿದರು. )

**ಶ್ಲೋಕ || ಸದಾಪ್ರವರ್ಧಮಾನಯಾ | ತಯಾರಮೇ ಹ ಮಂಜಸಾ || ಸಮಸ್ತ ಜೀವ ಸಂಚಯಾ | ತ್ಸದಾಧಿಕಾ ಹಿ ಮೇಸ್ತು ಸಾ ||೭೦||**

ಅರ್ಥ.—ಎಲೌ ಸ್ವಾಮಿಯೇ, ಅಹಂ-ನಾನು, ಸದಾ=ಸರ್ವಕಾಲದಲ್ಲಿಯೂ, ಪ್ರವರ್ಧಮಾನಯಾ-ಅಭಿವೃದ್ಧಿಯಾಗುತ್ತಲಿರುವ, ತಯಾ-ಆ ಭಕ್ತಿಯಿಂದಲೇ, ಅಂಜಸಾ=ಚೆನ್ನಾಗಿ, ರಮೇ=ಸಂತೋಷಪಡುತ್ತಿರುವೆನು. ತಯ್ಯೈವಭಕ್ತ್ಯಾ=ಆ ಭಕ್ತಿಯಿಂದಲೇ, ಸದಾ = ಸರ್ವಕಾಲದಲ್ಲಿಯೂ, ಸಮಸ್ತಜೀವಸಂಚಯಾತ್ ಹಿ=ಎಲ್ಲಾ ಜೀವರುಗಳ ಸಮೂಹಕ್ಕಿಂತಲೂ, ಮೇ=ನನ್ನ, ಸಾ=ಆ ಭಕ್ತಿಯು, ಅಧಿಕಾ=ಹೆಚ್ಚಾದದ್ದು, ಅಸ್ತು=ಆಗಲಿ, ಇತಿ ಜಗಾದ-ಈ ರೀತಿ ಕೇಳಿದರು.

**ಶ್ಲೋಕ || ನಮೋ ನಮೋ ನಮೋ ನಮೋ | ನತೋಽಸ್ಮಿತೇ ಸದಾಪದಂ || ಸಮಸ್ತ ಸದ್ಗುಣೋಭೃತಂ | ನಮಾಮಿತೇ ಪದಂ ಪುನಃ ||೭೧||**

ಅರ್ಥ.—( ಹೇ ಈಶ ) ತೇಪದಂ=ನಿನ್ನ ಪಾದಗಳಿಗೆ, ಸದಾ=ಸರ್ವ ಕಾಲದಲ್ಲಿಯೂ, ನಮೋ ನಮೋ ನಮೋ=ನಮಸ್ಕಾರಗಳನ್ನು ಮಾಡುತ್ತಾ ನತೋಽಸ್ಮಿ=ಬಾಗಿರುತ್ತೇನೆ. ಸಮಸ್ತಸದ್ಗುಣೋಚ್ಛ್ರಿತಂ=ಸರ್ವಿಾಚೀನವಾದ ಸಮಸ್ತ ಸದ್ಗುಣಗಳಿಂದ ಅತ್ಯುತ್ತಮವಾದ, ತೇಪದಂ=ನಿನ್ನ ಪಾದವನ್ನು, ಪುನಃ=ತಿರಿಗೀ, ನಮಾಮಿ=ನಮಸ್ಕಾರಮಾಡುತ್ತೇನೆ.

**ಶ್ಲೋಕ || ಇತೀರಿತೇ ತಥೇತಿತಂ | ಜಗಾದಪುಷ್ಕರೇಕ್ಷಣಃ || ಜಗಾಮಧಾಮ ಚಾತ್ಮನ | ಸ್ತೃಣಾದಿನಾ ಸಹೈವಸಃ ||೭೨||**

ಅರ್ಥ.—ಹನುಮಂತರು ಈ ರೀತಿಯಾಗಿ, ಈರಿತೇಸತಿ=ಹೇಳುತ್ತಿರಲಾಗಿ, ತಂ=ಆ ಹನುಮಂತನನ್ನು ಕುರಿತು, ಪುಷ್ಕರೇಕ್ಷಣಃ=ಕಮಲನೇತ್ರನಾದ ಶ್ರೀರಾಮರು, ತಥೇತಿ=ಹಾಗೇ ಆಗಲಿ ಎಂದು, ಜಗಾದ-ಹೇಳಿದರು. ಸಃ=ಶ್ರೀರಾಮರು, ಆತ್ಮನಃಧಾಮ = ತಮ್ಮ ಮನೆಯಾದ ವೈಕುಂಠವನ್ನು ಕುರಿತು, ತೃಣಾದಿನಾಸಹೈವ=ತೃಣಾದಿ ಜಡಜೀವರುಗಳಿಂದ ಸಹಿತರಾಗಿ, ಜಗಾಮಚ=ಹೊರಟುಹೋದರು.

**ಶ್ಲೋಕ || ಖಗಾಮೃಗಾ ಸ್ತೃಣಾದಯಃ | ಪಿಪೀಲಿಕಾಶ್ಚಗರ್ದಭಾಃ | ತದಾಸು ರುತ್ತಮಾಯತೋ | ನ್ನೃವಾನರಾಸ್ತು ಕಿಂಪುನಃ ||೭೩||**

ಅರ್ಥ.—ತದಾ=ಸ್ವರ್ಗಾರೋಹಣಕಾಲದಲ್ಲಿ, ಯತಃ=ಯಾವ ಶ್ರೀ ಪರಮಾತ್ಮನ ಅನುಗ್ರಹದಿಂದ, ಖಗಾಃ=ಪಕ್ಷಿಗಳು, ಮೃಗಾಃ-ಚತುಷ್ಪಾದ ದ್ವಿಪಾದದ ಮೃಗಗಳು, ಗರ್ದಭಾಃ=ಕತ್ತೆಗಳೂ, ಪಿಪೀಲಿಕಾಃ = ಇರುವೆಗಳೂ, ತೃಣಾದಯಶ್ಚ – ತೃಣಾದಿ ಸಮಸ್ತ ಜಡಜೀವಜಂತುಗಳೂ ಸಹ, ಉತ್ತಮಾಃ=ಶ್ರೇಷ್ಠವಾದ ದಿವ್ಯಶರೀರ ಸಂಪತ್ತಿಯುಳ್ಳವರಾಗಿಯೇ ಇದ್ದರು ತಸ್ಮಾತ್ ಕಾರಣಾತ್=ಆದ್ದರಿಂದ, ನೃ – ಮನುಷ್ಯರು, ವಾನರಾಸ್ತು= ಕಪಿಗಳ ವಿಷಯದಲ್ಲಿ, ಕಿಂಪುನಃ=ಶ್ರೀರಾಮರ ಅನುಗ್ರಹದ ವಿಚಾರದಲ್ಲಿ ಹೇಳತಕ್ಕದ್ದೇನಿದೆ.

**ಶ್ಲೋಕ || ಸದೈವರಾಮಭಾವನಾ | ತ್ಸದಾಸುತತ್ವವೇದಿನಃ || ಯತೋ ಭವಂ ಸ್ತತಸ್ತುತೇ | ಯಯುಃಪದಂ ಹರೇಸ್ತದಾ ||೭೪||**

ಅರ್ಥ.—ತೇ – ಆ ತೃಣಾದಿ ಸಕಲ ಜೀವಜಂತುಗಳೂ, ಯತಃ= ಯಾವಕಾರಣದ್ದೆಶೆಯಿಂದ, ಸದಾ=ಸರ್ವದಾ, ರಾಮಭಾವನಾದೇವ=ಶ್ರೀ

ರಾಮರಚಿಂತನಾದಿಂದಲೂ, ಸದಾ-ಸರ್ವದಾ, ಸುತತ್ವವೇದಿನಃ = ಸಮೀಚೀನವಾದ ಶ್ರೀರಾಮತತ್ತ್ವವನ್ನು ಬಲ್ಲವರಾಗಿಯೂ, ಅಭವನ್ = ಆದರೋ, ತತಃ=ಆ ಕಾರಣದಿಂದಲೇ, ತೇ=ಅವರೆಲ್ಲರೂ, ತದಾ=ಶ್ರೀರಾಮರು ವೈಕುಂಠಕ್ಕೆ ಹೊರಡುವ ಕಾಲದಲ್ಲಿ, ಹರೇಃಪದಂ=ವೈಕುಂಠಸ್ಥಾನವನ್ನು ಕುರಿತು ಯಯುಃ=ಹೊರಟುಹೋದರು.

**ಶ್ಲೋಕ ॥ ಸತೈಃ ಸಮಾವೃತೋವಿಭು । ರ್ಯಯೌದಿಶಂ ತದೋತ್ತರಾಂ ॥**
**ಅನಂತಸೂರ್ಯದೀಧಿತಿ । ರ್ದುರಂತ ಸದ್ಗುಣಾರ್ಣವಃ ॥೭೫॥**

ಅರ್ಥ.— ದುರಂತಸದ್ಗುಣಾರ್ಣವಃ=ಅಪಾರವಾದ ಸದ್ಗುಣಗಳಿಂದ ಸಮುದ್ರಸ್ಥಾನೀಯರಾದ, ಸಃವಿಭುಃ=ಶ್ರೀರಾಮರು, ತೈಃ=ಆ ಜನಸಮೂಹಗಳಿಂದ ಸಹಿತರಾಗಿ, ಅನಂತಸೂರ್ಯದೀಧಿತಿಃ (ಸನ್) – ಅಸಂಖ್ಯಾತ ಸೂರ್ಯಪ್ರಕಾಶವುಳ್ಳವರಾಗಿ, ಉತ್ತರಾಂದಿಶಂ=ಉತ್ತರದಿಕ್ಕನ್ನು ಹಿಡಿದು, ಯಯೌ=ವೈಕುಂಠವನ್ನು ಕುರಿತು ತೆರಳಿದರು.

**ಶ್ಲೋಕ ॥ ಸಹಸ್ರಸೂರ್ಯಮಂಡಲ । ಜ್ವಲತ್ಕಿರೀಟಮೂರ್ಧಜಃ ॥**
**ಸುನೀಲಕುಂತಲಾವೃತಾ । ಮಿತೇಂದು ಕಾಂತಿ ಸನ್ಮುಖಃ ॥೭೬॥**

ಅರ್ಥ.—ಸಹಸ್ರಸೂರ್ಯಮಂಡಲ=ಸಹಸ್ರ ಸೂರ್ಯ ಸಮೂಹದ ಹಾಗೆ, ಜ್ವಲತ್-ಪ್ರಕಾಶಿಸುತ್ತಿರುವ, ಕಿರೀಟ=ಕಿರೀಟದಿಂದ ಯುಕ್ತವಾದ ಮೂರ್ಧಜಃ-ತಲೆ ಕೂದಲುಗಳುಳ್ಳ, ಸುನೀಲ = ಅತ್ಯಂತ ಕಪ್ಪಾದ, ಕುಂತಲ-ಮುಂಗುರುಳಿನಿಂದ, ಆವೃತಾ=ಸುತ್ತಿಕೊಂಡಿರುವ, ಅಮಿತೇಂದು ಕಾಂತಿ=ಅನೇಕ ಚಂದ್ರರ ಕಾಂತಿಯೋಪಾದಿಯಲ್ಲಿ ಕಾಂತಿವುಳ್ಳ, ಸನ್ಮುಖಃ= ಸಮೀಚೀನವಾದ ಮುಖವುಳ್ಳ, ಪ್ರಭುಃ=ಶ್ರೀರಾಮರು.

**ಶ್ಲೋಕ ॥ ಸುರಕ್ತಪದ್ಮಲೋಚನಃ ॥ ಸುವಿದ್ಯುದಾಭಕುಂಡಲಃ ॥ ಸುಹಾಸವಿ**
**ದ್ರುಮಾಧರಃ । ಸಮಸ್ತವೇದವಾಗ್ರಸಃ ॥೭೭॥**

ಅರ್ಥ.—(ವಿಭುಃ–ಪ್ರಭುಗಳಾದ ಶ್ರೀರಾಮರು, ) ಸುರಕ್ತಪದ್ಮ= ಸಮೀಚೀನವಾದ ಕೆಂಪುಬಣ್ಣವುಳ್ಳ ಪದ್ಮಗಳೋಪಾದಿಯಲ್ಲಿ, ಲೋಚನಃ- ನೇತ್ರವುಳ್ಳವರು, ಸುವಿದ್ಯುದಾಭಕುಂಡಲಃ = ಸಮೀಚೀನವಾದ ಮಿಂಚಿನ ಹಾಗೆ ಕಾಂತಿವುಳ್ಳ ಕರ್ಣಭೂಷಣಗಳುಳ್ಳವರು, ಸುಹಾಸ = ಸಮೀಚೀನ ವಾದ ಮಂದಹಾಸದಿಂದಯುಕ್ತವಾದ, ವಿದ್ರುಮಾಧರಃ-ಹವಳದೋಪಾದಿ

ಯಲ್ಲಿರುವ, ಅಧರಃ-ತುಟಿಯುಳ್ಳವರೂ, ಸಮಸ್ತವೇದವಾಗ್ರಸಃ=ಸಮಸ್ತ ವೇದಗಳ ವಾಕ್ಯದೋಪಾದಿಯಲ್ಲಿ ವಾಕ್ಯವುಳ್ಳವರಾಗಿದ್ದರು.

**ಶ್ಲೋಕ || ದಿವಾಕರೌಘಕೌಂಸ್ತುಭ | ಪ್ರಭಾಸಕೋರು ಕಂಧರಃ || ಸುಪೀಪ ರೋನ್ನತೋರು ಸ | ಜ್ಜಗದ್ಭರಾಂಸಯುಗ್ಮಕಃ ||೭೮||**

ಅರ್ಥ.--ದಿವಾಕರೌಘಾಂ-ಸೂರ್ಯ ಸಮೂಹಗಳೋಪಾದಿಯಲ್ಲಿರುವ, ಕೌಂಸ್ತುಭಪ್ರಭಾಸಕ-ಕೌಂಸ್ತುಭಮಣಿಯಿಂದ ಪ್ರಕಾಶಿಸುತ್ತಿರುವ, ಉರು=ಉತ್ಕೃಷ್ಟವಾದ, ಕಂಧರಃ=ಕೊರಳು ಪ್ರದೇಶವುಳ್ಳವರು, ಸುಪೀವರೋನ್ನತ=ಅತ್ಯಂತ ಪುಷ್ಟವಾಗಿಯೂ ಉನ್ನತವಾಗಿಯೂ, ಉರು=ಉತ್ತಮಗಳಾಗಿಯೂ, ಸತ್=ನಿರ್ದುಷ್ಟವಾದ, ಜಗದ್ಭರಂ = ಜಗತ್ಪೋಷಕಗಳಾದ, ಅಂಸಯುಗ್ಮಕಃ=ಭುಜದ್ವಯುಗಳುಳ್ಳವರೂ ಆಗಿದ್ದರು.

**ಶ್ಲೋಕ || ಸುವೃತ್ತದೀರ್ಘಪೀವರೋ | ಲ್ಲಸದ್ಭುಜದ್ವಯಾಂಕಿತಃ || ಜಗದ್ವಿಮಥ್ಯ ಸಂಭೃತಃ | ಶರೋಸ್ಯದಕ್ಷಿಣೇಕರೇ ||೭೯||**

ಅರ್ಥ.-ಸುವೃತ್ತ-ಅತ್ಯಂತ ಗುಂಡಗೂ, ದೀರ್ಘ-ಉದ್ದವಾಗಿಯೂ ಪೀವರ=ಪುಷ್ಟವಾಗಿಯೂ, ಉಲ್ಲಸತ್-ಪ್ರಕಾಶಿಸುತ್ತಿರುವ, ಭುಜದ್ವಯ-ಬಾಹುದ್ವಯಗಳಿಂದ, ಅಂಕಿತಃ=ಶೋಭಿಸುತ್ತಲಿರುವ, ಅಸ್ಯ=ಶ್ರೀರಾಮರ ದಕ್ಷಿಣೇಕರೇ=ಬಲದ ಕೈಯ್ಯಲ್ಲಿ, ಜಗದ್ವಿಮಥ್ಯ=ಪ್ರಪಂಚವನ್ನು ಮಥನಮಾಡೋಣದರಲ್ಲಿ, ಸಂಭೃತಃ=ಸಮರ್ಥವಾದ, ಶರಃ=ಬಾಣವು (ಇತ್ತು.)

**ಶ್ಲೋಕ || ಸ್ವಯಂ ಸತೇನ ನಿರ್ಮಿತೋ | ಹತೋ ಮಧುಶ್ಚ ಕೈಟಭಃ || ಶರೇಣಯೇನ ವಿಷ್ಣುನಾ ದದೌಚ ಲಕ್ಷ್ಮಣಾನುಜೇ ||೮೦||**

ಅರ್ಥ.—ಸಃ=ಆ ಧನುಃಸ್ಸು, ಸ್ವಯಂ=ತಾವೇ (ರಾಮರೇ) ತೇನ ವಿಷ್ಣುನಾ=ವಿಷ್ಣುರೂಪದಿಂದ, ನಿರ್ಮಿತಃ=ನಿರ್ಮಿಸಲ್ಪಟದ್ದು, ಯೇನಶರೇಣ -ಆ ಧನುಃಸ್ಸಿನಿಂದಲೇ, ಮಧುಃ=ಮಧುನಾಮಕ ದೈತ್ಯನೂ, ಕೈಟಭಶ್ಚ= ಕೈಟಭನಾಮಕ ದೈತ್ಯನೂ ಕೂಡ, ಹತಃ=ಸಂಹರಿಸಲ್ಪಟ್ಟರು. ತತ್= ಅಂತಃ ಬಾಣವನ್ನು, ಲಕ್ಷ್ಮಣಾನುಜೇ=ಲಕ್ಷ್ಮಣನತಮ್ಮನಾದ ಶತೃಘ್ನನಿಗೆ, ದದೌಚ-ಕೊಟ್ಟಿದ್ದರು.

**ಶ್ಲೋಕ || ಸಶತೃಸೂದನೋವಧೀನ್ಮಧೋ ಸುತಂ ರಸಾಹ್ವಯಂ || ಶರೇಣ ಯೇನಚಾಕರೋ | ತ್ಪುರೀಂಚ ಮಾಧುರಾಭಿಧಾಂ ||೮೧||**

ಅರ್ಥ.—ಸಃ=ಅನುಜನಾದ, ಶತ್ರುಸೂದನಃ=ಶತ್ರುಘ್ನನು, ಯೇನ ಶರೇಣ=ಆ ಬಾಣದಿಂದಲೇ, ಮಧೋಃಸುತಂ–ಮಧುನಾಮಕದೈತ್ಯನ ಮಗನಾದ, ರಸಾಹ್ವಯಂ=ರಸನೆಂದು ನಾಮಧೇಯವುಳ್ಳ (ಲವಣಾಸುರನನ್ನು,) ಅವಧೀತ್=ಸಂಹಾರಮಾಡಿ, (ಅದೇ ಸ್ಥಳದಲ್ಲಿ) ಮಾಧುರಾಭಿಧಾಂ=ಮಧುರಾ ಎಂದು ಹೆಸರುಳ್ಳ, ಪುರೀಂ=ಪಟ್ಟಣವನ್ನು, ಚಕಾರಚ – ನಿರ್ಮಾಣ ಮಾಡಿದನು.

**ಶ್ಲೋಕ ॥ ಸಮಸ್ತಸಾರ ಸಂಭವಂ ಶರಂದಧಾರತಂಕರೇ ॥೮೨॥**

ಅರ್ಥ.—ತಂ=ಶ್ರೇಷ್ಠರಾದ ಶ್ರೀರಾಮರು, ಸಮಸ್ತ=ಸರ್ವ ಪದಾರ್ಥಗಳ, ಸಾರ=ಶ್ರೇಷ್ಠವಾದ ಅಂಶದಿಂದ ಅಂದರೆ ವಾಯುದೇವರ ಸ್ವರೂಪದಿಂದ, ಸಂಭವಂ–ನಿರ್ಮಿತವಾದ, ಶರಂ=ಬಾಣವನ್ನು, ಕರೇ=ಕೈಯ್ಯಲ್ಲಿ, ದಧಾರ–ಧಾರಣಮಾಡಿದ್ದರು.

**ಶ್ಲೋಕ ॥ ಸವಾಮ ಬಾಹುನಾಧನು । ರ್ದಧಾರ ಶಾರ್ಙಸಂಜ್ಞಿತಂ ॥ ಉದಾರಬಾಹುಭೂಷಣ । ಶ್ಶುಭಾಂಗದಃ ಸುಕಂಕಣಃ ॥ ಮಹಾಂಗುಳೀಯಭೂಷಿತ । ಸ್ಸುರಕ್ತ ಸತ್ಕರಾಂಬುಜಃ ॥೮೩॥**

ಅರ್ಥ.—ಸಃ=ಶ್ರೀರಾಮರು, ವಾಮಬಾಹುನಾ=ಎಡಗೈಯ್ಯಲ್ಲಿ, ಶಾರ್ಙಸಂಜ್ಞಿತಂ–ಶಾರ್ಙಧನುಸ್ಸನ್ನು, ದಧಾರ=ಧಾರಣಮಾಡಿದ್ದರು. ಉದಾರ=ಉತ್ಕೃಷ್ಟವಾದ ಬಾಹುಭೂಷಣ=ಬಾಜೋಬಂದಿಗಳುಳ್ಳವರಾಗಿದ್ದರು ಸುಕಂಕಣಃಶುಭಾಂಗದಃ–ಶುಭಕರಗಳಾದ ತೋಳು ಬಳೆಗಳೂ ಕಂಕಣಗಳುಳ್ಳವರೂ, ಮಹಾಂಗುಳೀಯಭೂಷಿತಃ = ಉತ್ಕೃಷ್ಟವಾದ ಉಂಗರಗಳಿಂದ ಅಲಂಕೃತರಾಗಿದ್ದರು ಮತ್ತು ಸುರಕ್ತಸತ್ಕರಾಂಬುಜಃ=ಅತ್ಯಂತ ತಾಮ್ರವರ್ಣವುಳ್ಳ ಅಂಗೈಗಳುಳ್ಳವರಾಗಿದ್ದರು.

**ಶ್ಲೋಕ ॥ ಅನರ್ಘ್ಯರತ್ನಮಾಲಯಾ । ವನಾಖ್ಯಯಾಚ ಮಾಲಯಾ ॥ ವಿಲಾಸಿ ವಿಸ್ತೃತೋರಸಾ । ಬಭಾರಚ ಶ್ರಿಯಂಪ್ರಭುಃ ॥೮೪॥**

ಅರ್ಥ.—ಅನರ್ಘ್ಯರತ್ನಮಾಲಯಾ = ಅಮೌಲ್ಯಗಳಾದ ರತ್ನಗಳ ಮಾಲಿಕೆಯಿಂದ, ವನಾಖ್ಯಯಾಚ=ವನಮಾಲಾ ವೈಜಯಂತೀಮಾಲೆಯಿಂದಲೂ ಸಹ, ವಿಲಾಸಿ=ಪ್ರಕಾಶಿಸುತ್ತಿರುವ, ವಿಸ್ತೃತೋರಸಾ = ವಿಸ್ತಾರವಾದ ಹೃದಯದಲ್ಲಿ, ಪ್ರಭುಃ=ಪ್ರಭುಗಳಾದ ಶ್ರೀರಾಮರು, ಶ್ರಿಯಂಚ=ಕಾಂತಿಯುಳ್ಳ ಲಕ್ಷ್ಮೀಯನ್ನು, ಬಭಾರ–ಧಾರಣಮಾಡಿದ್ದರು.

**ಶ್ಲೋಕ || ಸಭೂತಿವತ್ಸಭೂಷಣ | ಸ್ತನೂದರೇವಳಿತ್ರಯಿಾ ||
ಉದಾರಮಧ್ಯಭೂಷಣೋ | ಲಸತ್ತಡಿತ್ಪ್ರಭಾಂಬರಃ ||೮೫||**

ಅರ್ಥ.—ಸಃ=ಶ್ರೀರಾಮರು, ಭೂತಿವತ್ಸ=ಶ್ರೀವತ್ಸವೇ, ಭೂಷಣಃ=ಅಲಂಕಾರವಾಗಿವುಳ್ಳವರು, ತನೂದರೇ – ಸೂಕ್ಷ್ಮವಾದ ಉದರದಲ್ಲಿ, ವಳಿತ್ರಯಿಾ–ಮೂರು ರೇಖೆವುಳ್ಳವರು, ಉದಾರ=ಉತ್ಕೃಷ್ಟವಾದ, ಮಧ್ಯಭೂಷಣಃ=ಉಡುದಾರವುಳ್ಳವರು, ಉಲ್ಲಸತ್=ಪ್ರಕಾಶಿಸುತ್ತಿರುವ, ತಡಿತ್ಪ್ರಭಾ=ಮಿಂಚಿನ ಕಾಂತಿಯಂತೆ ಹೊಳೆಯುತ್ತಿರುವ, ಅಂಬರಃ=ಹೊದಿಯುವ ವಸ್ತ್ರವುಳ್ಳವರಾಗಿ ಪ್ರಕಾಶಿಸಿದರು.

**ಶ್ಲೋಕ || ಕರೀಂದ್ರ ಸತ್ಕರೋರುಯುಕ್ | ಸ್ಸುವೃತ್ತಜಾನುಮಂಡಲಃ || ಕ್ರಮಾಲ್ಪವೃತ್ತ ಜಂಘಕಃ | ಸುರಕ್ತಪಾದಪಲ್ಲವಃ ||೮೬||**

ಅರ್ಥ.—(ಪ್ರಭುಃ) ಕರೀಂದ್ರಸತ್ಕರೋರುಯುಕ್ = ಗಜೇಂದ್ರನ ತೊಂಡಲದಹಾಗೆ ಸಮೀಚೀನವಾದ ಕೊಡೆಗಳುಳ್ಳವರು, ಸುವೃತ್ತಜಾನುಮಂಡಲಃ = ಚೆನ್ನಾಗಿ ಗುಂಡಾಗಿಯೂ ಇರುವ ಮೊಣಕಾಲುಗಳುಳ್ಳವರು, ಕ್ರಮಾಲ್ಪವೃತ್ತ = ಕ್ರಮವಾಗಿ ಸ್ವಲ್ಪಸ್ವಲ್ಪ ಸಣ್ಣಗಾಗುವ ಗುಂಡಗಿರುವ, ಜಂಘಕಃ=ಮೀನಖಂಡಗಳಿಂದಲೂ, ಸುರಕ್ತಪಾದಪಲ್ಲವ=ಅತ್ಯಂತ ಕೆಂಪಗಿರುವಚಿಗುರಿನಹಾಗಿರುವ ಪಾದಗಳುಳ್ಳವರು.

**ಶ್ಲೋಕ || ಲಸದ್ಧರಿನ್ಮಣಿದ್ಯುತೀ | ರರಾಜ ರಾಘವೋಧಿಕಂ || ಅಸಂಖ್ಯ ಸತ್ಸುಖಾರ್ಣವಃ | ಸಮಸ್ತಶಕ್ತಿಸತ್ತನುಃ ||೮೭||**

ಅರ್ಥ.—ಸರಾಘವಃ=ಶ್ರೀರಾಮರು, ಅಸಂಖ್ಯಸತ್ಸುಖಾರ್ಣವಃ–ಗಣನಮಾಡಲಾಗದ ಶುದ್ಧವಾದ ಸುಖಗಳಲ್ಲಿ ಸಮುದ್ರಸಮಾನರಾದ, ಸಮಸ್ತಶಕ್ತಿಸತ್ತನುಃ=ಪ್ರಪಂಚದ ಸಮಸ್ತ ವಿಧವಾದ ಶಕ್ತಿಯಿಂದ ಕೂಡಿದ ಶರೀರವುಳ್ಳವರಾಗಿಯು, ಲಸದ್ಧರಿನ್ಮಣಿದ್ಯುತಿಃ = ಪ್ರಕಾಶಮಾನವಾದ ಇಂದ್ರನೀಲಮಣಿಯಂತೆ ಶರೀರಕಾಂತಿಯುಳ್ಳವರೂ ಆಗಿ, ಅಧಿಕಂ = ಅಧಿಕವಾಗಿ, ರರಾಜ=ಪ್ರಕಾಶಿಸಿದರು.

**ಶ್ಲೋಕ || ಜ್ಞಾನಂ ನೇತ್ರಾಬ್ಜಯುಗ್ಮಾನ್ಮುಖವರಕಮಲಾತ್ಸರ್ವ ವೇದಾರ್ಥಸಾರಾಂ | ಸ್ತನ್ವಾ ಬ್ರಹ್ಮಾಂಡಬಾಹ್ಯಾಂ ತರಮಧಿಕರುಚಾ ಭಾಸಯರ್ಭಾಸುರಾಸ್ಯಃ || ಸರ್ವಾಭೀಷ್ಟಾಭಯೇಚ ಸ್ವಕರವರಯುಗೇನಾರ್ಥಿನಾಮಾದಧಾನಃ | ಪ್ರಾಯಾದ್ದೇವಾಧಿದೇವಃ ಸ್ವಪದಮಭಿಮುಖಶ್ಚೋತ್ತರಾಶಾಂವಿಶೋಕಾಂ ||೮೮||**

ಅರ್ಥ.—ಅಧಿಕರುಚಾ-ಅತ್ಯಂತ ಕಾಂತಿಯುಳ್ಳ, ತನ್ವಾ = ಶರೀರ ದಿಂದ, ಬ್ರಹ್ಮಾಂಡಬಾಹ್ಯಾಂತರಂ – ಬ್ರಹ್ಮಾಂಡದ ಹೊರಗೂ ಒಳಗೂ, ಭಾಸಯನ್=ಪ್ರಕಾಶಪಡಿಸುತ್ತಾ, ಸ್ವಕರವರಯುಗೇನ=ತಮ್ಮ ಶ್ರೇಷ್ಠವಾದ ಎರಡು ಕೈಗಳಿಂದ, ಅರ್ಥಿನಾಂ-ಅಪೇಕ್ಷಿಸತಕ್ಕವರಿಗೆ, ಸರ್ವಾಭಿಷ್ಟ-ಸಮ ಸ್ತ ಮನೋರಥಗಳನ್ನೂ, ಅಭಯೇಚ=ಅಭಯುವನ್ನೂ, ಆದಧಾನಃ-ಕೊಡ ತಕ್ಕವರಾಗಿ, ವಿಶೋಕಾಂ-ಸಂಸಾರ ಬಂಧನಾದಿ ಶೋಕಗಳಿಂದ ರಹಿತ ವಾದ, ಉತ್ತರಾಶಾಂ=ಉತ್ತರದಿಕ್ಕನ್ನು ಹಿಡಿದು, ಪ್ರಾಯಾತ್-ಹೊರಟು ಹೋದರು.

ತಾತ್ಪರ್ಯ.—ಶ್ರೀರಾಮಪ್ರಭುಗಳು ಸ್ವಪದಸ್ಥಾನವಾದ ವೈಕುಂಠದ ಅಭಿಮುಖವಾಗಿ ಹೋಗುತ್ತಾ ತಮ್ಮ ನೇತ್ರಯುಗ್ಮಗಳಿಂದ ಭಕ್ತರಿಗೆ ಜ್ಞಾನ ವನ್ನುಂಟುಮಾಡುತ್ತಾ ತಮ್ಮ ಕಮಲದೋಪಾದಿಯಲ್ಲಿರುವ ಮುಖದಿಂದ ಸಮಸ್ತ ವೇದಗಳ ಅರ್ಥವಿಶೇಷಗಳನ್ನು ಹೇಳುತ್ತಾ (ವುಷ್ಟೀಕರಿಸುತ್ತಾ) ತಮ್ಮ ಅತ್ಯಂತ ಕಾಂತಿಯುಳ್ಳ ದೇಹಕಾಂತಿಯಿಂದಲ ಬ್ರಹ್ಮಾಂಡದ ಉ ದಕಾವರಣವೇ ಮೊದಲಾದ ನವಾವರಣಗಳನ್ನೂ, ಬ್ರಹ್ಮಾಂಡದ ಅಂತರದ ಲ್ಲಿರತಕ್ಕ ಪ್ರದೇಶಗಳನ್ನು ಪ್ರಕಾಶಪಡಿಸುತ್ತಾ, ತಮ್ಮ ಕರಕಮಲಯುಗ್ಮ ಗಳಿಂದ ಸಮಸ್ತವಾದ ಅಭೀಷ್ಟಗಳನ್ನೂ ಅಭಯವನ್ನೂ ಅಂದರೆ ಭಕ್ತರಿಗೆ ಯಾವ್ಯಾವದು ಇಷ್ಟವೋ ಅವುಗಳೆಲ್ಲವನ್ನೂ ಕೊಡುತ್ತಾ ಉತ್ತರದಿಕ್ಕನ್ನು ಹಿಡಿದು ಹೊರಟರು.

ಶ್ಲೋಕ ॥ ದಧ್ರೇಛತ್ರಂ ಹನೂಮಾನ್ । ಸ್ರವದಮೃತಮಯಂಪೂರ್ಣಚಂ ದ್ರಾಯುತಾಭಂ । ಸೀತಾಸ್ಯೆವಾಖಿಳಾಕ್ಷಾಂ ವಿಷಯಮುಪಗತಾ ಶ್ರೀ ರಿತಿಹ್ರೀರಥೈಕಾ ॥ ದ್ವೇಧಾಭೂತಾದುಧಾವ ವ್ಯಜನಮುಭಯತಃ ಪೂ ರ್ಣಚಂದ್ರಾಂಶುಗೌರಂ । ಪ್ರೋದ್ಯದ್ಭಾಸ್ವತ್ಪ್ರಭಾಭಾ ಸಕಲಗುಣತನು ರ್ಭೂಷಿತಾ ಭೂಷಣೈಃಸ್ವೈಃ ॥೮೯॥

ಅರ್ಥ.—ಹನೂಮಾನ್=ಹನುಮಂತರು, ಸ್ರವದಮೃತಮಯಂ=ಸ್ರ ವತ್=ದ್ರವಿಸುತ್ತ ಲಿರುವ, ಅಮೃತಮಯಂ=ಅಮೃತಮಯವಾದ, ಪೂ ರ್ಣಚಂದ್ರಾಯುತಾಭಂ=ಹತ್ತುಸಹಸ್ರ ಪೂರ್ಣಚಂದ್ರರ ಕಾಂತಿಯಹಾಗೆ ಪ್ರಕಾಶಿಸುತ್ತಿರುವ, ಛತ್ರಂ=ಶ್ವೇತಛತ್ರವನ್ನು, ದಧ್ರೇ=ಹಿಡಿದರು. ಪ್ರೋ

ದ್ಯದ್ಭಾಸ್ವತ್ಪ್ರಭಾಭಾ-ಚೆನ್ನಾಗಿ ಉದಯಿಸಿರುವ ಸೂರ್ಯ ಕಾಂತಿಯೋಪಾದಿಯಲ್ಲಿ ಕಾಂತಿಯುಳ್ಳ, ಸಕಲಗುಣತನುಃ=ಸಮಸ್ತ ಗುಣಯುಕ್ತವಾದ ಭಕ್ತಿ ಜ್ಞಾನಾದಿ ಗುಣಗಳೇ ಶರೀರವಾಗಿವುಳ್ಳ, ಸ್ತ್ರೈಃ=ಸ್ತ್ರೀಯರುಗಳಾದ, ಭೂಷಣೈಃ=ಭೂಷಣಗಳಿಂದ, ಭೂಷಿತಾ-ಅಲಂಕೃತಳಾದ, ಸ್ವೈವ - ಪೂರ್ವದಲ್ಲಿ ಲೋಕದೃಷ್ಟಿಗಳಿಗೆ ಅದೃಶ್ಯಳಾದ, ಏಕಶೀತಾ-ಒಬ್ಬಳೇ ಸಿತಾದೇವಿಯು, ಅಖಿಲಾಕ್ಷ್ಣಾಂ=ಸಮಸ್ತ ಜನಗಳ ದೃಷ್ಟಿಪಥಕ್ಕೆ, ಅಥ=ಸಕಕಾಲದಲ್ಲಿ, ಶ್ರೀರಿತಿ-ಶ್ರೀದೇವಿಯೆಂತಲೂ, ಹ್ರೀರಿತಿ=ಹ್ರೀದೇವಿಯೆಂತಲೂ, ದ್ವೇಧಾ=ಎರಡುಪ್ರಕಾರ, ಭೂತಾ=ರೂಪವುಳ್ಳವಳಾಗಿ, ಉಪಗತಾಸತೀ=ರೂಪದ್ವಯಗಳನ್ನು ಹೊಂದಿದವಳಾಗಿ, ಪೂರ್ಣಚಂದ್ರಾಂಶುಗೌರಂ=ಸಂಪೂರ್ಣಕಳಾಯುಕ್ತ ಚಂದ್ರನ ಕಿರಣಗಳೋಪಾದಿಯಲ್ಲಿ, ಬೆಳ್ಳಗಿರುವ, ವ್ಯಜನಂ=ಬೀಸಣಿಗೆಯನ್ನು, ಉಭಯತಃ-ಶ್ರೀರಾಮಪ್ರಭುಗಳ ಎಡಬಲ ಉಭಯ ಪಾರ್ಶ್ವಗಳಲ್ಲಿಯೂ, ದುಧಾವ=ಬೀಸಿದಳು.

ಶ್ಲೋಕ ॥ ಸಾಕ್ಷಾಚ್ಚಕ್ರತನುಸ್ತಥೈವಭರತಶ್ಚಕ್ರಂ ದಧದ್ದಕ್ಷಿಣೇ । ನಾಯಾತ್ಸವ್ಯತ ಏವಶಂಖವರಭೃಚ್ಛಂಖಾತ್ಮಕಃ ಶತ್ರುಹಾ ॥ ಅಗ್ರೇಬ್ರಹ್ಮಪುರೋಗಮಾಃಸುರಗಣಾ ವೇದಾಶ್ಚಸೋಂಕಾರಕಾಃ । ಪಶ್ಚಾತ್ಸರ್ವ ಜಗಜ್ಜಗಾಮ ರಘುಪಂ ಯಾಂತಂ ನಿಜಂಧಾಮತಂ ॥೯೦॥

ಅರ್ಥ.—ನಿಜಂಧಾಮ=ಸ್ವಂತಸ್ಥಾನವಾದ ವೈಕುಂಠವನ್ನು ಕುರಿತು, ಯಾಂತಂ=ಹೋಗುತ್ತಲಿರುವ, ತಂರಘುಪಂ-ರಘುಕುಲಪತಿಯಾದ ಶ್ರೀರಾಮಪ್ರಭುಗಳನ್ನು, ಅನು=ಅನುಸರಿಸಿ, ಚಕ್ರತನುಃ=ಚಕ್ರಾಭಿಮಾನಿಯಾದ ಭರತನು, ತಥೈವ-ಚಕ್ರಾಭಿಮಾನಿಯಾದ ದುರ್ಗಾದೇವಿಯೋಪಾದಿಯಲ್ಲಿ, ಸಾಕ್ಷಾತ್=ತಾನೇವೇ, ದಕ್ಷಿಣೇ=ಶ್ರೀರಾಮಪ್ರಭುಗಳ (ಬಲದಕಡೆ) ಚಕ್ರಂ=ಚಕ್ರಾಯುಧವನ್ನು, ದಧತ್=ಹಿಡಿದುಕೊಂಡು, ಆಯಾತ್ = ಹೊರಟನು. ಶಂಖಾತ್ಮಕಃ=ಶಂಖಾಭಿಮಾನಿಯಾದ, ಶತ್ರುಹಾ=ಶತ್ರುಘ್ನನು, ಶಂಖವರಭೃತ್‌ಸನ್=ಶ್ರೇಷ್ಠವಾದ ಶಂಖಾಯುಧವನ್ನು ಧಾರಣಮಾಡಿಕೊಂಡು, ಸತ್ಯತಯೇವ=ಎಡದಕಡೆ ನಡೆದನು, ಅಗ್ರೇ-ಶ್ರೀರಾಮಪ್ರಭುಗಳ ಮುಂಭಾಗದಲ್ಲಿ ಬ್ರಹ್ಮಪುರೋಗಮಾಃ=ಬ್ರಹ್ಮದೇವರೇ ಮೊದಲಾದ, ಸುರಗಣಾಃ=ದೇವತಾಸಮೂಹಗಳೂ, ಸೋಂಕಾರಕಾಃ=ಓಂಕಾರದಿಂದ ಸಹಿತಗಳಾದ, ವೇದಾ

ಶ್ಚ-ವೇದಗಳೂ, ( ವೇದಾಭಿಮಾನಿದೇವತೆಗಳೂ ಸಹ ) ಹೊರಟರು. ಪಶ್ಚಾತ್=ಶ್ರೀರಾಮಚಂದ್ರದೇವರಹಿಂಭಾಗದಲ್ಲಿ, ಸರ್ವಜಗತ್=ಅಣುರೇಣು ತೃಣಾದಿ ಪ್ರಪಂಚವು, ಜಗಾಮ=ಹೊರಟಿತು.

**ಶ್ಲೋಕ ॥ ತಸ್ಯ ಸೂರ್ಯಸುತ ಪೂರ್ವವಾನರಾ । ದಕ್ಷಿಣೇನ ಮನುಜಾಸ್ತು ಸವ್ಯತಃ ॥ ರಾಮಜನ್ಮಚರಿತಾನಿ ತಸ್ಯತೇ । ಕೀರ್ತಯಂತ ಉಚಥ್ಯೈರ್ದ್ರುತಂಯಯುಃ ॥೯೦॥**

ಅರ್ಥ.—ತಸ್ಯ=ಶ್ರೀರಾಮಚಂದ್ರದೇವರ, ದಕ್ಷಿಣೇನ-ಬಲಭಾಗದಲ್ಲಿ ರಾಮಜನ್ಮಚರಿತಾನಿ=ರಾಮಾವತಾರದ ಚರಿತ್ರೆಗಳನ್ನು, ಉಚಥ್ಯೈಃ=ಗಟ್ಟಿಯಾಗಿ, ಸ್ತುವಂತಃಸ್ಸಂತಃ = ಸ್ತೋತ್ರಮಾಡತಕ್ಕವರಾಗಿ, ಸೂರ್ಯಸುತಪೂರ್ವ=ಸೂರ್ಯ ಪುತ್ರ ಸುಗ್ರೀವನೇ ಮೊದಲಾದ, ವಾನರಾಃ = ವಾನರರು, ತಸ್ಯ = ಶ್ರೀರಾಮಚಂದ್ರದೇವರ ಸವ್ಯತಃ = ಎಡಗಡೆಯಲ್ಲಿ, ಮನುಜಾಸ್ತು-ಮನುಷ್ಯರು, ದ್ರುತಂ = ವೇಗವಾಗಿ, ಯಯುಃ=ಹೋದರು.

ತಾತ್ಪರ್ಯ.— ಶ್ರೀರಾಮಪ್ರಭುಗಳ ರಾಮಾವತಾರದ ಚರಿತ್ರೆಗಳನು ಗಟ್ಟಿಯಾಗಿ (ಉಚ್ಚಧ್ವನಿಯಿಂದ) ಸ್ತೋತ್ರಮಾಡುತ್ತಾ ಸೂರ್ಯಪುತ್ರನಾದ ಸುಗ್ರೀವ ಮೊದಲಾದ ವಾನರರೂ ಬಲಗಡೆಯಿಂದಲೂ, ಮನುಷ್ಯಾದಿಗಳು ಎಡಪಾರ್ಶ್ವದಲ್ಲಿಯೂ ಜಾಗ್ರತೆಯಾಗಿ ಪ್ರಭುಗಳನ್ನು ಅನುಸರಿಸಿ ಹೋದರು.

**ಶ್ಲೋಕ ॥ ಗಂಧರ್ವೈರ್ಗೀಯಮಾನೋ । ವಿಭುಧಮುನಿಗಣ್ಯೈರಬ್ಜಸಂಭೂತಿಪೂರ್ವೈ । ರ್ವೇದೋದಾರಾರ್ಥವಾಗ್ಭಿಃ ಪ್ರಣಹಿತಸುಮನಾಃ ಸರ್ವದಾಸ್ತೂಯಮಾನಃ ॥ ಸರ್ವೇರ್ಭೂತೈಶ್ಚ ಭಕ್ತ್ಯಾ ಸ್ವನಿಮಿಷನಯನೈಃ ಕೌತುಕಾದ್ವೀಕ್ಷಮಾಣಃ । ಪ್ರಾಯಾಚ್ಛೇಷಗರುತ್ಮದಾದಿಕ ನಿಜೈಃ ಸಂಸೇವಿತಂ ಸ್ವಂಪದಂ ॥೯೧॥**

ಅರ್ಥ.—ಶ್ರೀರಾಮಪ್ರಭುಗಳು ಗಂಧರ್ವೈರ್ಗೀಯಮಾನಃ-ಗಂಧರ್ವರು ಗಾನಮಾಡುತ್ತಿರಲು, ವೇದೋದಾರಾರ್ಥವಾಗ್ಭಿಃ=ವೇದಗಳ ಉತ್ಕೃಷ್ಟಾರ್ಥವೇ ವಾಕ್ಯವುಳ್ಳ, ಅಬ್ಜಸಂಭೂತಿಪೂರ್ವೈಃ=ಕಮಲೋದ್ಭವರಾದ ಬ್ರಹ್ಮದೇವರೇ ಮೊದಲಾದ, ವಿಭುಧಮುನಿಗಣ್ಯೈಃ-ದೇವತೆಗಳೂ ಋಷಿಗಳೂ,

ಇವರ ಸಮೂಹದಿಂದ, ಸರ್ವದಾ-ಸದಾಕಾಲದಲ್ಲಿಯೂ, ಸ್ತೂಯಮಾನಃ=ಸ್ತೋತ್ರಮಾಡಿಸಿಕೊಳ್ಳುತ್ತಾ, ಪ್ರಣಹಿತಸುಮನಾಃ=ಪುಷ್ಪವೃಷ್ಟಿಮಾಡಿಸಿಕೊಂಡವರಾಗಿ, ಸರ್ವೈರ್ಭೂತೈಃ=ಸಮಸ್ತ ಪ್ರಾಣಿಗಳಿಂದಲೂ, ಸುಭಕ್ತ್ಯಾ=ಅತ್ಯಂತ ಭಕ್ತಿಯಿಂದ, ಅನಿಮಿಷನಯನೈಃ = ರೆಪ್ಪೆಗಳು ಮುಚ್ಚದಿರುವ ನೇತ್ರಗಳಿಂದ, ಕೌತುಕಾತ್=ಉತ್ಸಾಹದಿಂದ, ವೀಕ್ಷ್ಯಮಾಣಃಸನ್-ನೋಡಲ್ಪಟ್ಟವರಾಗಿ, ಶೇಷಗರುತ್ಮಾದಿಕೈಃ ಜ್ಯೈಃ= ಶೇಷದೇವರು, ಗರುಡದೇವರು ಮೊದಲಾದ ಸ್ವಕೀಯರಿಂದ, ಸಂಸೇವಿತಂ- ಚೆನ್ನಾಗಿ ಸೇವಿಸುತ್ತಿರುವ, ಸ್ವಂಪದಂ=ಸ್ವಕೀಯವಾದ ವೈಕುಂಠಸ್ಥಾನವನ್ನು ಕುರಿತು, ಪ್ರಾಯಾತ್=ಹೊರಟುಹೋದರು.

ತಾತ್ಪರ್ಯ.—ಗಂಧರ್ವರು ಗಾನಮಾಡುತ್ತಿರಲು, ಬ್ರಹ್ಮದೇವರೇ ಮೊದಲಾದ ಸಮಸ್ತ ದೇವತೆಗಳು ಋಷಿಗಳು ಸರ್ವ ವೇದಾರ್ಥ ವಿಶೇಷ ವಾಕ್ಯಗಳಿಂದ ಸರ್ವದಾ ಸ್ತೋತ್ರಮಾಡುತ್ತಿರಲಾಗಿ, ದೇವತಾ ಸ್ತ್ರೀಯರು ಪುಷ್ಪವೃಷ್ಟಿಮಾಡುತ್ತಿರಲಾಗಿ ರೆಪ್ಪೆಗೆ ರೆಪ್ಪೆಹಾಕದೇ ಇರುವ ನೇತ್ರಗಳಿಂದ ಸಮಸ್ತ ಭೂತಪ್ರಾಣಿಗಳೂ ಅತಿ ಭಕ್ತಿ ಮತ್ತು ಉತ್ಸಾಹಗಳಿಂದ ನೋಡುತ್ತಿರಲು ಶೇಷ ಗರುಡ ಋದ್ರಾದಿಗಳಿಂದ ಸೇವಿತವಾದ ತಮ್ಮ ಸ್ವಕೀಯ ವೈಕುಂಠಪದವಿಯನ್ನು ಕುರಿತು ವೈಭವದಿಂದ ಶ್ರೀರಾಮಪ್ರಭುಗಳು ಹೊರಟರು.

**ಶ್ಲೋಕ ॥ ಬ್ರಹ್ಮರುದ್ರಗರುಡೈಃ ಸಶೇಷಕೈಃ । ಪ್ರೋಚ್ಯಮಾನ ಸುಗುಣೋರುವಿಸ್ತರಃ ॥ ಆರುರೋಹ ವಿಭುರಂಬರಂ ಶನೈ । ಸ್ತೇಚ ದಿವ್ಯವಪುಷೋಭವಂಸ್ತದಾ ॥೯೩॥**

ಅರ್ಥ.—ವಿಭುಃ=ಶ್ರೀರಾಮಪ್ರಭುಗಳು, ( ಸಶೇಷಕೈಃ=ಶೇಷದೇವರು, ಕೈಃ-ದಕ್ಷಪ್ರಜಾಪತಿ ಈ ಉಭಯತ್ರರಿಂದ ಸಹಿತರಾದ ) ಬ್ರಹ್ಮಋುದ್ರಗರುಡೈಃ=ಬ್ರಹ್ಮ, ಋುದ್ರ, ಗರುಡ ಮೊದಲಾದ ದೇವತೆಗಳಿಂದ, ಪ್ರೋಚ್ಯಮಾನ=ಸ್ತುತಿಸಲ್ಪಡುವ, ಸುಗುಣ=ಸದ್ಗುಣಗಳ, ಉರುವಿಸ್ತರಃ ಸನ್-ಅತ್ಯಂತ ವಿಸ್ತಾರವುಳ್ಳವರಾಗಿ, ಅಂಬರಂ = ಆಕಾಶಮಾರ್ಗವಾಗಿ, ಶನೈಃ=ಮೆಲ್ಲಮೆಲ್ಲಗೆ, ಆರುರೋಹ-ಆರೋಹಣಮಾಡಿದರು. ತದಾ=ಆ ಕಾಲದಲ್ಲಿ, ತೇಚ-ಅವರ ಸಂಗಡ ಬರುತ್ತಲಿದ್ದ ಸಕಲ ಪಕ್ಷಿ ಅಣುರೇಣು ತೃಣಕಾಷ್ಠಾದಿಗಳು, ದಿವ್ಯವಪುಷಃ=ಉತ್ತಮವಾದ ಶರೀರವುಳ್ಳವರಾದರು

**ಶ್ಲೋಕ || ಅಥಬ್ರಹ್ಮಾ ಹರಿಂಸ್ತುತ್ವಾ | ಜಗಾದೇವಂವಚೋವಿಭುಂ || ತ್ವದಾಜ್ಞಯಾ ಮಯಾದತ್ತಂ | ಸ್ಥಾನಂ ದಶರಥಸ್ಯಹಿ ||೯೪||**

ಅರ್ಥ.— ಅಥ=ಅನಂತರ, ಬ್ರಹ್ಮಾ=ಬ್ರಹ್ಮದೇವರು, ಹರಿಂ=ಶ್ರೀಹರಿಯನ್ನು, ಸ್ತುತ್ವಾ=ಸ್ತುತಿಸಿ, ವಿಭುಂಪ್ರತಿ=ಶ್ರೀರಾಮಚಂದ್ರದೇವರನ್ನು ಕುರಿತು, ಇದಂವಚನಂ-ಈ ಪ್ರಕಾರ, ವಚಃ=ವರದಿಯನ್ನು, ಜಗಾದ=ಹೇಳಿದರು. ಏನೆಂದರೆ, ಮಯಾ-ನನ್ನಿಂದ, ತ್ವದಾಜ್ಞಯಾ=ನಿಮ್ಮ ಆಜ್ಞಾಪ್ರಕಾರ, ದಶರಥಸ್ಯ=ದಶರಥರಾಯರಿಗೆ, ಸ್ಥಾನಂ=ಉತ್ತಮ ಸ್ಥಾನವು, ದತ್ತಂಹಿ=ಕೊಡಲ್ಪಟ್ಟಿತು.

**ಶ್ಲೋಕ || ಮಾತೄಣಾಂಚತಲ್ಲೋಕ | ಸ್ತ್ವಯುತಾಬ್ದಾದಿತೋಗ್ರತಃ || ಅನರ್ಹಾಯಾಸ್ತ್ವಯಾಜ್ಞಪ್ತೋ ಕೈಕೇಯ್ಯಾಅಪಿ ಸದ್ಗತಿಃ || ಸೂತ್ವಾತು ಭರತಂನ್ಯೈಷಾ | ಗಚ್ಛೇತನಿರಯಾನಿತಿ ||೯೫||**

ಅರ್ಥ.— ಮಾತೄಣಾಂಚ=ಕೌಸಲ್ಯಾದೇವಿಯರೇ ಮೊದಲಾದ ತಾಯಿಯರಿಗೂ, ತಲ್ಲೋಕಃ=ಆ ದಶರಥರಾಯನ ಸ್ಥಾನವಾದ ಸತ್ಯಲೋಕವು ಕೊಡಲ್ಪಟ್ಟದೆ. ಈ ಕಾಲಾರಭ್ಯ ಮುಂದೆ ಹತ್ತುಸಹಸ್ರ ವರ್ಷಗಳ ಕಾಲ ಈ ದಶರಥಾದಿಗಳಿಗೆ ಈ ಲೋಕವು, ಕೈಕೇಯಿಗೆ ಮಾತ್ರತ್ವಯಾ ಆಜ್ಞಪ್ತಃಸನ್=ನಿನ್ನಿಂದ ಅಜ್ಞಪ್ತನಾದವನಾಗಿ, ಏಷಾ-ಈಕೆಯು, ಭರತಂ ಭರತನನ್ನು, ಸೂತ್ವಾ-ಪಡದವಳಾದಕಾರಣ, ನಿರಯಾನ್=ನರಕಾದಿ ಪಾಪ ಲೋಕಗಳನ್ನು ಕುರಿತು, ನಗಚ್ಛೇದಿಸಿ - ಹೋಗಬಾರದೆಂಬ ಅಭಿಪ್ರಾಯದಿಂದ, ಅನರ್ಹಾಯಾಃಕೈಕೇಯ್ಯಾ ಅಪಿ-ಅರ್ಹಳಲ್ಲದ ಕೈಕೇಯಿಗೆ, ಸದ್ಗತಿಃ=ಸಮೀಚೀನವಾದ, ಗತಿಃ=ಸತ್ಯಲೋಕವಾಸವು, ದತ್ತಂ=ಕೊಡಲ್ಪಟ್ಟಿತು.

**ಶ್ಲೋಕ || ತಥಾಪಿಸಾ ಯದಾವೇಶಾ | ಚ್ಚಕಾರತ್ವಯ್ಯ ಶೋಭನಂ | ನಿಕೃತಿರ್ನಾಮಸಾಕ್ಷಿಪ್ತಾ | ಮಯಾತಮಸಿ ಶಾಶ್ವತೇ ||೯೬||**

ಅರ್ಥ.— ಸಾ-ಆ ಕೈಕೇಯಿದೇವಿಯು, ಯದಾವೇಶಾತ್=ಯಾವ ದೈತ್ಯಾವೇಶದ್ವೇಶೆಯಿಂದ, ತ್ವಯಿ-ನಿನ್ನ ವಿಷಯದಲ್ಲಿ, ಅಶೋಭನಂ-ಅಮಂಗಳವನ್ನು, ಚಕಾರ=ಮಾಡಿದಳೋ, ತಥಾಪಿ=ಅಂತಹ ಆವೇಶಕಳಾದ, ನಿಕೃ

ತೀ=ನಿಕೃತಿ ಎಂಬ ಹೆಸರುಳ್ಳ, ಅಸಾ-ದೈತ್ಯಳು ಮಾತ್ರ, ಮಯಾ-ನನ್ನಿಂದ, ಶಾಶ್ವತ=ನಿರಂತರವಾಗಿ, ತಮಸಿ-ಅಂಧಂತಮಸ್ಸಿನಲ್ಲಿ, ಕ್ಷಿಪ್ತಾ = ಹಾಕಲ್ಪಟ್ಟಳು.

ತಾತ್ಪರ್ಯ.—ಬ್ರಹ್ಮದೇವರು ಶ್ರೀರಾಮಪ್ರಭುಗಳನ್ನು ಕುರಿತು ಹೇಳುತ್ತಾರೆ.— ಕೌಸಲ್ಯಾದೇವಿಯರೇ ಮೊದಲಾದ ಮಾತೃಶ್ರೀಯರಿಗೂ ಸತ್ಯಲೋಕವನ್ನೇ ಈ ಕಾಲಾರಭ್ಯ ಹತ್ತು ಸಹಸ್ರವರ್ಷಗಳ ಪರ್ಯಂತರ ಕೊಟ್ಟಿದ್ದೇನೆ. ಈ ಸ್ಥಾನಕ್ಕೆ ಅನರ್ಹಳಾದ ಕೈಕೇಯಿಯು ಭರತನನ್ನು ಪಡೆದದ್ದರಿಂದ ತುಚ್ಛಿತ ಲೋಕಗಳಿಗೆ ಹೋಗಬಾರದೆಂಬ ಅಭಿಪ್ರಾಯದಿಂದ ಆಕೆಗೂ ನಿಮ್ಮ ಆಜ್ಞಾಪ್ರಕಾರ ಸದ್ಗತಿಯನ್ನೇ ಕೊಟ್ಟಿದ್ದೇನೆ. ಕೈಕೇಯಿದೇವಿಯು ದೈತ್ಯಾವೇಶಯುಕ್ತಳಾಗಿದ್ದುದರಿಂದ ನಿಮ್ಮ ರಾಜ್ಯಾಭಿಷೇಕ ವಿಷಯವಾಗಿ ವಿಘ್ನಮಾಡಿದಳು. ಆಕೆಯಲ್ಲಿ ಆವಿಷ್ಟಳಾದ ನಿಕೃತಿನಾಮಕ ದೈತ್ಯಳನ್ನ ಶಾಶ್ವತವಾದ ಅಂಧಂತಮಸ್ಸಿನಲ್ಲಿಟ್ಟಿರುತ್ತೇನೆ. ||೯೫|| ||೯೬||

**ಶ್ಲೋಕ || ಕೈಕೆಯೀತು ಚಲಾನ್ ಲೋಕಾನ್ । ಪ್ರಾಪ್ತಾನೈವಾಚಲಾನ್ ಕ್ವಚಿತ್ || ಪಶ್ಚಾದ್ಭಕ್ತಿಮತೀಯಸ್ಮಾತ್ತ್ವಯಿ ಸಾಯುಕ್ತಮೇವತತ್ || ||೯೭||**

ಅರ್ಥ.—ಕೈಕೇಯೀತು=ಕೈಕೇಯೀದೇವಿ ಮಾತ್ರ, ಚಲಾನ್‌ಲೋಕಾನ್-ಅಶಾಶ್ವತಗಳಾದ ಲೋಕಗಳನ್ನು, ಪ್ರಾಪ್ತಾ=ಪಡೆದಿರುತ್ತಾಳೆ. ಅಚಲಾನ್-ಕೌಸಲ್ಯಾ, ಸುಮಿತ್ರಾದೇವಿಯರ ಹಾಗೆ ಸ್ಥಿರವಾದ ಲೋಕಗಳನ್ನು, ನೈವಪ್ರಾಪ್ತಾ=ಹೊಂದಲಿಲ್ಲ. ಸಾ=ಆ ಕೈಕೇಯೀದೇವಿಯು, ಯಸ್ಮಾತ್=ಯಾವಕಾರಣದಿಂದ, ಪಶ್ಚಾತ್=ಅಸುರಾವೇಶ ಬಿಟ್ಟನಂತರ, ಭಕ್ತಿಮತೀ-ಭಕ್ತಿಯುಳ್ಳವಳಾಗುತ್ತಾಳೆಯೋ, ತತ್=ಆ ಕಾರಣದಿಂದ, ತ್ವಯ್ಯೇವ=ನಿನ್ನಲ್ಲಿಯೇ, (ನಿನ್ನ ಲೋಕದಲ್ಲಿಯೇ) ಸಾಯುಕ್ತಮೇವ-ನಿನ್ನ ಲೋಕವನ್ನೇ ಪಡೆಯುತ್ತಾಳೆ.

**ಶ್ಲೋಕ ||ಮಂಥರಾತು ತಮಸ್ಯಂಧೇ । ಪತಿತಾದುಷ್ಟಚಾರಿಣೀ || ಸೀತಾರ್ಥಂ ಯೇತ್ವನಿಂದಂಸ್ತ್ವಾಂ । ತೇ ಚಯಾತಾ ಮಹತ್ತಮಃ ||೯೮||**

ಅರ್ಥ.--ಮಂಥರಾತು=ಮಂಥರೆಯಾದರೋ (ಮಂಥರೆಯು ಕೈಕೇಯೀದೇವಿಯ ದಾಸಿ) ದುಷ್ಟಚಾರಿಣೀ=ದುಶ್ಚರಿತ್ರಳಾದ್ದರಿಂದ, ಅಂಧೇತ

ಮಸಿ=ಅಂಧಂತಮಸ್ಸೆಂಬ ತಮೋಲೋಕದಲ್ಲಿ, ಪತಿತಾ=ಹಾಕಲ್ಪಟ್ಟವು, (ಅಪಿ-ಮತ್ತು) ಯೇ=ಯಾವ ಅಸುರರು, ತ್ವಾಂ=ನಿನ್ನನ್ನು, ಸೀತಾರ್ಥಂ ಸೀತಾದೇವಿಯ ನಿಮಿತ್ತವಾಗಿ, ನಿಂದ್ಯ=ನಿಂದಾಮಾಡಿದರೋ, ತೇಚ-ಆ ಅಸುರರು, ಮಹತ್ತಮಃ=ಮಹತ್ತಮವಾದ ತಮೋಲೋಕವನ್ನು, ಯಾತಾಃ=ಐದಿದರು.

**ಶ್ಲೋಕ ॥ ಪ್ರಾಯಶೋ ರಾಕ್ಷಸಾಶ್ಚೈವ । ತ್ವಯಿಕೃಷ್ಣತ್ವಮಾಗತೇ ॥ ಶೇಷಾಯಾಸ್ಯಂತಿ ತಚ್ಛೇಷಾ । ಅಷ್ಟಾವಿಂಶೇ ಕಲೌಯುಗೇ ॥೯೯॥ ಗತೇಚತುಃ ಸಹಸ್ರಾಬ್ದೇ । ತಮೋಗಾ ಸ್ತ್ರಿಶತೋತ್ತರೇ ॥೧೦೦॥**

ಅರ್ಥ.—ರಾಕ್ಷಸಾಶ್ಚೈವ=ರಾಕ್ಷಸರುಗಳು, ಪ್ರಾಯಶಃ=ಪ್ರಾಯಶಃ=ಎಲ್ಲರೂ, ತಮೋಯಾತಾ=ಅಂಧಂತಮಸ್ಸನ್ನು ಹೊಂದಿದರು, ಶೇಷಾಃ =ಉಳಿದ ಅಸುರರು, ತ್ವಯಿ=ನೀನು, ಕೃಷ್ಣತ್ವಂ=ಕೃಷ್ಣಾವತಾರವನ್ನು, ಆಗತೇ-ಮಾಡಿದ ಕಾಲದಲ್ಲಿ, (ಯಾಸ್ಯಂತಿ - ಅಂಧಂತಮೋಲೋಕಕ್ಕೆ ಹೋಗುತ್ತಾರೆ) ತಚ್ಛೇಷಾಃ=ಆಗಲೂ ಬಾಕಿ ಉಳಿದ ಅಸುರರು, ಅಷ್ಟಾವಿಂಶೇ-ಇಪ್ಪತ್ತೆಂಟನೆಯ, ಕಲೌಯುಗೇ=ಕಲಿಯುಗದಲ್ಲಿ, ತ್ರಿಶತೋತ್ತರೇ=ಮೂರುನೂರು ಉತ್ತರವಾಗಿವುಳ್ಳ, ಚತುಃಸಹಸ್ರಾಬ್ದೇ=ನಾಲ್ಕು ಸಹಸ್ರ ವರ್ಷಗಳು, ಗತೇಸತಿ-ಕಳೆಯುತ್ತಿರಲಾಗಿ, ಅಂದರೆ ೪೩೦೦ ವರ್ಷಗಳು ಕಳೆದನಂತರ, ತಮೋಗಾಃ - (ಭವಂತಿ) ಅಂಧಂತಮಸ್ಸನ್ನು ಹೊಂದುತ್ತಾರೆ.

ತಾತ್ಪರ್ಯ.—ಬ್ರಹ್ಮದೇವರು ಶ್ರೀರಾಮಪ್ರಭುಗಳನ್ನು ಕುರಿತು ಹೇಳುತ್ತಾರೆ. ಹೇ ಪ್ರಭೂ! ಪ್ರಾಯಶಃ ಸುರಾಣಕಾದಿ ಬಹುಮಂದಿ ಅಸುರರು ಅಂಧಂತಮಸ್ಸಿಗೆ ಹೊರಟುಹೋದರು. ಬಾಕಿ ಉಳದಿರುವ ಅಸುರರು ನೀನು ಕೃಷ್ಣಾವತಾರವನ್ನು ಮಾಡಿದಾಗ ಅಂಧಂತಮಃಸ್ಸಿಗೆ ಹೋಗುತ್ತಾರೆ. ಇನ್ನೂ ಕಳೆದುಳಿದ ಅಸುರರು ಮಹಾಯುಗಾಪೇಕ್ಷಯಾ ಇಪ್ಪತ್ತೆಂಟನೆಯ ಕಲಿಯುಗದಲ್ಲಿ ನಾಲ್ಕುಸಾವಿರ ಮುನ್ನೂರು ವರ್ಷಗಳು ಕಳೆದನಂತರ ವೈವಸ್ವತಮನ್ವಂತರದಲ್ಲಿ, ಸರ್ವದೈತ್ಯರೂ ಅಸುರರೂ ಮಹಾ ಅಂಧಂತಮೋಲೋಕವನ್ನು ಶಾಶ್ವತವಾಗಿ ಹೊಂದುತ್ತಾರೆ. ॥೯೯॥ ॥೧೦೦॥

**ಶ್ಲೋಕ || ಅಥ ಯೇ ತ್ವತ್ಪದಾಂಭೋಜ | ಮಕರಂದೈಕಲಿಪ್ಸವಃ || ತ್ವಯಾ ಸಹಾಗತಾಸ್ತೇಷಾಂ | ವಿಧೇಹಿಸ್ಥಾನಮುತ್ತಮಂ ||೧೦೧||**

ಅರ್ಥ.—ಅಥ=ಪ್ರಕೃತದಲ್ಲಿ, ಯೇ=ಯಾರ್ಯಾರು, ತ್ವತ್ಪದಾಂಭೋಜ=ನಿನ್ನ ಪಾದಕಮಲಗಳ, ಮಕರಂದ-ಸ್ವಾದು ರಸವನ್ನು, ಏಕ=ಮುಖ್ಯವಾದದ್ದನ್ನಾಗಿ, ಲಿಪ್ಸವಃಸಂತಃ=ಅಪೇಕ್ಷಿಸುವರಾಗಿ, ತ್ವಯಾಸಹ=ನಿನ್ನ ಸಂಗಡ, ಆಗತಾಃ=ಬಂದಿರುತ್ತಾರೆಯೋ, ತೇಷಾಂ=ಆ ತೃಣ, ಖಗ, ಮೃಗಾದಿಚೇತನಾಚೇತನಾಖ್ಯ ಜೀವರಿಗೆ, ಉತ್ತಮ.ಂಸ್ಥಾನಂ-ಉತ್ತಮಸ್ಥಾನವನ್ನು ವಿಧೇಹಿ=ತಾವೇ ಕೊಡಬೇಕೆಂದು ಪ್ರಾರ್ಥಿಸಿದರು.

**ಶ್ಲೋಕ || ಅಹಂಭವಃ ಸುರೇಶಾದ್ಯಾಃ | ಕಿಂಕರಾಸ್ತವೇಶ್ವರ || ಯಚ್ಚಕಾರ್ಯಮಿಹಾಸ್ಮಾಭಿ | ಸ್ತದಪ್ಯಾಜ್ಞಾಪಯಾಶುನಃ ||೧೦೨||**

ಅರ್ಥ.—(ಬ್ರಹ್ಮದೇವರು ಶ್ರೀರಾಮರನ್ನು ಕುರಿತು,) ಹೇ ಈಶ=ಎಲೌ ಸ್ವಾಮಿಯೇ, ಅಹಂ = ನಾನು, ಭವಃ-ರುದ್ರದೇವರು, ಸುರೇಶ=ಇಂದ್ರ, ಆದ್ಯಾಃ-ಮೊದಲಾದವರು, ತವ=ನಿನಗೆ, ಕಿಂಕರಾಸ್ತ-ಭೃತ್ಯರು; ಇಹ=ಈಗ, ಅಸ್ಮಾಭಿಃ=ನಮ್ಮಗಳಿಂದ, ಯಚ್ಚಕಾರ್ಯಮಸ್ತಿ - ಏನು ಕಾರ್ಯವಾಗಬೇಕೋ, ತದಪಿ=ಅದನ್ನು ಕೂಡ, ನಃ=ನಮ್ಮಗಳಿಗೆ, ಆಶು=ಶೀಘ್ರವಾಗಿ, ಆಜ್ಞಾಪಯ-ಆಜ್ಞಾಪಿಸರಿ ಎಂದು ಪ್ರಾರ್ಥಿಸಿದರು.

**ಶ್ಲೋಕ || ಇತ್ಯುದೀರಿತಮಾಕರ್ಣ್ಯ | ಶತಾನಂದೇನರಾಘವಃ || ಜಗಾದಭಾವಗಂಭೀರಂ | ಸುಸ್ಮಿತಾಧರಪಲ್ಲವಃ ||೧೦೩||**

ಅರ್ಥ.—ರಾಘವಃ=ರಘುಕುಲೋತ್ಪನ್ನರಾದ ಶ್ರೀರಾಮಚಂದ್ರದೇವರು, ಶತಾನಂದೇನ-ಬ್ರಹ್ಮದೇವರಿಂದ, ಇತಿ=ಈ ಪ್ರಕಾರವಾಗಿ, ಉದೀರಿತಂ=ಹೇಳಲ್ಪಟ್ಟದ್ದನ್ನು, ಆಕರ್ಣ್ಯ-ಕೇಳಿ, ಸುಸ್ಮಿತ=ಅತ್ಯಂತ ಮಂದಹಾಸಯುಕ್ತವಾದ, ಅಧರಪಲ್ಲವಃ (ಸ್ಗ) - ಚಿಗುರಿನಹಾಗಿರುವ ತುಟಿವುಳ್ಳವರಾಗಿ, ಭಾವಗಂಭೀರಂ-ಅಭಿಪ್ರಾಯಗಳಿಂದ ಗಂಭೀರವಾದ, ವಾಕ್ಯಂ=ವಚನವನ್ನು, ಜಗಾದ=ಹೇಳಿದರು.

**ಶ್ಲೋಕ || ಜಗದ್ಗುರು ತ್ವಮಾದಿಷ್ಟಂ | ಮಯಾತೇಕಮಲೋದ್ಭವ || ಗುರ್ವಾದೇಶಾನುಸಾರೇಣ | ಮಯಾದಿಷ್ಟಾಚ ಸದ್ಗತಿಃ ||೧೦೪||**

ಅರ್ಥ.—ಹೇ ! ಕಮಲೋದ್ಭವ=ಎಲೋ ಬ್ರಹ್ಮನೇ, ತೇ=ನಿನಗೆ, ಮಯಾ=ನನ್ನಿಂದ, ಜಗದ್ಗುರುತ್ವಂ=ಪಿಶಿಷ್ಟ ಜಗದ್ಗುರು ಪದವಿಯು, ಆದಿಷ್ಟಂ–ಕೊಡಲ್ಪಟ್ಟಿದೆ. ಗುರ್ವಾದೇಶಾನುಸಾರೇಣ=ಗುರುಪ್ರಸಾದವನ್ನನುಸರಿಸಿ, ಸದ್ಗತಿಶ್ಚ=ಸದ್ಗತಿಯೂ, ಮಯಾ=ನನ್ನಿಂದ, ಆದಿಷ್ಟಾ=ಆಜ್ಞಾಪಿಸಲ್ಪಟ್ಟಿದೆ.

ತಾತ್ಪರ್ಯ.—ಹೇ ಕಮಲೋದ್ಭವನೇ ನಾನು ನಿನಗೆ ಸಕಲ ಲೋಕಗಳಿಗೂ ಗುರುತ್ವವನ್ನು ಕೊಟ್ಟಿದ್ದೇನೆ. ಗುರುಪ್ರಸಾದಾನುಸಾರ ಸದ್ಗತಿಗಳನ್ನು ಕೊಡುವದಕ್ಕೂ ನಿನಗೆ ಅನುಜ್ಞಾ ಕೊಟ್ಟಿದ್ದೇನೆಂದು ಶ್ರೀರಾಮಪ್ರಭುಗಳು ಬ್ರಹ್ಮದೇವರಿಗೆ ಹೇಳಿದರು.

**ಶ್ಲೋಕ ॥ ಅತಸ್ತ್ವಯಾ ಪ್ರದೇಯಾಹಿ । ಲೋಕ ಏಷಾಂಮದಾಜ್ಞಯಾ॥**
**ಹೃದಿಸ್ಥಿತಂಚಜಾನಾಸಿ । ತ್ವಮ್ಮೈವೇಕಃ ಸದಾಮಮ ॥೧೦೫॥**

ಅರ್ಥ.—ಅತಃ=ನನ್ನ ಆಜ್ಞಾಪ್ರಕಾರ, ತ್ವಯಾ – ನಿನ್ನಿಂದ, ಏಷಾಂ ಲೋಕಃ – ಯಾರುಯಾರಿಗೆ ಯಾವಯಾವ ಲೋಕವೋ ಆ ಲೋಕವು, ಮದಾಜ್ಞಯಾ – ನನ್ನ ಆಜ್ಞೆಯಿಂದ, ಪ್ರದೇಯಾಹಿ=ಕೊಡಲ್ಪಡತಕ್ಕುದ್ದು ತ್ವಂ=ನೀನು, ಏಕಏವ–ಒಬ್ಬನೇ, ಸದಾ – ಸರ್ವಕಾಲದಲ್ಲಿಯೂ, ಮಮ – ನನ್ನ, ಹೃದಿಸ್ಥಿತಂಚ=ಮನಸ್ಸಿನಲ್ಲಿರುವುದನ್ನು, ಜಾನಾಸಿ–ತಿಳಿಯುತ್ತೀಯೆ.

ತಾತ್ಪರ್ಯ.—ಶ್ರೀರಾಮಪ್ರಭುಗಳು ಬ್ರಹ್ಮದೇವರನ್ನು ಕುರಿತು ನಾನು ನಿನಗೆ ಆಜ್ಞಾ ಕೊಟ್ಟಿರುವದರಿಂದ, ಯಾರ್ಯಾರು ಯಾವ್ಯಾವ ಲೋಕಕ್ಕೆ ಅರ್ಹರೋ ಆಯಾ ಲೋಕಗಳನ್ನು ಅವರಿಗೆ ನಿನ್ನಿಂದಲೇ ಕೊಡಲ್ಪಡತಕ್ಕದ್ದು. ನನ್ನ ಮನಸ್ಸಿನಲ್ಲಿರುವದನ್ನು ನೀನೊಬ್ಬನೇ ಸರ್ವದಾ ತಿಳಿದವನಾಗಿದ್ದೀಯೆ. ಎಂದು ಹೇಳಿದರು.

**ಶ್ಲೋಕ ॥ ಇತೀರಿತೋ ಹರೇರ್ಭಾವಂ । ವಿಜ್ಞಾನೀ ಕಂಜಸಂಭವಃ ॥ ಪಿಪೀಲಿಕಾತೃಣಾಂತಾನಾಂ । ದದೌಲೋಕಾನನುತ್ತಮಾನ್ ॥೧೦೬॥**

**ವೈಷ್ಣವಾನ್ ಸಂತತತ್ವಾಚ್ಚ । ನಾಮ್ನಾ ಸಾಂತಾನಿಕಾನ್ವಿಭುಃ ॥ ತೇ ಜರಾಮೃತಿ ಹೀನಾಶ್ಚ । ಸರ್ವದುಃಖ ವಿವರ್ಜಿತಾಃ ॥ ಸಂಸಾರಮುಕ್ತಾ ನ ವಸಂ । ಸ್ತತ್ರನಿತ್ಯಸುಖಾಧಿಕಾಃ ॥೧೦೭॥**

ಅರ್ಥ.—ಇತಿ=ಈ ಪ್ರಕಾರ, ಈರಿತಃ-ಶ್ರೀರಾಮಪ್ರಭುಗಳಿಂದ ಹೇಳಲ್ಪಟ್ಟ, ಕಂಜಸಂಭವಃ = ಕಮಲೋದ್ಭವರಾದ ಬ್ರಹ್ಮದೇವರು, ಹರೇರ್ಭಾವಂ=ಶ್ರೀರಾಮದೇವರ ಅಭಿಪ್ರಾಯವನ್ನು, ವಿಜ್ಞಾಯ-ತಿಳಿದವರಾಗಿ, ಪಿಪೀಲಿಕಾ=ಇರುವೆಗಳೇ ಮೊದಲುಮಾಡಿ, ತೃಣಾಂತಾನಾಂ=ತೃಣಾದಿಗಳೇ ಕೊನೆಯಾದ ಜೀವರಿಗೆ, ಅನುತ್ತಮಾನ್-ಉತ್ತಮಗಳಾದ, ವೈಷ್ಣವಾನ್-ವಿಷ್ಣುಸಂಬಂಧಗಳಾದ್ದರಿಂದ, ಸಂತತತ್ವಾತ್ – ನಿರಂತರಗಳಾದ್ದರಿಂದ, ಸಾಂತಾನಿಕಾನ್-ಸಾಂತಾನಿಕಾಖ್ಯ, ನಾಮ್ನಾ=ನಾಮಧೇಯದ ಲೋಕಗಳನ್ನು ದದೌ=ಕೊಟ್ಟರು. ತೇ-ಆ ಜೀವರುಗಳು ತತ್ರ – ಆ ಲೋಕಗಳಲ್ಲಿ, ಜರಾಮೃತಿಹೀನಾಃ=ವೃದ್ಧಾಪ್ಯ ಮರಣ ರಹಿತರಾಗಿ, ಸರ್ವದುಃಖವಿವರ್ಜಿತಾಃ=ಯಾವ ದುಃಖವು ಇಲ್ಲವವರಾಗಿ, ಸಂಸಾರಮುಕ್ತಾಃ-ಸಂಸಾರದಿಂದ ಮುಕ್ತರಾದವರಾಗಿ, ನಿತ್ಯಸುಖಾಧಿಕಾಶ್ಚ = ನಿರಂತರವಾದ ಸುಖದಿಂದ ಪೂರ್ಣರಾಗಿ, ನ್ಯವಸನ್=ವಾಸಮಾಡಿದರು.

ತಾತ್ಪರ್ಯ.—ಶ್ರೀಪರಮಾತ್ಮನ ಅಭಿಪ್ರಾಯಗಳನ್ನು ಅರಿತ ಬ್ರಹ್ಮದೇವರು ಶ್ರೀರಾಮಪ್ರಭುಗಳನ್ನು ಅನುಸರಿಸಿಹೋಗಿದ್ದ ಪಿಪೀಲಕಾದಿ ತೃಣಾಂತಗಳಾದ ಸಮಸ್ತ ಜೀವರಿಗೂ, ಸಂತತಗಳಾದ್ಧರಿಂದ ಸಾಂತಾನಿಕ ಎಂದು ಹೆಸರುಳ್ಳ ವೈಷ್ಣವ ಲೋಕಗಳನ್ನು ಕೊಟ್ಟರು. ಆ ಜೀವರುಗಳು ಆ ಲೋಕಗಳಲ್ಲಿ ಜರಾಮರಣರಹಿತರಾಗಿ ಸಮಸ್ತವಾದ ಸಂಸಾರಸಂಬಂಧವಾದ ದುಃಖಗಳಿಂದ ವರ್ಜಿತರಾಗಿ, ಜನನಮರಣರೂಪವಾದ ಸಂಸಾರದಿಂದ ಮುಕ್ತರಾಗಿ ಅತ್ಯಂತ ಸುಖವುಳ್ಳ ಸ್ವರೂಪಾನಂದದಿಂದ ಅಧಿಕ ಶ್ರೇಷ್ಠರಾಗಿ ವಾಸಮಾಡಿದರು. ||೧೦೬|| ||೧೦೭||

**ಶ್ಲೋಕ || ಯೇತುದೇವಾ ಇಹೋದ್ಭೂತಾಃ । ನೃವಾನರ ಶರೀರಿಣಃ || ತೇ ಸರ್ವೇಸ್ವಾಂಶಿತಾಮಾಪುಸ್ತನ್ಮೈಂದ ವಿವಿದಾವೃತೇ ||೧೦೮||**

ಅರ್ಥ.—ಯೇತುದೇವಾಃ=ಯಾವಯಾವ ದೇವತೆಗಳು, ಇಹ=ಈ ಭೂಲೋಕದಲ್ಲಿ, ನೃವಾನರಶರೀರಿಣಃಸಂತಃ=ಮನುಷ್ಯ, ಕಪಿಗಳ ಶರೀರವುಳ್ಳವರಾಗಿ, ಉದ್ಭೂತಾಃ-ಹುಟ್ಟಿದ್ದರೋ, ತೇಸರ್ವೇ=ಆ ಸರ್ವರೂ, ತತ್-ಪೂರ್ವಪ್ರಸಿದ್ಧರಾದ, ಮೈಂದವಿವಿದೌ=ಮೈಂದ, ಮತ್ತು ವಿವಿದ, ಎಂಬ ಇಬ್ಬರು ಹೊರತು, ಸ್ವಾಂಶಿತಾಂ=ತಮ್ಮ ತಮ್ಮ ಅಂಶಗಳನ್ನು(ಮೂಲರೂಪಗಳನ್ನು) ಆಪುಃ-ಹೊಂದಿದರು.

ತಾತ್ಪರ್ಯ.—ಯಾವ್ಯಾವ ದೇವತೆಗಳು ರಾಮಾವತಾರದಲ್ಲಿ, ಈ ಭೂಲೋಕದಲ್ಲಿ ವಾನರ, ಮನುಷ್ಯರೂಪದಿಂದ ಹುಟ್ಟಿದ್ದರೋ, ಆ ದೇವತೆಗಳು, ಮೈಂದ, ದ್ವಿವಿದ, ಈ ಇಬ್ಬರ ವಿನಹಾ, ಸಮಸ್ತರೂ ತಮ್ಮ ತಮ್ಮ ಅಂಶಗಳನ್ನು (ಮೂಲರೂಪಗಳನ್ನು ಹೊಂದಿದರು.)

**ಶ್ಲೋಕ || ಅಸುರಾವೇಶತಸ್ತೌ ತು | ನರಾಮಮನುಜಗ್ಮತುಃ || ಪೀತಾಮೃತೌ ಪುರಾಯಸ್ಮಾ | ಸ್ಮಮೃತುರ್ನಚತೌ ತದಾ ||೧೦೯||**

ಅರ್ಥ.—ತೌತು=ಆ ಮೈಂದ ದ್ವಿವಿದರು, ಅಸುರಾವೇಶತಃ=ಅಸುರಾವೇಶವುಳ್ಳವರಾದ್ದರಿಂದ, ರಾಮಂ=ಶ್ರೀರಾಮಪ್ರಭುಗಳನ್ನು ಅನುಸರಿಸಿ, ನಾನುಜಗ್ಮತುಃ=ಹೋಗಲಿಲ್ಲ. ತೌ=ಅವರುಗಳು, ಯಸ್ಮಾತ್ = ಯಾವ ಕಾರಣದಿಂದ, ಪುರಾ=ಪೂರ್ವದಲ್ಲಿ, ಪೀತಾಮೃತೌ=ಅಮೃತಪಾನಮಾಡಿದ್ದರೋ, ತಸ್ಮಾತ್=ಆ ಕಾರಣದಿಂದ, ತದಾ=ಆಗ, ನಮಮೃತಃ-ಮರಣ ಹೊಂದಲಿಲ್ಲ.

**ಶ್ಲೋಕ || ತಯೋಃಶ್ಚ ತಪಸಾ ತುಷ್ಟ | ಶ್ಚಕ್ರೇ ತಾವಜರಾಮರಾ || ಪುರಾಸ್ವಯಂ ಭೂಸ್ತೇನೋಭೌ | ದರ್ಪಾದಮೃತಮಂಥನೇ ||೧೧೦||**

ಅರ್ಥ.—ಸ್ವಯಂಭೂಃ=ಬ್ರಹ್ಮದೇವರು, ಅಮೃತಮಂಥನೇ=ಅಮೃತಮಥನಕಾಲದಲ್ಲಿ, ತಯೋಃ=ಆ ಮೈಂದ ದ್ವಿವಿದರ, ತಪಸಾಚ=ತಪಃಶ್ಚರ್ಯದಿಂದ, ತುಷ್ಟಃಸನ್=ಸಂತುಷ್ಟರಾದವರಾಗಿ, ತೌ=ಆ ಉಭಯತ್ರರನ್ನು ಅಜರಾಮರಾ=ಜರಾಮರಣವಿಲ್ಲದವರನ್ನಾಗಿ, ಚಕ್ರೇ-ಮಾಡಿದರು. ತೇನ-ಆ ಕಾರಣದಿಂದ, ಉಭೌ=ಈ ಉಭಯತ್ರರೂ, ದರ್ಪಾತ್=ಗರ್ವದಿಂದ, (ನಾನುಜಗ್ಮತುಃ-ರಾಮರನ್ನು ಅನುಸರಿಸಿ ಹೋಗಲಿಲ್ಲ.)

**ಶ್ಲೋಕ || ಪ್ರಸಹ್ಯಾಪಿಬತಾಂದೇವೈ | ರ್ದೇವಾಂಶತ್ವಾದುಪೇಕ್ಷಿತೌ || ಪೀತಾಮೃತೇಷು ದೇವೇಷು | ಯುಧ್ಯಮಾನೇಷು ದಾನವೈಃ || ತೈರ್ದತ್ತಮಾತ್ಮಹಸ್ತೇತು | ರಕ್ಷಾಯೈ ಪೀತಮಾಶುತತ್ ||೧೧೧||**

ಅರ್ಥ.—ಪೀತಾಮೃತೇಷು-ಅಮೃತಪಾನಮಾಡಿದ, ದೇವೇಷು=ದೇವತೆಗಳು, ದಾನವೈಃ=ಅಸುರರ ಸಂಗಡ, ಯುಧ್ಯಮಾನೇಷುಸತ್ಸು=ಯುದ್ಧಮಾಡುತ್ತಿರಲಾಗಿ, ರಕ್ಷಾಯೈ=ಸಂರಕ್ಷಣಾರ್ಥವಾಗಿ, ಆತ್ಮಹಸ್ತೇ=ತಮ್ಮ ಕೈಯ್ಯಲ್ಲಿ, ತೈಃಸ್ತು=ಆ ದೇವತೆಗಳಿಂದ, ದತ್ತಂ=ಕೊಡಲ್ಪಟ್ಟದ್ದು, ತತ್=ಆ ಅಮೃತವು, ಆಶು=ತಕ್ಷಣವೇ ಪ್ರಸಹ್ಯ=ಬಲಾತ್ಕಾರದಿಂದ ಪೀತಂ=

ಈ ವೈಂದವಿವಿದರಿಂದ ಕುಡಿಯಲ್ಪಟ್ಟಿತು. ಅಪಿಬತಾಂ=ಪಾನಮಾಡತ
ಕ್ಕವರನ್ನು ನೋಡಿ, ದೇವಾಂಶತ್ವಾತ್=ಅಶ್ವಿನೀದೇವತೆಗಳ ಅಂಶರಾದ್ದರಿಂದ
ದೇವೈಃ=ದೇವತೆಗಳಿಂದ, ಉಪೇಕ್ಷಿತೌ=ಉದಾಸೀನಮಾಡಲ್ಪಟ್ಟರು.

ತಾತ್ಪರ್ಯ.—ಈ ವಿವಿದ ವೈಂದರಿಗೆ ಅಮೃತವು ಹೇಗೆ ಪ್ರಾಪ್ತಿಯಾಯಿತೆಂದರೆ ಅವರ ಕಾರಣವನ್ನು ನಿರೂಪಣಮಾಡುತ್ತಾರೆ. ಹೇಗೆಂದರೆ.—ಅಮೃತಾರ್ಥವಾಗಿ ದೇವ ದಾನವರು ಕಲೆತು ಸಮುದ್ರಮಥನಮಾಡತಕ್ಕ ಕಾಲದಲ್ಲಿ ಅಮೃತಪಾನಮಾಡಿದ ದೇವತೆಗಳು ದಾನವರೊಡನೆ ಯುದ್ಧಮಾಡುತ್ತಿರಲಾಗಿ, ಆ ಅಮೃತವನ್ನು ರಕ್ಷಣಾರ್ಥವಾಗಿ ಅಶ್ವಿನೀದೇವತೆಗಳ ಅಂಶಭೂತರಾದ ಈ ವೈಂದ ವಿವಿದರ ವಶಕ್ಕೆ ಕೊಟ್ಟಿದ್ದರು. ಅವರು ಅತಿ ಶೀಘ್ರವಾಗಿ ಬಲಾತ್ಕಾರದಿಂದ ಆ ಅಮೃತವನ್ನು ಪಾನಮಾಡಿದರು. ಈ ರೀತಿ ಅಮೃತಪಾನಮಾಡಿರುವುದನ್ನು ದೇವತೆಗಳು ನೋಡಿ, ಇವರು ಅಶ್ವಿನೀದೇವತೆಗಳ ಅಂಶಭೂತರಾಗಿ ದೇವಾಂಶವುಳ್ಳವರಾದ್ದರಿಂದ ಉದಾಸೀನಮಾಡಿ ಸಂಹಾರಮಾಡದೆಬಿಟ್ಟರು.

**ಶ್ಲೋಕ ॥ ತಸ್ಮಾದ್ದೋಷಾದಾಪತುಸ್ತೌ । ಚಾಸುರಂ ಭಾವಮೂರ್ಜಿತಂ ॥೧೧೨॥**

ಅರ್ಥ.—ತಸ್ಮಾದ್ದೋಷಾತ್=ಬಲಾತ್ಕಾರದಿಂದ ಅಮೃತಪಾನಮಾಡಿದ ದೋಷದಿಂದ, ತೌ=ಆ ವೈಂದ ವಿವಿದರು, ಊರ್ಜಿತಂ=ಕ್ರೂರವಾದ, ಅಸುರಂಭಾವಂ=ಅಸುರ ಸ್ವಭಾವವನ್ನು, ಆಪತುಃ=ಹೊಂದಿದರು.

**ಶ್ಲೋಕ ॥ ಅಂಗದಃ ಕಾಲತಸ್ತ್ಯಕ್ತ್ವಾ । ದೇಹಮಾಪ ನಿಜಾಂತನುಂ ॥ ರಾಮಾಜ್ಞಯೈವ ಕುರ್ವಾಣೋ । ರಾಜ್ಯಂ ಕುಶಸಮನ್ವಿತಃ ॥೧೧೩॥**

ಅರ್ಥ.—ಅಂಗದಃ=ಅಂಗದನು, ರಾಮಾಜ್ಞಯೈವ = ಶ್ರೀರಾಮನ ಆಜ್ಞೆಯಿಂದಲೇ, ಕುಶಸಮನ್ವಿತಃ=ಕುಶನಿಂದ ಸಮೇತನಾಗಿ, ರಾಜ್ಯಂಕುರ್ವಾಣಃ=ರಾಜ್ಯವನ್ನು ಆಳುತ್ತಾ ಇದ್ದು, ಕಾಲತಃ=ಕಾಲಕ್ರಮದಿಂದ, ದೇಹಂತ್ಯಕ್ತ್ವಾ=ದೇಹವನ್ನು ಬಿಟ್ಟು, ನಿಜಾಂತನುಂ=ತನ್ನ ಮೂಲರೂಪವ ಚಂದ್ರಸ್ವರೂಪವನ್ನು, ಆಪ=ಹೊಂದಿದನು.

**ಶ್ಲೋಕ ॥ ವಿಭೀಷಣಶ್ಚ ಧರ್ಮಾತ್ಮಾ । ರಾಘವಾಜ್ಞಾ ಪುರಸ್ಕೃತಃ ॥ ... ಪತಿರ್ಧನೇಶಸ್ಯ । ಕಲ್ಪಮಾಪಾಂತ್ಸರಾಕ್ಷಸಾನ್ ॥೧೧೪॥**

ಅರ್ಥ.— ಧರ್ಮಾತ್ಮಾ=ಧರ್ಮಿಷ್ಠನಾದ, ವಿಭೀಷಣಶ್ಚ- ವಿಭೀಷಣನಾದರೋ, ರಾಘವಾಜ್ಞಾ=ಶ್ರೀರಾಮಚಂದ್ರದೇವರ ಆಜ್ಞೆಯನ್ನು, ಪುರಸ್ಕೃತಃಸನ್=ಪುರಸ್ಕಾರಮಾಡಿ, ಧನೇಶಸ್ಯ=ಕುಭೇರನ, ಸೇನಾಪತಿಃ=ಸೇನೆಗಳಿಗೆ ಅಧಿಪತಿಯು, ಆಪಾತ್=ಆಗಿ, ರಾಕ್ಷಸಾನ್=ರಾಕ್ಷಸರನ್ನು, ಕಲ್ಪಾಂತಂ- ಆ ಕಲ್ಪ ಪರ್ಯಂತರವಾಗಿ, ಅಪಾತ್ (ಸನ್) = ಸಂರಕ್ಷಣೆಮಾಡಿದನು.

**ಶ್ಲೋಕ ॥ ರಾಮಾಜ್ಞಯಾ ಜಾಂಬವಾಂಶ್ಚ । ನ್ಯವಸತ್ಪೃಥಿವೀತಲೇ ॥ ಉತ್ಪತ್ತ್ಯರ್ಥಂ ಜಾಂಬವತ್ಯಾ । ಸ್ತದರ್ಥಂ ಸುತಪಶ್ಚರನ್ ॥೧೧೫॥**

ಅರ್ಥ.— ಜಾಂಬವಾಂಶ್ಚ=ಜಾಂಬವಂತನಾದರೊ, ಜಾಂಬವತ್ಯಾಃ=ಜಾಂಬವತಿಯು, ಉತ್ಪತ್ತ್ಯರ್ಥಂ=ಹುಟ್ಟುವುದಕ್ಕೋಸ್ಕರ, ರಾಮಾಜ್ಞಯಾಚ=ಶ್ರೀರಾಮರ ಆಜ್ಞಾಪ್ರಕಾರ, ತದರ್ಥಂ- ಜಾಂಬವತಿಯ ಉತ್ಪತ್ತಿಗೋಸ್ಕರ, ಸುತಪಶ್ಚರನ್ (ಸನ್) = ಶ್ರೇಷ್ಠವಾದ ತಪಃಸನ್ನು ಆಚರಿಸುತ್ತ, ಪೃಥಿವೀತಲೇ=ಭೂಲೋಕದಲ್ಲಿಯೇ, ನ್ಯವಸತ್- ವಾಸಮಾಡಿದನು.

**ಶ್ಲೋಕ ॥ ಅಥೋರಘೂಣಾಂ ಪ್ರವರಃ ಸುರಾರ್ಚಿತಃ । ಸ್ವಯೈಕತನ್ವಾನ್ಯವಸತ್ಸುರಾಲಯೇ ॥ ದ್ವಿತೀಯಯಾ ಬ್ರಹ್ಮಸದಸ್ಯಧೀಶ್ವರ । ಶ್ತೇನಾರ್ಚಿತೋಥಾಪರಯಾ ನಿಜಾಲಯೇ ॥೧೧೬॥**

ಅರ್ಥ.— ಅಥ= ಅನಂತರ, ರಘೂಣಾಂಪ್ರವರಃ=ರಘುಕುಲಶ್ರೇಷ್ಟರಾದ ಶ್ರೀರಾಮಚಂದ್ರದೇವರು, ಸ್ವಯೈಕತನ್ವಾ=ಸ್ವಕೀಯವಾದ ಒಂದು ರೂಪದಿಂದ, ಸುರಾಲಯೇ-ಸ್ವರ್ಗಲೋಕದಲ್ಲಿ, ಸುರಾರ್ಚಿತಃಸನ್=ದೇವತೆಗಳಿಂದ ಪೂಜೆಗೊಂಡವರಾಗಿ, ನ್ಯವಸತ್-ವಾಸಮಾಡಿದರು- ದ್ವಿತೀಯಯಾ=ಎರಡನೆಯ ರೂಪದಿಂದ, ಬ್ರಹ್ಮಸದಸಿ=ಬ್ರಹ್ಮಲೋಕದಲ್ಲಿ, ತೇನಾರ್ಚಿತಃಸನ್-ಬ್ರಹ್ಮದೇವರಿಂದ ಪೂಜೆಗೊಳ್ಳುತ್ತಾ, ನ್ಯವಸತ್=ವಾಸಮಾಡಿದರು. ಅಥ=ಅನಂತರದಲ್ಲಿ, ಅಪರಯಾ = ಮೂರನೆಯ ರೂಪದಿಂದ, ನಿಜಾಲಯೇ=ಸ್ವಕೀಯವಾದ ವೈಕುಂಠಲೋಕದಲ್ಲಿ, ನ್ಯವಸತ್ = ವಾಸಮಾಡಿದರು.

**ಶ್ಲೋಕ ॥ ತೃತೀಯ ರೂಪೇಣ ನಿಜಂಪದಂಪ್ರಭುಂ । ವ್ರಜಂತಮುಚ್ಚೈರನುಗಮ್ಯ ದೇವತಾಃ ॥ ಅಗಮ್ಯ ಮರ್ಯಾದ ಮುಪೇತ್ಯಚಕ್ರಮಾ । ದ್ವಿಲೋಕಯಂತೋತಿ ವಿದೂರತೋಸ್ತುವನ್ ॥೧೧೭॥**

ಅರ್ಥ.— ತೃತೀಯರೂಪೇಣ-ಮೂರನೆಯ ರೂಪದಿಂದ, ನಿಜಂಪದಂ-ತಮ್ಮ ವೈಕುಂಠಲೋಕವನ್ನು ಕುರಿತು, ವ್ರಜಂತಂ=ಹೋಗುತ್ತಿರುವ, ಪ್ರಭುಂ-ಶ್ರೀರಾಮಪ್ರಭುಗಳನ್ನು, ಅನುಗಮ್ಯ=ಅನುಸರಿಸಿ, ದೇವತಾಃ=ದೇವತೆಗಳು, ಆಗಮ್ಯಮರ್ಯಾದಂ-ತಾವು ಯಾವಸ್ಥಲಪರ್ಯಂತ ಹೋಗಬಹುದೋ ಅಷ್ಟು ಪರ್ಯಂತಹೋಗಿ, ಕ್ರಮಾತ್=ಕ್ರಮಕ್ರಮವಾಗಿ ಅಲ್ಲಲ್ಲೇ, ಉಪೇತ್ಯಚ-ನಿಂತು, ಅತಿವಿದೂರತಃ=ಬಹಳದೂರದವರೆವಿಗೂ, ವಿಲೋಕಯಂತಃ (ಸಂತಃ) ನೋಡುತ್ತಾ. ಉಚ್ಚೈಃ-ಗಟ್ಟಿಯಾಗಿ, ಸ್ತುವಃ-ಸ್ತೋತ್ರಮಾಡಿದರು.

**ಶ್ಲೋಕ ॥ ಬ್ರಹ್ಮಾ ಮರುನ್ಮಾರುತ ಸೂನುರೀಶಃ । ಶೇಷೋ ಗರುತ್ಮಾನ್ ಹರಿಜಃ ಶಕ್ರಕಾದ್ಯಾಃ ॥ ಕ್ರಮಾದನುವ್ರಜ್ಯತು ರಾಘವಸ್ಯ । ಶಿರಸ್ಯಥಾಜ್ಞಾಂ ಪ್ರಣಿಧಾಯ ನಿರ್ಯಯುಃ ॥೧೧॥**

ಅರ್ಥ.— ಬ್ರಹ್ಮಾ=ಬ್ರಹ್ಮದೇವರು, ಮರುತ್ = ವಾಯುದೇವರು, ಮಾರುತಸೂನುಃ=ಹನುಮಂತದೇವರು, ಈಶಃ=ರುದ್ರದೇವರು, ಶೇಷಃ=ಶೇಷದೇವರು, ಗರುತ್ಮಾನ್=ಗರುಡದೇವರು, ಹರಿಜಃ=ಮನ್ಮಥ, ಶಕ್ರಕಾದ್ಯಾಃ=ಇಂದ್ರನೇ ಮೊದಲಾದ ದೇವತೆಗಳು, ಕ್ರಮಾತ್=ಕ್ರಮವಾಗಿ, ಅನುವ್ರಜ್ಯ=ಶ್ರೀರಾಮಪ್ರಭುಗಳನ್ನು ಅನುಸರಿಸಿಹೋಗಿ, ಅಥ - ಅನಂತರ, ರಾಘವಸ್ಯ=ಶ್ರೀರಾಮರ, ಆಜ್ಞಾಂ=ಅಪ್ಪಣೆಯನ್ನು, ಶಿರಸಿಪ್ರಣಿಧಾಯ=ಶಿರಸಾಧಾರಣಮಾಡಿ, ನಿರ್ಯಯುಃ=ಹಿಂದಕ್ಕೆ ಹೊರಟುಹೋದರು.

**ಶ್ಲೋಕ ॥ ಸ್ವಂಸ್ವಂಚಸರ್ವೇ ಸದನಂ ಸುರಾಯಯುಃ । ಪುರಂದರಾದ್ಯಾಶ್ಚ ವಿರಂಚ ಪೂರ್ವಕಾಃ ॥ ಮರುತ್ಸುತೋ ಥೋ ಬದರೀಮವಾಪ್ಯ । ನಾರಾಯಣಸ್ಯೈವ ಪದಂ ಶಿಷೇವೇ ॥೧೯॥**

ಅರ್ಥ.—ವಿರಂಚಪೂರ್ವಕಾಃ=ಬ್ರಹ್ಮದೇವರೇ ಮೊದಲಾದ, ಪುರಂದರಾದ್ಯಾಶ್ಚ-ಇಂದ್ರಾದಿಗಳು ಆದಿಯಾಗಿ, ಸರ್ವೇಸರಾಃ-ಸಮಸ್ತ ದೇವತೆಗಳೂ, ಸ್ವಂಸ್ವಂಸದನಂಚ - ತಮ್ಮ ತಮ್ಮ ಸ್ಥಾನಗಳನ್ನು ಕುರಿತು, ಯಯೌ-ಹೊರಟುಹೋದರು. ಅಥೋ-ಅನಂತರ, ಮರುತ್ಸುತಃ=ಶ್ರೀಹನುಮಂತದೇವರು, ಬದರೀಂ=ಬದರೀಕ್ಷೇತ್ರಕ್ಕೆ ಬಂದು, ನಾರಾಯಣಸ್ಯ=ಶ್ರೀವೇದವ್ಯಾಸದೇವರ, ಪದಂ-ಪಾದಕಮಲವನ್ನು, ಶಿಷೇವೇ = ಸೇವೆಮಾಡಿಕೊಂಡಿದ್ದರು.

**ಶ್ಲೋಕ ॥ ಸಮಸ್ತ ಶಾಸ್ತ್ರೋದ್ಧರಿತಂ ಹರೇರ್ವಚೋ । ಮುದಾತದಾ ಶ್ರೋತ್ರ ಪುಟೇನ ಸಂಭರ್ನ ॥ ವದಂಶ್ಚ ತತ್ತ್ವಂ ವಿಬುಧರ್ಷಭಾಣಾಂ । ಸದಾ ಮುನೀನಾಂಚ ಸುಖಂಹ್ಯುವಾಸ ॥೧೨೦॥**

ಅರ್ಥ.—ಮರುತ್ಸುತಃ-ಶ್ರೀಹನುಮಂತದೇವರು, ತದಾ-ಆ ಬದರಿಕಾಶ್ರಮದಲ್ಲಿ, ಹರೇಃ-ಶ್ರೀವೇದವ್ಯಾಸದೇವರ, ಸಮಸ್ತಶಾಸ್ತ್ರ=ಸಮಗ್ರ ಶಾಸ್ತ್ರಗಳಿಂದ, ಉದ್ಧರಿತ=ನಿರ್ಣೀತವಾದ ಶಾಸ್ತ್ರಾರ್ಥ ಪೂರ್ಣವಾದ, ವಚಃ=ವಾಕ್ಯಗಳನ್ನು, ಮುದಾ=ಸಂತೋಷದಿಂದ, ಶ್ರೋತ್ರಪುಟೇನ=ಕಿವಿಗಳಿಂದ, ಸಂಭರ್ನ=ಸಂತೋಷದಿಂದ ಶ್ರವಣಮಾಡಿ, ವಿಬುಧರ್ಷಭಾಣಾಂ-ದೇವತಾಶ್ರೇಷ್ಠರಿಗೂ, ಮುನೀನಾಂಚ=ಋಷಿಗಳಿಗೂ ಸಹ, ಸದಾ=ಸರ್ವಕಾಲದಲ್ಲಿಯೂ, ತತ್ತ್ವಂ-ಹರಿಸ್ವರೂಪವನ್ನು, ವದನ್ ಸನ್-ಉಪದೇಶಮಾಡುತ್ತಾ, ಸುಖಂ=ಸುಖವಾಗಿ, ಉವಾಸ=ವಾಸಮಾಡಿದರು.

**ಶ್ಲೋಕ ॥ ರಾಮಾಜ್ಞಯಾ ಕಿಂಪುರುಷೇಷುರಾಜ್ಯಂ । ಚಕಾರರೂಪೇಣ ತಥಾಪರೇಣ ॥ ರೂಪೈಸ್ತಥಾನ್ಯೈಶ್ಚ ಸಮಸ್ತ ಸದ್ಮ । ನ್ಯುವಾಸವಿಷ್ಣೋಃ ಸತತಂಯಥೇಷ್ಟಂ ॥೧೨೧॥**

ಅರ್ಥ.—ಮರುತ್ಸುತಃ=ಹನುಮಂತದೇವರು, ರಾಮಾಜ್ಞಯಾ-ಶ್ರೀರಾಮಚಂದ್ರದೇವರ ಆಜ್ಞೆಯಿಂದ, ಕಿಂಪುರುಷೇಷು=ಕಿಂಪುರುಷಖಂಡದಲ್ಲಿ ರಾಜ್ಯಂ=ರಾಷ್ಟ್ರಗಳನ್ನು, ಅಪರೇಣರೂಪೇಣ=ಮತ್ತೊಂದು ರೂಪದಿಂದ ಚಕಾರ=ಪರಿಪಾಲನೆಮಾಡಿದರು. ತಥಾ - ಅದರಂತೆಯೇ, ಅನ್ಯೈಃರೂಪೈಶ್ಚ=ಬೇರೆ ಹನುಮದ್ರೂಪಗಳಾದ, ವಿಷ್ಣೋಃ=ಶ್ರೀವಿಷ್ಣುಪರಮಾತ್ಮನ ಸಮಸ್ತಸದ್ಮನಿ=ಶ್ವೇತದ್ವೀಪ, ಅನಂತಾಸನ, ವೈಕುಂಠವೆಂಬ ಸಮಸ್ತ ವಿಷ್ಣುಮಂದಿರದಲ್ಲಿಯೂ, ಸತತಂ-ಸರ್ವದಾ, ಯಥೇಷ್ಟಂ = ಸ್ವೇಚ್ಛಾನುಸಾರವಾಗಿ, ಉವಾಸ-ವಾಸಮಾಡಿದರು.

**ಶ್ಲೋಕ ॥ ಇತ್ಥಂ ಸಗಾಯಂಛತಕೋಟಿ ವಿಸ್ತರಂ । ರಾಮಾಯಣಂ ಭಾರತ ಪಂಚರಾತ್ರಂ ॥ ವೇದಾಂಶ್ಚ ಸರ್ವಾನ್ಸಹಿತಬ್ರಹ್ಮಸೂತ್ರಾನ್ । ವ್ಯಾಚಕ್ಷಾಣೋ ನಿತ್ಯ ಸುಖೋದ್ಭರೋಭೂತ್ ॥೧೨೨॥**

ಅರ್ಥ.— ಇತ್ಥಂ=ಈ ಪ್ರಕಾರವಾಗಿ, ಸಃ=ಶ್ರೀಹನುಮಂತದೇವರು, ಶತಕೋಟಿವಿಸ್ತರಂ=ಶತಕೋಟಿ ಸಂಖ್ಯೆಯುಳ್ಳ ಶ್ಲೋಕಗಳಿಂದ ವಿಸ್ತಾರವಾದ, ರಾಮಾಯಣಂ=ವ್ಯಾಸರಿಂದ ಹೇಳಲ್ಪಟ್ಟ ಮೂಲರಾಮಾಯಣವನ್ನು, ಕೀರ್ತಯನ್=ಗಾಯನಮಾಡುತ್ತಾ, ಸರ್ವಾನ್‌ವೇದಾನ್—ಸಮಸ್ತವೇದಗಳನ್ನೂ, ಭಾರತಪಂಚರಾತ್ರಂ—ಭಾರತ, ಪಂಚರಾತ್ರ, ಸಹಿತ, ಬ್ರಹ್ಮಸೂತ್ರಾನ್=ಬ್ರಹ್ಮಸೂತ್ರಗಳಿಂದ ಸಹಿತನಾಗಿ, ವ್ಯಾಚಕ್ಷಾಣಸನ್=ವ್ಯಾಖ್ಯಾನಮಾಡುತ್ತಾ, ನಿತ್ಯ=ನಿರಂತರವಾಗಿ, ಸುಖೋದ್ಭರಃ = ಸುಖದಿಂದ ಪೂರ್ಣರು ಅಭೂತ್=ಆದರು.

**ಶ್ಲೋಕ || ರಾಮೋಽಪಿ ಸಾರ್ಧಂ ಪವನಾತ್ಮಜೇನ | ಸಸೀತಯಾ ಲಕ್ಷ್ಮಣಪೂರ್ವಕೈಶ್ಚ || ತಥಾಗರುತ್ಮತ್ಪ್ರಮುಖೈಶ್ಚ ಪಾರ್ಷದೈಃ | ಸಂಸೇವ್ಯಮಾನೋಽನ್ವವಸತ್ಪಯೋಽಬ್ಧೌ ||೧೨೩||**

ಅರ್ಥ.— ರಾಮೋಽಪಿ=ಶ್ರೀರಾಮರೂ ಸಹ, ಪವನಾತ್ಮಜೇನ=ಹನುಮಂತದೇವರಿಂದಲೂ, ಸಸೀತಯಾ—ಸೀತಾದೇವಿಯರಿಂದಲೂ, ಲಕ್ಷ್ಮಣಪೂರ್ವಕೈಃ=ಲಕ್ಷ್ಮಣನೇ ಮೊದಲಾಗಿವುಳ್ಳ, ತಥಾ=ಹಾಗೇವೇ, ಗರುತ್ಮತ್ಪ್ರಮುಖೈಶ್ಚ=ಗರುಡದೇವನೇ ಪ್ರಮುಖರಾಗಿವುಳ್ಳ, ಪಾರ್ಷದೈಃ—ಪರಿವಾರದೇವತೆಗಳಿಂದ, ಸಂಸೇವ್ಯಮಾನಃಸನ್=ಸೇವೆಗೊಳ್ಳುವರಾಗಿ, ಪಯೋಽಬ್ಧೌ =ಕ್ಷೀರಸಮುದ್ರದಲ್ಲಿ, ನ್ಯವಸತ್—ವಾಸಮಾಡಿದರು.

**ಶ್ಲೋಕ || ಕದಾಚಿದೀಶಃ ಸಕಲಾವತಾರಾ | ನೇಕಂ ವಿಧಾಯಾಹಿಪತೌ ಚ ಶೇತೇ || ಪೃಥುಕ್ಚ ಸಂವ್ಯೂಹ್ಯ ಕದಾಚಿದಿಚ್ಛಯಾ | ರೇಮೇರಮೇಶೋ ಮಿತಸದ್ಗುಣಾರ್ಣವಃ ||೧೨೪||**

ಅರ್ಥ.— ಅಮಿತಸದ್ಗುಣಾರ್ಣವಃ=ಅಪಾರ ಉತ್ತಮಗುಣ ಪರಿಪೂರ್ಣರಾದ, ರಮೇಶಃ=ರಮಾಪತಿಯಾದ ಶ್ರೀವಿಷ್ಣುಪರಮಾತ್ಮನು, ಕದಾಚಿತ್=ಒಂದುಕಾಲದಲ್ಲಿ, ಈಶಃ—ಜಗತ್ಪ್ರಭುವಾಗಿಯೂ, ಕದಾಚಿತ್=ಒಂದುಕಾಲದಲ್ಲಿ, ಸಕಲಾವತಾರಾನ್=ಸಮಸ್ತ ಅವತಾರಗಳನ್ನೂ, ಏಕಂ=ಒಂದೇರೂಪವನ್ನಾಗಿ, ವಿಧಾಯ=ಮಾಡಿಕೊಂಡು, ಅಹಿಪತೌ=ಶೇಷದೇವರ ಮೇಲೆ, ಶೇತೇ—ಮಲಗುತ್ತಾನೆ. ಕದಾಚಿತ್=ಒಂದುಕಾಲದಲ್ಲಿ, ಇಚ್ಛಯಾ—ತನ್ನ ಇಚ್ಛಾಪ್ರಕಾರ, ಪೃಥಕ್=ವಾಸುದೇವಾದ್ಯನಂತರೂಪಗಳಿಂದ

( ಪೃಥಕ್ಪೃಥಕ್ ) ಸಂಪ್ರೋಕ್ಷ್ಯ=ಬೇರೆಬೇರೆ ಗುಂಪುಗಳನ್ನಾಗಿ ಮಾಡಿಕೊಂಡು, ರೇಮೇ=ಕ್ರೀಡಿಸಿದನು.

ಶ್ಲೋಕ || ಇತ್ಯಶೇಷ ಪುರಾಣೇಭ್ಯಃ | ಪಂಚರಾತ್ರೇಭ್ಯ ಏವಚ ಭಾರತಾ
ಚ್ಚೈವ ವೇದೇಭ್ಯೋ | ಮಹಾರಾಮಾಯಣಾದಪಿ ||೧೨೫||
ಪರಸ್ಪರ ವಿರೋಧಸ್ಯ | ಹಾನಾನ್ನಿರ್ಣಯತತ್ವತಃ ||
ಯುಕ್ತ್ಯಾ ಬುದ್ಧಿಬಲಾಚ್ಚೈವ | ವಿಷ್ಣೋರೇವ ಪ್ರಸಾದತಃ ||೧೨೬||
ಬಹುಕಲ್ಪಾನುಸಾರೇಣ | ಮಯೇಯಂ ಸತ್ಕಥೋದಿತಾ ||
ನೈಕಗ್ರಂಥಾಶ್ರಯಾ ತಸ್ಮಾನ್ನಾಶಂಕ್ಯಾತ್ರ ವಿರುದ್ಧತಾ ||೧೨೭||

ಅರ್ಥ.—ಇತಿ = ಈ ಪೂರ್ವೋಕ್ತಪ್ರಕಾರ, ಅಶೇಷಪುರಾಣೇಭ್ಯಃ—ಸಮಸ್ತ ಪುರಾಣಗಳಿಂದಲೂ, ಪಂಚರಾತ್ರೇಭ್ಯಏವಚ=ಪಂಚರಾತ್ರಗಳಿಂದಲೂ, ಭಾರತಾಚ್ಚೈವ—ಭಾರತದಿಂದಲೂ, ವೇದೇಭ್ಯಶ್ಚೈವ=ವೇದಗಳಿಂದಲೂ, ಮಹಾರಾಮಾಯಣಾದಪಿ=ಮಹಾರಾಮಾಯಣದಿಂದಲೂ, ಪರಸ್ಪರವಿರೋಧಸ್ಯ=ಪರಸ್ಪರ ವಿರುದ್ಧಾರ್ಥಗಳನ್ನು, ಹಾನಾತ್ – ಪರಿಹಾರಮಾಡಿ, ಯುಕ್ತ್ಯಾ – ಅನುಮಾನಪ್ರಮಾಣಾದಿಗಳಿಂದಲೂ, ಬುದ್ಧಿಬಲಾಚ್ಚ=ಸ್ವಪ್ರಜ್ಞಾಬಲದಿಂದಲೂ, ವಿಷ್ಣೋರೇವ – ಶ್ರೀವಿಷ್ಣುಪರಮಾತ್ಮನ, ಪ್ರಸಾದತಏವ=ಅನುಗ್ರಹದಿಂದಲೂ, ಬಹುಕಲ್ಪಾನುಸಾರೇಣ = ಅನೇಕ ಕಲ್ಪಗಳನ್ನು ಅನುಸರಿಸಿ, ತತ್ವತಃ – ಯಥಾರ್ಥವಾದ ಅರ್ಥಗಳಿಂದ, ನಿರ್ಣಯ=ಇದೇ ಪ್ರಕಾರವೇ ಅರ್ಥವೆಂದು ನಿಶ್ಚಯಿಸಿ, ಮಯಾ – ನನ್ನಿಂದ, ಇಯಂ=ಈ ಪೂರ್ವೋಕ್ತವಾದ, ಸತ್ಕಥಾ—ವಿರೋಧಾದಿ ದೋಷರಹಿತವಾದ ಕಥಾನಿರೂಪಣವು, ಉದಿತಾ=ಹೇಳಲ್ಪಟ್ಟಿತು. ಯಸ್ಮಾತ್=ಯಾವ ಕಾರಣದಿಂದ, ಏಕಗ್ರಂಥಾಶ್ರಯಾತ್=ಒಂದೇ ಗ್ರಂಥವನ್ನು ಅನುಸರಿಸಿ, ನೋದಿತಾ=ಇದು ಹೇಳಲ್ಪಡಲಿಲ್ಲವೋ, ತಸ್ಮಾತ್=ಆ ಕಾರಣದಿಂದ, ಅತ್ರ=ಇದುವರೆಗೆ ಹೇಳಲ್ಪಟ್ಟ ಅರ್ಥಗಳ ವಿಷಯದಲ್ಲಿ ಮೂಲರಾಮಾಯಣಕ್ಕೆ ವಿರುದ್ಧವಾದವುಗಳು ಇವೆಯೆಂದು, ನಾಶಂಕ್ಯಾ=ಅನುಮಾನಪಡತಕ್ಕದ್ದಿಲ್ಲ. (ಸಂಶಯಪಡಬಾರದು)

ತಾತ್ಪರ್ಯ.—ಶ್ರೀಮದಾಚಾರ್ಯ ಸ್ವೋಕ್ತವಾದ ಈ ಗ್ರಂಥಕ್ಕೆ ಪ್ರಮಾಣಿಕತೆಯನ್ನೂ ಆವಶ್ಯಕತೆಯನ್ನೂ ಹೇಳುತ್ತಾರೆ. ಹೇಗೆಂದರೆ—ಪುರಾಣಗಳಲ್ಲಿ ವಿದ್ಯಮಾನಗಳಾದ ಪರಸ್ಪರ ವಿರೋಧಾರ್ಥಗಳು ಕಂಡುಬ

ರುತ್ತಿರುವದರಿಂದ, ಆ ವಿರೋಧಗಳ ಪರಿಹಾರಾರ್ಥವಾಗಿ ಅಂದರೆ ಸಮಸ್ತ ಪುರಾಣಗಳಿಂದಲೂ, ಪಂಚರಾತ್ರಗಳಿಂದಲೂ, ಭಾರತ, ವೇದಗಳು ಇವುಗಳ ಪರಸ್ಪರ ವಿರೋಧಪರಿಹಾರಕ್ಕಾಗಿ ಯುಕ್ತಿಯಿಂದಲೂ, ಬುದ್ಧಿಬಲದಿಂದಲೂ, ಶ್ರೀವಿಷ್ಣುಪರಮಾತ್ಮನ ಕೇವಲ ಪ್ರಸಾದದಿಂದಲೂ ಮಹಾಕಲ್ಪ, ಅವಾಂತರ ಕಲ್ಪಗಳ ಆನುಕೂಲ್ಯವನ್ನು ಅನುಸರಿಸಿ ನನ್ನಿಂದ ಈ ಪೂರ್ವೋಕ್ತವಾದ ದೋಷರಹಿತವಾದ ಕಥೆಯು "ಅಯಮೇವಾರ್ಥಃ" ಇದೇ ದೃಢವಾದ ಅರ್ಥವೆಂದು ನಿಶ್ಚಯ (ನಿರ್ಣಯ) ಮಾಡಲ್ಪಟ್ಟು ಹೇಳಲ್ಪಟ್ಟಿತು. ಇದು ಒಂದೇ ಗ್ರಂಥದ ಆಧಾರದಿಂದ ನಿರ್ಣಯಿಸಲ್ಪಟ್ಟಿದ್ದಲ್ಲ. ಅನೇಕ ಗ್ರಂಥಗಳನ್ನು ಅನುಸರಿಸಿ ಪೂರ್ವೋಕ್ತ ಸಮಸ್ತ ಶಾಸ್ತ್ರಾಧಾರದಿಂದ ನಿರ್ಣಯಿಸಿ ಹೇಳಿದ್ದರಿಂದಲೂ ಗ್ರಂಥದ ಕಥೆಯ ವಿಷಯದಲ್ಲಿ ವಿರುದ್ಧಾರ್ಥ ಶಂಕಾಮಾಡತಕ್ಕದ್ದಿಲ್ಲ ||೧೨೫|| ||೧೨೬|| ||೧೨೭||

**ಶ್ಲೋಕ || ಕ್ವಚಿನ್ಮೋಹಾಯಾಸುರಾಣಾಂ | ವ್ಯತ್ಯಾಸಃ ಪ್ರತಿಲೋಮತಾ ||**
**ಉಕ್ತಾ ಗ್ರಂಥೇಷು ತಸ್ಮಾತ್ತು | ನಿರ್ಣಯೋಽಯಂ ಕೃತೋ ಮಯಾ ||೧೨೮||**

ಅರ್ಥ.— ಕ್ವಚಿತ್-ಕೆಲವು, ಗ್ರಂಥೇಷು=ಗ್ರಂಥಗಳಲ್ಲಿ, ಅಸುರಾಣಾಂ=ದೈತ್ಯರ, ಮೋಹಾಯ=ಮೋಹನಾರ್ಥವಾಗಿ, ವ್ಯತ್ಯಾಸಃ=ಕಾಲವ್ಯತ್ಯಾಸ ಪುರುಷವ್ಯತ್ಯಾಸವೂ, ಪ್ರತಿಲೋಮತಾ=ಹೇಳಬೇಕಾದ **ಅರ್ಥ**ವನ್ನು ಬಿಟ್ಟು ಅನ್ಯಥಾರ್ಥವೂ, ಉಕ್ತಾ=ಹೇಳಲ್ಪಟ್ಟಿವೆ. ತಸ್ಮಾತ್=ಆದ್ದರಿಂದ, ಮಯಾ=ನನ್ನಿಂದ, ಅಯಂನಿರ್ಣಯಃ=ಈ ಪ್ರಕಾರವಾದ ನಿಶ್ಚಿತಾರ್ಥ ( ನಿರ್ಣಯ ) ವು, ಕೃತಂ-ಮಾಡಲ್ಪಟ್ಟಿತು.

ತಾತ್ಪರ್ಯ.— ಶ್ರೀಮದಾಚಾರ್ಯರು ಹೇಳುತ್ತಾರೆ.— ಭಾರತಾದಿ ಗ್ರಂಥಗಳಲ್ಲಿ, ಕೆಲವು ಸ್ಥಳಗಳಲ್ಲಿ ಅಸುರಮೋಹನಾರ್ಥವಾಗಿ ಕಾಲವ್ಯತ್ಯಾಸ ಪುರುಷ ವ್ಯತ್ಯಾಸ, ಯಥಾಸ್ಥಿತವಾದ ಅರ್ಥವನ್ನು ಬಿಟ್ಟು, ಅನ್ಯಥಾರ್ಥವನ್ನು ಹೇಳುವುದು ( ಪ್ರತಿಲೋಮತ್ವವೂ) ಹೇಳಲ್ಪಟ್ಟಿವೆ. ಆದುದರಿಂದ ನಾನು ಈ ನಿಶ್ಚಿತಾತ್ಮಕವಾದ ನಿರ್ಣಯವನ್ನು ಮಾಡಿರುತ್ತೇನೆ.

**ಶ್ಲೋಕ || ಏವಂಚ ವಕ್ಷ್ಯಮಾಣೇಷು | ನೈವಾಶಂಕ್ಯಾ ವಿರುದ್ಧತಾ |**
**ಸರ್ವಕಲ್ಪ ಸಮುತ್ಥಾಯಂ | ಪಾರಂಪರ್ಯಕ್ರಮಃ ಸದಾ ||೧೨೯||**

ಅರ್ಥ.—ಏವಂಚ=ಈ ವಕ್ಷ್ಯಮಾಣಪ್ರಕಾರ, ವಕ್ಷ್ಯಮಾಣೇಷು-ವೇದ ವ್ಯಾಸಾದ್ಯವತಾರಗಳಲ್ಲಿ ಹೇಳಲ್ಪಟ್ಟ ನಿರ್ಣಯಗಳಲ್ಲಿ, ಅಯಂ-ಈ ಸನ್ನಿಂದವಮಾಡಲ್ಪಟ್ಟ ನಿರ್ಣಯವು, ಸದಾ=ಸರ್ವ ಕಾಲದಲ್ಲಿಯೂ, ಪಾರಂಪರ್ಯ ಕ್ರಮಃ = ಸೃಷ್ಟ್ಯಾದಿ ಪಾರಂಪರಾಕ್ರಮವು, ಸರ್ವಕಲ್ಪಸಮಸ್ತ = ಸಾಧಾರಣ ಕಲ್ಪ ಬ್ರಹ್ಮಕಲ್ಪವೇ ಮೊದಲಾದ ಅವಾಂತರ ಕಲ್ಪ ಸಮ್ಮತವಾದದ್ದು, ತಸ್ಮಾತ್=ಆದುದರಿಂದ, ನಶಂಕ್ಯೈವ-ಸಂಶಯಪಡತಕ್ಕದ್ದಿಲ್ಲ.

ತಾತ್ಪರ್ಯ.—ಇನ್ನು ಮುಂದೆ ಹೇಳುವ ಪ್ರಮೇಯಗಳಲ್ಲಿಯೂ, ಹಿಂದೆ ಹೇಳಿದ ಪ್ರಕಾರವೇ ವಿರೋಧಶಂಕಾ ಮಾಡಬಾರದು. ಈ ಗ್ರಂಥದಲ್ಲಿ ಹೇಳಿದ ಸೃಷ್ಟಿ ಮೊದಲಾದವುಗಳ ಪರಂಪರಾಕ್ರಮವು ಯಾವಾಗಲೂ ಸಮಸ್ತ ಕಲ್ಪಗಳಿಗೂ ಸಮವಾದದ್ದು.

ಶ್ಲೋಕ || ಪುಂವ್ಯತ್ಯಾಸೇನ ಚೋಕ್ತಿಃಸ್ಯಾತ್ಪುರಾಣಾದಿಷು ಕುತ್ರಚಿತ್ |
ಕೃಷ್ಣಾಮಾಹಯಥಾ ಕೃಷ್ಣೋ | ಧನಂಜಯಶರೈರ್ಹತಾ ||೧೩೦||

ಅರ್ಥ.—ಪುರಾಣಾದಿಷು-ಪುರಾಣಗಳಲ್ಲಿ, ಕುತ್ರಚಿತ್-ಕೆಲವುಕಡೆ, ಪುಂವ್ಯತ್ಯಾಸೇನ=ಪುರುಷವ್ಯತ್ಯಾಸದಿಂದ, ಉಕ್ತಿಸ್ಯಾತ್ - ನಿರ್ಣಯಗಳು ಹೇಳಲ್ಪಟ್ಟವೆ. ಯಥಾ=ಹೇಗೆಂದರೆ.—ಕೃಷ್ಣಃ=ಶ್ರೀಕೃಷ್ಣನು, ಕೃಷ್ಣಾಂ ಪ್ರತಿ=ದ್ರೌಪದೀದೇವಿಯನ್ನು ಕುರಿತು, ಧನಂಜಯಶರೈರ್ಹತಾಃ=ಅರ್ಜುನನ ಬಾಣದಿಂದ ದುರ್ಯೋಧನಾದಿಗಳು ಸರ್ವರೂ ಹತರಾದರೆಂದು ಆಹ =ಹೇಳಲ್ಪಟ್ಟಿದೆ.

ತಾತ್ಪರ್ಯ.—ಪುರಾಣಾದಿಗಳಲ್ಲಿ ಕೆಲವು ಸ್ಥಳದಲ್ಲಿ ಪುರುಷವ್ಯತ್ಯಾಸದಿಂದ ನಿರ್ಣಯವ್ಯತ್ಯಾಸವಾಗಿರುತ್ತದೆ. ಹೇಗೆಂದರೆ ಶ್ರೀಕೃಷ್ಣನು ದ್ರೌಪದಿಯನ್ನು ಕುರಿತು ಸರ್ವಕುರುಸೈನ್ಯವೂ ಅರ್ಜುನನ ಬಾಣದಿಂದ ಹತರಾದರು ಎಂದು ಹೇಳಿದ್ದಾನೆ. ಆದರೆ ಅರ್ಜುನನು ಕ್ವಚಿತ್‌ಮಾತ್ರ ಸಂಹಾರಮಾಡಿದನು. ಬಾಕಿ ಸಮಸ್ತವನ್ನೂ ಭೀಮಸೇನನೇ ಸಂಹಾರ ಮಾಡಿದನು. ಹೀಗಿರುವಲ್ಲಿ ಅರ್ಜುನನ ಬಾಣದಿಂದ ಹತರಾದರೆಂದು ಹೇಳಿರುವುದೇ ಪುರುಷವ್ಯತ್ಯಾಸವು.

ಶ್ಲೋಕ || ಶತಂ ದುರ್ಯೋಧನಾದೀಂಸ್ತೇ | ದರ್ಶಯಿಷ್ಯ ಇತಿ ಪ್ರಭುಃ ||
ಭೀಮಸೇನ ಹತಾಸ್ತೇತು | ಜ್ಞಾಯಂತ ಬಹುವಾಕ್ಯತಃ ||೧೩೧||

ಅರ್ಥ.—ತೇ—ನಿನಗೆ, ಶತಂದುರ್ಯೋಧನಾದೀನ್—ದುರ್ಯೋಧನಾದಿ ಸರ್ವರನ್ನೂ, ದರ್ಶಯಿಷ್ಯೆ—ತೋರಿಸುತ್ತೇನೆ, ತೇತು=ಅವರುಗಳಾದರೋ ಭೀಮಸೇನನಿಂದ ಹತರಾದವರು, ಇತಿ=ಹೀಗೆಂದು, ಪ್ರಭುಃ=ಶ್ರೀಕೃಷ್ಣನು, ಕೃಷ್ಣಾಂಪ್ರತಿ – ದ್ರೌಪದಿಯನ್ನು ಕುರಿತು, ಆಹ=ಹೇಳಿದರು. ಇತಿ=ಈ ಪ್ರಕಾರವಾಗಿ, ಬಹುವಾಕ್ಯತಃ=ಬಹಳ ಗ್ರಂಥಗಳ ಉಕ್ತಿಯಿಂದ ಜ್ಞಾಯಂತೇ=ತಿಳಿಯುಬರುತ್ತದೆ.

ತಾತ್ಪರ್ಯ.—ಕೃಷ್ಣನು, ದ್ರೌಪದಿಯನ್ನು ಕುರಿತು, ಭೀಮಸೇನನಿಂದ ದುರ್ಯೋಧನಾದಿ ಅನೇಕರು ಹತರಾದರು. ಅವರುಗಳನ್ನು ನಿನಗೆ ತೋರಿಸುತ್ತೇನೆಂದು ಹೇಳಿದನು. ಈ ರೀತಿ ಬಹು ಗ್ರಂಥಗಳ ವಚನಗಳಿಂದ ತಿಳಿಯುಬರುತ್ತದೆ.

**ಶ್ಲೋಕ ॥ ವಿಸ್ತಾರೇ ಭೀಮನಿಹತಾಃ । ಸಂಕ್ಷೇಪೇಽರ್ಜುನಪಾತಿತಾಃ ॥**
**ಉಚ್ಯಂತೇ ಬಹವಶ್ಚಾನ್ಯೇ । ಪುಂವ್ಯತ್ಯಾಸ ಸಮಾಶ್ರಯಾತ್ ॥೧೩೨॥**

ಅರ್ಥ.—ವಿಸ್ತಾರೇ=ಬಹು ಗ್ರಂಥಗಳಲ್ಲಿ, ಭೀಮನಿಹತಾಃ–(ಬಹು ಮಟ್ಟಿಗೆ) ಭೀಮನಿಂದ ಹತರಾದರು ಎಂತಲೂ, ಸಂಕ್ಷೇಪೇ=ಯಾವುದೋ ಒಂದು ಗ್ರಂಥದಲ್ಲಿಮಾತ್ರ, ಅರ್ಜುನಪಾತಿತಾಃ–ಅರ್ಜುನನಿಂದ ಹತರಾದರು, ಇತಿ=ಈಪ್ರಕಾರ, ಬಹವಃ–ಬಹು ಜನರು, ಪುಂವ್ಯತ್ಯಾಸಸಮಾಶ್ರಯಾತ್=ಪುಂವ್ಯತ್ಯಾಸದಿಂದ, ಅನ್ಯೇ=ಇತರರು, ಉಚ್ಯಂತೇ=ಹೇಳುತ್ತಾರೆ

ತಾತ್ಪರ್ಯ.—ಬಹು ಗ್ರಂಥಗಳಲ್ಲಿ ದುರ್ಯೋಧನಾದಿ ಸರ್ವರೂ ಭೀಮಸೇನನಿಂದ ಹತರಾದರೆಂತಲೂ, ಕೆಲವು ಗ್ರಂಥಗಳಲ್ಲಿ ಅರ್ಜುನನಿಂದ ಹತರಾದರೆಂತಲೂ ಹೇಳಲ್ಪಟ್ಟಿದೆ. ಬಹೂಕ್ತಿ ಪ್ರಾಮಾಣ್ಯವಾದ್ದರಿಂದ, ಅಲ್ಪೋಕ್ತಿ (ಸ್ವಲ್ಪ) ಅಸುರಮೋಹನಾರ್ಥವಾಗಿ ಹೇಳಲ್ಪಟ್ಟದ್ದು ಎಂದು ತಿಳಿಯತಕ್ಕದ್ದು.

**ಶ್ಲೋಕ ॥ ವಿಸ್ತಾರೇ ಕೃಷ್ಣನಿಹತಾ । ಬಲಭದ್ರಹತಾ ಇತಿ ॥ ಉಚ್ಯಂತೇಚ ಕ್ವಚಿತ್ಕಾಲ । ವ್ಯತ್ಯಾಸೋಽಪಿ ಕ್ವಚಿದ್ಭವೇತ್ ॥೧೩೩॥**

ಅರ್ಥ.—ವಿಸ್ತಾರೇ=ಬಹು ಗ್ರಂಥಗಳ ವಚನಗಳಲ್ಲಿ, ಕೃಷ್ಣನಿಹತಾಃ=ಕೃಷ್ಣನಿಂದ ಹತರಾದರು ಎಂತಲೂ, ಕ್ವಚಿತ್=ಕೆಲವು ಗ್ರಂಥಗಳಲ್ಲಿ ಮಾತ್ರ, ಬಲಭದ್ರಹತಾಃ–ಬಲರಾಮನಿಂದ ಹತರಾದರು, ಇತಿ=ಹೀಗೆಂ

ದು, ಉಚ್ಯಂತೇ=ಹೇಳುತ್ತಾರೆ, ಈ ಪ್ರಕಾರ, ಕಾಲವ್ಯತ್ಯಾಸೋಪಿ=ಕಾಲ ವ್ಯತ್ಯಾಸಗಳೂ, ಭವೇತ್=ಆಗುತ್ತವೆ.

ತಾತ್ಪರ್ಯ.—ಅನೇಕ ಗ್ರಂಥಗಳಲ್ಲಿ ಶ್ರೀಕೃಷ್ಣನು ಸಂಹಾರ ಮಾಡಿದ್ದಾಗಿ ಹೇಳಲ್ಪಟ್ಟವರನ್ನು ಕೆಲವು ಗ್ರಂಥಗಳು ಬಲರಾಮದೇವರು ಸಂಹಾರಮಾಡಿದ್ದಾಗಿ ಹೇಳುತ್ತವೆ. ಇದು ಪುರುಷ ವ್ಯತ್ಯಾಸವು.

**ಶ್ಲೋಕ ॥ ಯಥಾಸುಯೋಧನಂ ಭೀಮಃ । ಪ್ರಾಹಸತ್ಕೃಷ್ಣ ಸನ್ನಿಧೌ ॥**
**ಇತಿ ವಾಕ್ಯೇಷು ಬಹುಷು । ಜ್ಞಾಯಂತೇ ನಿರ್ಣಯಾದಪಿ ॥೧೩೪॥**

ಅರ್ಥ.—ಯಥಾ=ಯಾವರೀತಿಯಾಗಿ, ಭೀಮಃ = ಭೀಮಸೇನನು, ಸುಯೋಧನಂ=ದುರ್ಯೋಧನನನ್ನು, ದೃಷ್ಟ್ವಾ–ನೋಡಿ, ಕೃಷ್ಣಸನ್ನಿಧೌ= ಕೃಷ್ಣದೇವರ ಸನ್ನಿಧಾನದಲ್ಲಿ, ಪ್ರಾಹಸತ್=ನಕ್ಕನೋ, ಇತಿ=ಆ ಪ್ರಕಾರ ವೇ, ಬಹುಷುವಾಕ್ಯೇಷು = ಅನೇಕ ಗ್ರಂಥಗಳಿಂದ, ನಿರ್ಣಯಾದಪಿ– ನಿರ್ಣಯದ್ದೆಶೆಯಿಂದಲೂ, ಜ್ಞಾಯಂತೇ=ತಿಳಿಯಬರುತ್ತವೆ.

ತಾತ್ಪರ್ಯ.—ಬಹು ನಿರ್ಣಯಗ್ರಂಥಗಳಲ್ಲಿ ಭೀಮಸೇನದೇವರು, ಇಂದ್ರಪ್ರಸ್ಥದಲ್ಲಿ ನೀರಿನಲ್ಲಿ ಜಾರಿಬಿದ್ದ ದುರ್ಯೋಧನನನ್ನು ನೋಡಿ ಶ್ರೀ ಕೃಷ್ಣನ ಸನ್ನಿಧಾನದಲ್ಲಿ ನಕ್ಕಹಾಗೆ ತಿಳಿಯಬರುತ್ತದೆ.

**ಶ್ಲೋಕ ॥ ಅನಿರ್ಣಯೇತು ಕೃಷ್ಣಸ್ಯ । ಪೂರ್ವಮುಕ್ತಾಗತಿಸ್ತತಃ । ವ್ಯತ್ಯಾಸ**
**ಸ್ತ್ವೇವಮಾದ್ಯಾಶ್ಚ । ಪ್ರತಿಲೋಮ್ಯಾದಯಸ್ತಥಾ ॥೧೩೫॥**

ಅರ್ಥ.—ಅನಿರ್ಣಯೇತು=ನಿರ್ಣಯವಿಲ್ಲದಿರುವ ಗ್ರಂಥದಲ್ಲಿಯಾದ ರೋ, ಕೃಷ್ಣಸ್ಯಗತಿಃ–ಶ್ರೀಕೃಷ್ಣನ ಗಮನವು, ತತಃ=ಆ ಭೀಮಸೇನದೇ ವರ ನಗುವಿಕೆಯು, ಪೂರ್ವಂ=ಮೊದಲೇ ಎಂದು, ಉಕ್ತಾ = ಹೇಳಲ್ಪಟ್ಟದೆ. ಯೇವಮಾದ್ಯಾಃ=ಈ ರೀತಿಯಾದ, ವ್ಯತ್ಯಾಸಾಸ್ತ್ವೇವ=ಕಾಲವ್ಯತ್ಯಾಸಗಳೂ ತಥಾ–ಹಾಗೆಯೇ, ಪ್ರತಿಲೋಮ್ಯಾದಯಶ್ಚ=ಪ್ರತಿಲೋಮಾದಿ ವ್ಯತ್ಯಾಸಗ ಳೂ ಸಹ, ಉಚ್ಚಂತೇ=ಹೇಳಲ್ಪಡುತ್ತವೆ.

**ಶ್ಲೋಕ ॥ ದೃಶ್ಯಂತೇ ಭಾರತಾದ್ಯೇಷು । ಲಕ್ಷಣ ಗ್ರಂಥತಶ್ಚತೇ ॥**
**ಜ್ಞಾಯಂತೇ ಬಹುಭಿರ್ವಾಕ್ಯೈ । ನಿರ್ಣಯಗ್ರಂಥತಸ್ತಥಾ ॥೧೩೬॥**
**ತಸ್ಮಾದ್ಧಿ ನಿರ್ಣಯಗ್ರಂಥಾ । ನಾಶ್ರಿತ್ಯೇವಚ ಲಕ್ಷಣಂ ॥**
**ಬಹುವಾಕ್ಯಾನುಸಾರೇಣ । ನಿರ್ಣಯೋಯಂ ಮಯಾಕೃತಃ॥೧೩೭॥**

ಅರ್ಥ.—ಭಾರತಾದ್ಯೇಷು-ಗ್ರಂಥೇಷು=ಭಾರತವೇ ಮೊದಲಾದ ಗ್ರಂಥ ಗಳಲ್ಲಿ ಪುರುಷವ್ಯತ್ಯಾಸ, ಪ್ರಾತಿಲೋಮ್ಯಾದಿ ವ್ಯತ್ಯಾಸಗಳು, ದೃಶ್ಯಂತೇ= ಕಂಡುಬರುತ್ತವೆ. ತೇ-ಅವುಗಳು, ಲಕ್ಷಣಗ್ರಂಥತಃ=ವ್ಯಾಸೋಕ್ತ ಲಕ್ಷಣ ಗ್ರಂಥದಿಂದಲೂ, ಬಹುಭಿರ್ವಾಕ್ಯೈಃ=ಇತರ ಅನೇಕ ಗ್ರಂಥಗಳ ವಚನ ಗಳಿಂದಲೂ, ತಥಾ-ಹಾಗೇ, ನಿರ್ಣಯಗ್ರಂಥಕೈಃ=ನಿರ್ಣಯರೂಪಗಳಾದ ಬ್ರಹ್ಮಸೂತ್ರ, ಪಂಚರಾತ್ರಾದಿ ಗ್ರಂಥಗಳಿಂದಲೂ, ಜ್ಞಾಯಂತೇ-ತಿಳಿಯ ಬರುತ್ತದೆ. ||೧೩೬||

ಅರ್ಥ.—ತಸ್ಮಾದ್ಧಿ=ಆದ್ದರಿಂದಲೇ, ನಿರ್ಣಯಗ್ರಂಥಾನ್=ನಿರ್ಣೀತ ವಾದ ಗ್ರಂಥಗಳನ್ನೂ, ಲಕ್ಷಣಂಚ= ವ್ಯಾಸೋಕ್ತ ಲಕ್ಷಣ ಗ್ರಂಥಗಳನ್ನೂ, ಆಶ್ರಿತ್ಯೈವ-ಆಧಾರವಾಗಿಟ್ಟುಕೊಂಡೇ, ಬಹುವಾಕ್ಯಾನುಸಾರೇಣ=ಬಹು ಗ್ರಂಥಗಳ ವಚನಗಳನ್ನು ಅನುಸರಿಸಿಯೂ, ಅಯಂನಿರ್ಣಯಃ-ಈ ನಿರ್ಣ ಯಗ್ರಂಥವು, ಮಯಾ-ನನ್ನಿಂದ, ಕೃತಃ=ಮಾಡಲ್ಪಟ್ಟಿತು.

ತಾತ್ಪರ್ಯ.—ಪುರುಷವ್ಯತ್ಯಾಸ, ಕಾಲವ್ಯತ್ಯಾಸ, ಪ್ರಾತಿಲೋಮ್ಯ ಇತ್ಯಾದಿಗಳು, ಭಾರತಾದಿ ಗ್ರಂಥಗಳಲ್ಲಿ ಕಂಡುಬರುತ್ತವೆ. ಆ ವ್ಯತ್ಯಾಸ ಗಳು ಇವೆ ಅಥವ ಇಲ್ಲ, ಎಂಬುವ ಸಂಗತಿಯು, ವ್ಯಾಸೋಕ್ತ ಲಕ್ಷಣಗ್ರಂ ಥಗಳಿಂದಲೂ, ಇತರ ಬಹು ಗ್ರಂಥಗಳಲ್ಲಿನ ವಚನಗಳಿಂದಲೂ ತಿಳಿಯಬ ರುತ್ತವೆ. ಆದ್ದರಿಂದ, ವ್ಯಾಸೋಕ್ತ ಲಕ್ಷಣಗ್ರಂಥಗಳನ್ನೂ ನಿರ್ಣಯ ಗ್ರಂಥಗಳನ್ನೂ ಅನುಸರಿಸಿ ಬಹು ಗ್ರಂಥಗಳ ವಚನಾನುಸಾರವಾಗಿ ನನ್ನಿಂದ ಈ ನಿರ್ಣಯವು ಮಾಡಲ್ಪಟ್ಟಿತು.

**ಶ್ಲೋಕ || ಉಕ್ತಂ ಲಕ್ಷಣಶಾಸ್ತ್ರೇಚ | ಕೃಷ್ಣದ್ವೈಪಾಯನೋದಿತೇ || ತ್ರಿ**
**ಭಾಷಾಂಯೋನಜಾನಾತಿ | ರೀತೀನಾಂಶತಮೇವಚ ||೧೩೭||**

**ವ್ಯತ್ಯಾಸಾದೀನ್ ಸಪ್ತಭೇದಾನ್ | ವೇದಾದ್ಯರ್ಥಂತು ಯೋವದೇತ್||**
**ಸಯಾತಿ ನಿರಯಂ ಘೋರಂ | ಅನ್ಯಥಾಜ್ಞಾನಸಂಭವಂ ||೧೩೮||**

ಅರ್ಥ.—ಯಃ=ಯಾವ ಪುರುಷನು, ತ್ರಿಭಾಷಾಂ = ಭಾಷಾತ್ರಯ ವನ್ನೂ, ರೀತೀನಾಂಶತಂ=ರೀತಿಗಳ ಶತಕವನ್ನೂ, ವ್ಯತ್ಯಾಸಾದೀನ್=ಕಾಲ ಮೊದಲಾದ ಸಪ್ತವ್ಯತ್ಯಾಸಗಳನ್ನೂ, ನಜಾನಾತಿಯದಿ = ತಿಳಿಯದೆ ಇದ್ದವ

ನಾಗಿ, ವೇದಾದ್ಯರ್ಥಂತು=ವೇದಾದಿಗಳ ಅರ್ಥವನ್ನು, ವದೇತ್ಸ್ವಧೀ – ತನ್ನ ಸ್ವಬುದ್ಧಿಯಿಂದ ಹೇಳಿದ್ದೇ ಆದರೆ, ಸಃ=ಅವನು, ಅನ್ಯಥಾಜ್ಞಾನಸಂಭವಂ=ವಿಪರೀತ ಜ್ಞಾನದಿಂದ ಪ್ರಾಪ್ತನಾಗುವ, ಘೋರಂ = ಘೋರವಾದ, ನಿರಯಂ=ನರಕವನ್ನು ಕುರಿತು, ಯಾತಿ-ಹೋಗುತ್ತಾನೆ. ಇತಿ=ಹೀಗೆಂದು ಕೃಷ್ಣದ್ವೈಪಾಯನೋದಿತೇ-ಶ್ರೀವ್ಯಾಸರಿಂದ ಉಕ್ತವಾದ, ಲಕ್ಷಣಶಾಸ್ತ್ರೇ=ಲಕ್ಷಣಶಾಸ್ತ್ರದಲ್ಲಿ, ಪ್ರೋಕ್ತಂಚ-ಹೇಳಲ್ಪಟ್ಟಿದೆ

ತಾತ್ಪರ್ಯ.— ಯಾವ ಪುರುಷನು, ಸಮಾಧಿ, ದರ್ಶನ, ಗುಹ್ಯ, ಎಂಬ ಭಾಷಾತ್ರಯಗಳ ಲಕ್ಷಣವನ್ನೂ, ವ್ಯಾಖ್ಯಾನಮಾಡತಕ್ಕ ಮೂರುಪಥಗಳನ್ನೂ, ಕಾಲಾ ಪುರುಷಾದಿ ಮೊದಲಾದ ಸಪ್ತ ಭೇದಗಳನ್ನೂ, ತಿಳಿಯದೆ ಅಥವಾ ಅಪೇಕ್ಷಿಸದೇ, ವೇದ, ಭಾರತ, ಮತ್ತು ಪುರಾಣಗಳ ಅರ್ಥವನ್ನು, ಸ್ವಬುದ್ಧಿಯಿಂದ ಹೇಳುತ್ತಾನೋ ಅವನು ವಿಪರೀತ ಜ್ಞಾನದಿಂದ ಪ್ರಾಪ್ತವಾಗುವ ಮಹಾ ಘೋರವಾದ ನರಕವನ್ನು ಹೊಂದುತ್ತಾನೆ ಎಂದು ಶ್ರೀವೇದವ್ಯಾಸರಿಂದ ಹೇಳಲ್ಪಟ್ಟ ಲಕ್ಷಣಶಾಸ್ತ್ರದಲ್ಲಿ ಹೇಳಲ್ಪಟ್ಟಿದೆ.

||೧೩೮|| ||೧೩೯||

**ಶ್ಲೋಕ || ಇತ್ಯನ್ಯೇಷುಚ ಶಾಸ್ತ್ರೇಷು । ತತ್ರತತ್ರೋದಿತಂ ಬಹು ||೧೪೦||**

ಅರ್ಥ.— ಇತಿ=ಈ ಪ್ರಕಾರವಾಗಿ, ಪೂರ್ವೋಕ್ತಾರ್ಥಗಳು, ಅನ್ಯೇಷುಶಾಸ್ತ್ರೇಷುಚ=ಲಕ್ಷಣ ಶಾಸ್ತ್ರಗಳಲ್ಲದ ಇತರ ಶಾಸ್ತ್ರಗಳಲ್ಲೂ ಸಹ, ತತ್ರತತ್ರಪ್ರಸಂಗೇ=ಆಯಾಯ ಸಂದರ್ಭಗಳಲ್ಲಿ, ಬಹು=ಬಹು ಗ್ರಂಥಪ್ರಕಾರವಾಗಿ, ಉದಿತಂ-ಹೇಳಲ್ಪಟ್ಟು, ಅಸ್ತಿ=ಇವೆ.

ತಾತ್ಪರ್ಯ.— ಈ ಪ್ರಕಾರವಾದ ಪೂರ್ವೋಕ್ತಾರ್ಥಗಳು ವ್ಯಾಸೋಕ್ತಲಕ್ಷಣ ಗ್ರಂಥಗಳಲ್ಲದ ಇತರ ಶಾಸ್ತ್ರಗಳಲ್ಲಿಯೂ ಸಹ ಆಯಾಯ ಸಂದರ್ಭಗಳಲ್ಲಿ ಹೇಳಲ್ಪಟ್ಟಿವೆ.

**ಶ್ಲೋಕ || ವ್ಯತ್ಯಾಸಃ ಪ್ರತಿಲೋಮ್ಯಂಚ । ಗೋಮೂತ್ರೀ ಪ್ರಘಸಸ್ತಥಾ || ಉಕ್ಷಣಃ ಸುಧರಃ ಸಾಧುಃ । ಸಪ್ತಭೇದಾಃ ಪ್ರಕೀರ್ತಿತಾಃ || ಇತ್ಯಾದಿ ಲಕ್ಷಣಾನ್ಯತ್ರ । ನೋಚ್ಯಂತೇನ್ಯ ಪ್ರಸಂಗತಃ ||೧೪೧||**

ಅರ್ಥ.— ವೃತ್ತ್ಯಾಸಃ, ಪ್ರಾತಿಲೋಮ್ಯಂ, ಗೋಮೂತ್ರೀ, ಪ್ರಸ್ತಾರಃ ತಥಾ-ಹಾಗೆಯೇ, ಉಕ್ಷ್ಣಾ, ಸುಧಾ, ಸಾಧು, (ಇತಿ=ಹೀಗೆಂದು) ಸಪ್ತ ಭೇದಾಃ=ಏಳು ಭೇದಗಳು, ಪ್ರಕೀರ್ತಿತಾಃ=ಹೇಳಲ್ಪಟ್ಟಿವೆ. ಇತ್ಯಾದಿಲಕ್ಷಣಾನಿ=ಇವೇ ಮೊದಲಾದ ಲಕ್ಷಣಗಳು, ಅತ್ರ-ಈ ನಿರ್ಣಯಗ್ರಂಥದಲ್ಲಿ ಅನ್ಯಪ್ರಸಂಗತಃ=ಶ್ರೀಹನುಮದವತಾರ ಕಥಾನಿರ್ಣಯ ಪ್ರಸಂಗವಿರುವದರಿಂದ ಮಯಾ=ನನ್ನಿಂದ, ನೋಚ್ಯಂತೇ-ಹೇಳಲ್ಪಡುವುದಿಲ್ಲ. ಇಲ್ಲಿ ಪ್ರಕೃತವಿಲ್ಲವೆಂದು ಭಾವ.

**ಶ್ಲೋಕ || ಅನುಸಾರೇಣ ತೇಷಾಂತು | ನಿರ್ಣಯಃ ಕ್ರಿಯತೇ ಮಯಾ ||**
**ತಸ್ಮಾನ್ನಿರ್ಣಯಶಾಸ್ತ್ರತ್ವಾ | ದ್ಗ್ರಾಹ್ಯ ಮೇತದ್ಬುಭೂಷುಭಿಃ ||೧೪೩||**

ಅರ್ಥ.—ತೇಷಾಂ=ಆ ಲಕ್ಷಣ ಶಾಸ್ತ್ರಗಳಿಗೆ, ಅನುಸಾರೇಣ=ಅನುಸಾರವಾಗಿ, ಮಯಾ=ನನ್ನಿಂದ, ನಿರ್ಣಯಃ=ನಿರ್ಣಯವು, ಕ್ರಿಯತೇ=ಮಾಡಲ್ಪಟ್ಟಿದೆ. ತಸ್ಮಾತ್-ಆದ್ದರಿಂದ, ಏತತ್=ಈ ಗ್ರಂಥವು, ನಿರ್ಣಯಶಾಸ್ತ್ರತ್ವಾತ್=ನಿರ್ಣಯಶಾಸ್ತ್ರವಾಗಿರುವದರಿಂದ, ಬುಭೂಷುಭಿಃ=ತತ್ತ್ವಜ್ಞಾನಾಪೇಕ್ಷೆಯುಳ್ಳವರಿಂದ, ಗ್ರಾಹ್ಯಂ=ಗ್ರಹಣಮಾಡಲ್ಪಡತಕ್ಕದ್ದು, ಎಂದು ಶ್ರೀಮತ್ಪೂರ್ಣಪ್ರಜ್ಞ ಆನಂದತೀರ್ಥ ಭಗವತ್ಪಾದರು ಶಾಸನಮಾಡಿರುತ್ತಾರೆ.

ಅವತಾರಿಕೆ.— ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರು ಶ್ರೀಹರಿ ಪರಮಾತ್ಮನ ಕಥೆಯನ್ನು ಏತತ್ಪರ್ಯಂತ ನಿರೂಪಣಮಾಡಿ, ತತ್ಕಥಾಪಠನಾದಿಗಳಿಂದ ಶ್ರೀಹರಿಯಪಾದಕಮಲ ಸನ್ನಿಧಾನ ಪ್ರಾಪ್ತಿಯೇ ಫಲವೆಂದು ಹೇಳುತ್ತಾ ಈ ಅಧ್ಯಾಯವನ್ನು ಉಪಸಂಹಾರಮಾಡುತ್ತಾರೆ.—

**ಶ್ಲೋಕ || ಇತೀರಿತಾ ರಾಮಕಥಾ ಪರಾಮಯಾ | ಸಮಸ್ತ ಶಾಸ್ತ್ರಾನುಸೃತೇರ್ಭವಾಪಹಾ || ಪಠೇದಿಮಾಂ ಯಃಶ್ರುಣುಯಾದಥಾಪಿವಾ | ವಿಮುಕ್ತಬಂಧಶ್ಚರಣಂ ಹರೇರ್ವ್ರಜೇತ್ ||೧೪೪||**

ಅರ್ಥ.— ಸಮಸ್ತಶಾಸ್ತ್ರಾನುಸೃತೇಃ=ಸಮಸ್ತ ಶಾಸ್ತ್ರಾನುಸಾರಿಯಾಗಿರುವದರಿಂದ, ಭವಾಪಹಾ-ಸಂಸಾರಬಂಧಪರಿಹಾರಕವಾದ, ಪರಾ=ಅತಿ ಶ್ರೇಷ್ಠವಾದ, ಶ್ರೀರಾಮಕಥಾ=ಶ್ರೀರಾಮಚಂದ್ರದೇವರ ಕಥೆಯು, ಇತಿ=ಈ ಉಕ್ತರೀತಿಯಾಗಿ, ಮಯಾ = ನನ್ನಿಂದ, ಈರಿತಾ – ಹೇಳಲ್ಪಟ್ಟಿತು, ಇಮಾಂ-ಈ ರಾಮಕಥಾವನ್ನು, ಯಃ-ಯಾವ ಪುರುಷನು, ಪಠೇತ್-

ಪಠನವಾಡುತ್ತಾನೋ, ತಥಾ=ಅಥವ, ಶೃಣುಯಾದ್ವಾಪಿ= ಶ್ರವಣವನ್ನಾದರೂ ಮಾಡುತ್ತಾನೆಯೋ, ಸಃ=ಅವನು, ವಿಮುಕ್ತಬಂಧಃ (ಸನ್) ಜನನ ಮರಣಾಖ್ಯ ಬಂಧನದಿಂದ ಮುಕ್ತನಾಗಿ, ಹರೇಃ=ಶ್ರೀವಿಷ್ಣುಪರಮಾತ್ಮನ, ಚರಣಂ-ಪಾದವನ್ನು ( ಮುಕ್ತಿಯನ್ನು ) ವ್ರಜೇತ್=ಹೊಂದುತ್ತಾನೆ.

ತಾತ್ಪರ್ಯ.—ಶ್ರೀಮದಾಚಾರ್ಯರು ಹೇಳುತ್ತಾರೆ.—ಸಮಸ್ತ ಲಕ್ಷಣ ಶಾಸ್ತ್ರಾನುಸಾರವಾಗಿರುವುದರಿಂದ ಈ ಸಂಸಾರಬಂಧಪರಿಹಾರಕವಾದ, ಅತಿ ಶ್ರೇಷ್ಠವಾದ, ಶ್ರೀರಾಮಕಥೆಯು ನನ್ನಿಂದ ನಿರ್ಣಯಗ್ರಂಥರೂಪವಾಗಿ ನಿರೂಪಣಮಾಡಲ್ಪಟ್ಟಿದೆ. ಈ ಪರಮ ಶ್ರೇಷ್ಠವಾದ ಶ್ರೀಮನ್ಮಹಾಭಾರತ ತಾತ್ಪರ್ಯನಿರ್ಣಯ ಗ್ರಂಥವನ್ನು ಯಾವ ಪುರುಷನು ಪಠನ ಪಾರಾಯಣ, ಪುರಾಣಕಥನಗಳನ್ನು ಮಾಡುತ್ತಾನೆಯೋ ಅಂತಹ ಸತ್ಪುರುಷನು, ಜನನ ಮರಣಾಖ್ಯ ಸಂಸಾರ ಬಂಧನದಿಂದ ಮುಕ್ತನಾಗಿ (ಹರೇಶ್ಚರಣಂ)ಶ್ರೀವಿಷ್ಣು ಪರಮಾತ್ಮನ ಪಾದವನ್ನು (ಶ್ಲೋಕ.—ಸ್ವೋತ್ಪತ್ತ್ಯಂಗೇಷು ದೇವಾನಾಂ। ಮನ್ಯೇಷಾಂ ಪಾದಮೂಲತಃ॥ ಮುಕ್ತಿಸ್ತು ವಿಹಿತಾವಿಷ್ಣೋಃ। ನಿರ್ದಿಷ್ಟೇಷುಯಥಾವಚಃ, ದೇವತೆಗಳು ಶ್ರೀಪರಮಾತ್ಮನ ಯಾವಯಾವ ಅಂಗಗಳಿಂದ ಉತ್ಪನ್ನರಾದರೋ ಅವರವರಿಗೆ ಆಯಾ ಅಂಗಗಳ ಪ್ರಾಪ್ತಿರೂಪ ಮೋಕ್ಷವು ವ್ಯವಸ್ಥಾಪಿಸಲ್ಪಟ್ಟಿದೆ. ಇವರಲ್ಲದೆ ಇತರ ಮುಮುಕ್ಷುಗಳಿಗೆ ಪಾದಮೂಲಪ್ರಾಪ್ತಿರೂಪ ಮೋಕ್ಷವು ಹೇಳಲ್ಪಟ್ಟಿದೆ.) ಮುಕ್ತಿಯನ್ನು ಹೊಂದುತ್ತಾರೆಂದು ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರು ಮುಕ್ತಿ ರೂಪವಾದ ವರದಾನಮಾಡಿದ್ದಾರೆಂದು ತಾತ್ಪರ್ಯವು.

ಇತಿ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯ ವಿರಚಿತೇ
ಶ್ರೀಮನ್ಮಹಾಭಾರತ ತಾತ್ಪರ್ಯನಿರ್ಣಯೇ ಶ್ರೀರಾಮ
ಚರಿತೇ ಉತ್ತರಕಾಂಡಕಥಾ ನಿರೂಪಣೋನಾಮ
ನವಮೋಽಧ್ಯಾಯಃ ಸಮಾಪ್ತಃ

॥ಶ್ರೀರಾಮಾಯನಮಃ॥

ಶ್ರೀಕೃಷ್ಣಾರ್ಪಣಮಸ್ತು.



# ಹತ್ತನೆಯ ಅಧ್ಯಾಯ.



ಅವತಾರಿಕೆ.— ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರವರು ಮೊದಲನೆಯ ಮೂರು ಅಧ್ಯಾಯಗಳಲ್ಲಿ ಶ್ರುತಿ ಸ್ಮೃತಿವಚನಗಳನ್ನುದಾಹರಿಸಿ ಸಕಲ ಶಾಸ್ತ್ರಾರ್ಥ ನಿರ್ಣಯವನ್ನು ಮಾಡಿ, ೪ ರಿಂದ ೯ ಅಧ್ಯಾಯಗಳಪರ್ಯಂತವಾಗಿ ಶ್ರೀಮನ್ಮೂಲರಾಮಾಯಣ ಕಥಾಸಂಗ್ರಹವನ್ನು ವಿರಚಿಸಿ ಹತ್ತನೆಯ ಅಧ್ಯಾಯದಲ್ಲಿ ಸಚ್ಛಾಸ್ತ್ರ ಪ್ರತಿಪಾದ್ಯ ಶ್ರೀವೇದವ್ಯಾಸದೇವರ ಅವತಾರವನ್ನು ನಿರೂಪಿಸುವವರಾಗುತ್ತಾರೆ.—

**ಶ್ಲೋಕ || ಓಂ ದ್ವಾಪರೇ ಥಯುಗೇಪ್ರಾಪ್ತೇತ್ವಷ್ಟಾವಿಂಶತಿಮೇ ಪುನಃ ||**

**ಸ್ವಯಂಭು ಶರ್ವಶಕ್ರಾದ್ಯಾ ದುಗ್ಧಾಬ್ಧೇಸ್ತೀರಮಾಯಯುಃ ||೧||**

ಅರ್ಥ.—ಅಥ=ಅನಂತರದಲ್ಲಿ, ಅಷ್ಟಾವಿಂಶತಿಮೇ=ವೈವಸ್ವತ ಮನ್ವಂತರದ ಇಪ್ಪತ್ತೆಂಟನೆಯ, ದ್ವಾಪರೇಯುಗೇ=ದ್ವಾಪರಯುಗವು, ಪ್ರಾಪ್ತೇ (ಸತಿ)=ಸಮಾಪ್ತಿಯಾಗುತ್ತಿರಲಾಗಿ, ಪುನಃ-ಮತ್ತೆ, ಸ್ವಯಂಭುಶರ್ವಶಕ್ರಾದ್ಯಾಃ=ಸ್ವಯಂಭೂಃ=ಬ್ರಹ್ಮದೇವರು, ಶರ್ವ=ರುದ್ರದೇವರು, ಶಕ್ರಃ=ಇಂದ್ರನೇ, ಆದ್ಯಾಃ=ಮೊದಲಾಗಿ ಉಳ್ಳ ದೇವತೆಗಳು, ದುಗ್ಧಾಬ್ಧೇಃ=ಕ್ಷೀರಸಮುದ್ರದ, ತೀರಂ=ದಡವನ್ನು (ಕುರಿತು,) ಆಯಯುಃ=ಹೊಂದಿದರು.

ವಿಶೇಷಾಂಶ.—ಶ್ರೀಮದಾಚಾರ್ಯರು "ಭೈಮಿಾತನುರ್ಮರುತ ಆಹ ಕಥಾಃ ಪರಸ್ಯ" ಎಂದು ಪ್ರತಿಜ್ಞೆಮಾಡಿ, "ವ್ಯೂಥಶ್ಚತುರ್ಥಾಭಗವಾನ್' ಇತ್ಯಾದಿ ಶ್ರೀವಾಸುದೇವಾದಿ ನಾಲ್ಕು ವ್ಯೂಹಮೂರ್ತಿಗಳ ಕಥನವನ್ನೂ ಸೃಷ್ಟ್ಯಾದಿವ್ಯಾಪಾರವನ್ನು ಹೇಳಿ, "ಕದಾಚಿದೀಶಃ ಸಕಲಾವತಾರಾನ್" ಎನ್ನುವ ಶ್ಲೋಕದವರೆಗೆ ವರಾಹ ಮೊದಲಾದ ನಾನಾವತಾರ ಕಥನಮಾಡಿ, ಈಗ ವ್ಯಾಸಾವತಾರವನ್ನು ನಿರೂಪಿಸುತ್ತಾ "ಪುನಃ" ಎಂದರೆ "ತೃತೀಯೇ ಸಪ್ತಮೇಚೈವ ಷೋಡಶೇ ಪಂಚವಿಂಶಕೇ" "ಅಷ್ಟಾವಿಂಶಯುಗೇ ಕೃಷ್ಣಃ ಸತ್ಯವತ್ಯಾಮಜಾಯತ" ಎಂಬ ದ್ವಿತೀಯಸ್ಕಂಧ ಭಾಗವತ ತಾತ್ಪರ್ಯವಚನಾನುಸಾರ ಶ್ರೀವೇದವ್ಯಾಸರು ಸತ್ಯವತೀದೇವಿಯರಲ್ಲಿ ೩ನೇ, ೭ನೇ, ೧೬ನೇ, ೨೫ನೇ, ೨೮ನೆಯ ದ್ವಾಪರಯುಗದಲ್ಲಿ ಅವತರಿಸಿದರು.

೨೮ನೆಯ ದ್ವಾಪರಕ್ಕಿಂತ ಪೂರ್ವದಲ್ಲಿ ಶ್ರೀವ್ಯಾಸರು ನಾಲ್ಕಾವರ್ತಿ ಅವತರಿಸಿದ್ದರು. ೫ನೇ ಆವರ್ತಿ ಅವತರಿಸಲು ಸ್ತೋತ್ರಮಾಡಿ ಪ್ರಾರ್ಥಿಸುವುದಕ್ಕಾಗಿ ಬ್ರಹ್ಮಾದಿಗಳು ಕ್ಷೀರಸಾಗರಕ್ಕೆ ಹೋದರು.

**ಶ್ಲೋಕ ॥ ಪಯೋಬ್ಧೇರುತ್ತರಂ ತೀರಮಾಸಾದ್ಯ ವಿಬುಧರ್ಷಭಾಃ ॥**
**ತುಷ್ಟುವುಃ ಪುಂಡರೀಕಾಕ್ಷಮಕ್ಷಯಂ ಪುರುಷೋತ್ತಮಂ ॥೨॥**

ಅರ್ಥ-— ವಿಬುಧರ್ಷಭಾಃ-ಆ ದೇವಶ್ರೇಷ್ಠರು, ಪಯೋಬ್ಧೇಃ=ಕ್ಷೀರಸಾಗರದ, ಉತ್ತರಂತೀರಂ=ಉತ್ತರತೀರವನ್ನು, ಆಸಾದ್ಯ=ಸೇರಿ, ಅಕ್ಷಯಂ=ನಾಶರಹಿತನಾದ, ಪುರುಷೋತ್ತಮಂ-ಕ್ಷರಾಕ್ಷರ ಪುರುಷರಿಗಿಂತಲೂ ಶ್ರೇಷ್ಠನಾದ, ಪುಂಡರೀಕಾಕ್ಷಂ=ಕಮಲದಂತೆ ವಿಶಾಲವಾದ ಕಣ್ಣುಗಳುಳ್ಳ ಶ್ರೀಮನ್ನಾರಾಯಣನನ್ನು, ತುಷ್ಟುವುಃ-ಸ್ತೋತ್ರಮಾಡಿದರು.

ಅವತಾರಿಕೆ.— ದೇವತೆಗಳು ಸ್ತೋತ್ರಮಾಡಿದ ರೀತಿಯನ್ನು ಹೇಳುತ್ತಾರೆ.—

**ಶ್ಲೋಕ ॥ ನಮೋ ನಮೋ ಗಣ್ಯಗುಣೈಕಧಾಮ್ನೇ । ಸಮಸ್ತವಿಜ್ಞಾನ ಮರೀಚಿಮಾಲಿನೇ ॥ ಅನಾದ್ಯವಿಜ್ಞಾನ ತಮೋ ನಿಹಂತ್ರೇ । ಪರಾಮೃತಾನಂದಪದ ಪ್ರದಾಯಿನೇ ॥೩॥**

ಅರ್ಥ.— ಅಗಣ್ಯ=ಲೆಕ್ಕಮಾಡುವುದಕ್ಕೆ ಶಕ್ಯವಲ್ಲದ, ಗುಣ=ಕಲ್ಯಾಣಗುಣಗಳಿಗೆ, ಏಕಧಾಮ್ನೇ=ಮುಖ್ಯಾಶ್ರಯನಾದ, ಸಮಸ್ತ=ಸಕಲ, ವಿಜ್ಞಾನ=ವಿಶೇಷ ಜ್ಞಾನಗಳಿಂದ, ಮರೀಚಿ=ಸೂರ್ಯನ ಕಿರಣಗಳಂತೆ, ಮಾಲಿನೇ=ಶೋಭಿಸತಕ್ಕಂಥಾ, ಅನಾದಿ=ಅನಾದಿ ಕಾಲದಿಂದಲೂ ಅನುಸರಿಸಿಕೊಂಡು ಬಂದಿರುವ, ಅವಿಜ್ಞಾನ=ಅಜ್ಞಾನವೆಂಬ, ತಮಃ-ಕತ್ತಲೆಯನ್ನು, ನಿಹಂತ್ರೇ-ನಾಶಮಾಡತಕ್ಕಂಥಾ, ಪರಾಂ=ಉತ್ತಮರಾದ ಬ್ರಹ್ಮಾದಿಗಳಿಗೆ, ಅಮೃತ=ನಾಶರಹಿತವಾದ, ಆನಂದ-ಆನಂದವುಳ್ಳ, ಮೋಕ್ಷ=ಮೋಕ್ಷಪದವಿಯನ್ನು, ಪ್ರದಾಯಿನೇ-ಕರುಣಿಸತಕ್ಕಶೀಲಸ್ವಭಾವವುಳ್ಳಂಥಾ ಶ್ರೀಮನ್ನಾರಾಯಣನಿಗೋಸ್ಕರ, ನಮೋನಮಃ=ಅನಂತಾನಂತ ನಮಸ್ಕಾರಗಳು.

ಅವತಾರಿಕಾ-—ಹಿಂದೆ ಶ್ರೀಮನ್ನಾರಾಯಣನು ಮಾಡಿದ ಉಪಕಾರವನ್ನು ಸ್ಮರಿಸಿಕೊಳ್ಳುತ್ತಾರೆ.—

ಶ್ಲೋಕ ॥ ಸ್ವದತ್ತಮಾಲಾಭುವಿಪಾತಕೋಪತೋ । ದುರ್ವಾಸಸಃ ಶಾಪತ ಆಶುಹಿಶ್ರಿಯಾ ॥ ಶಕ್ರೇ ವಿಹೀನೇ ದಿತಿಜೈಃ ಪರಾಜಿತೇ । ಪುರಾ ವಯಂ ತ್ವಾಂ ಶರಣಂಗತಾಃಸ್ಮಃ ॥೪॥

ಅರ್ಥ.—ಪುರಾ=ಹಿಂದೆ. ದುರ್ವಾಸಸಃ=ದುರ್ವಾಸಮುನಿಗಳಿಂದ, ಸ್ವದತ್ತ=ಅನುಗ್ರಹಪೂರ್ವಕವಾಗಿ ಕೊಡಲ್ಪಟ್ಟ, ಮಾಲಾ=ಮಾಲಿಕೆಯು, ಭುವಿ=ಭೂಮಿಯಲ್ಲಿ, ಪಾತ=ಬಿದ್ದಿರುವುದರಿಂದ ಉಂಟಾದ, ಕೋಪತಃ=ಕ್ರೋಧದಿಂದ ಕೊಡಲ್ಪಟ್ಟ, ಶಾಪತಃ=ಶಾಪದ ದೆಸೆಯಿಂದ, ಆಶು=ತಕ್ಷಣದಲ್ಲಿಯೇ, ಶಕ್ರೇ=ಇಂದ್ರನು, ಶ್ರಿಯಾ=ಐಶ್ವರ್ಯದಿಂದ, ವಿಹೀನೇ (ಸತಿ)=ಭ್ರಷ್ಟನಾಗಿ, ದಿತಿಜೈಃ=ದೈತ್ಯರಿಂದ, ಪರಾಜಿತೇಸತಿ=ಸೋಲಿಸಲ್ಪಡಲಾಗಿ, ವಯಂ=ನಾವುಗಳು, ತ್ವಾಂ=ನಿನ್ನನ್ನು, ಶರಣಂ=ಶರಣಾಗತನನ್ನಾಗಿ ಗತಾಸ್ಮಃ=ಹೊಂದಿರುತ್ತೇವೆ. (ಹಿ=ತಪಸ್ವಿಗಳ ಶಾಪ ಪ್ರದಾನ ಶಕ್ತಿಯು ಅದ್ಭುತವು ! )

ವಿಶೇಷಾಂಶ.—ಶ್ರೀವಿಷ್ಣುಪುರಾಣೋಕ್ತ ಪ್ರಕಾರ, ಒಂದು ದಿನ ಇಂದ್ರನು ಬಹು ಅಟ್ಟಹಾಸದಿಂದ ಐರಾವತದಮೇಲೆ ಬರುತ್ತಿರಲು, ದುರ್ವಾಸರು ಎದುರಿಗೆ ಬರುತ್ತಿರುವ ಇಂದ್ರದೇವರಿಗೆ ಒಂದು ಪುಷ್ಪಮಾಲಿಯನ್ನು ಕೊಟ್ಟರು. ಇಂದ್ರನು ಅದು ಎಕ್ಕೇ ಹೂ ಎಂಬ ತಿರಸ್ಕಾರ ಬುದ್ಧಿಯಿಂದ ಅದನ್ನು ಆನೆಯ ಕುಂಭದಮೇಲೆ ಎಸೆದನು. ಆ ಮಾಲೆಯು ಆನೆಯ ಶಿರಸ್ಸಿನಲ್ಲಿ, ಕೈಲಾಸಶಿಖರದಮೇಲೆ ಗಂಗೆಯು ಶೋಭಿಸುವಂತೆ, ಬೆಳ್ಳಗೆ ಪ್ರಕಾಶಿಸಿತು. ಆನೆಯು ಆ ಮಾಲೆಯನ್ನು ನೆಲದಮೇಲೆ ಎಸೆದುಬಿಡಲು, ದುರ್ವಾಸರು ಕೋಪಗೊಂಡು, " ಐಶ್ವರ್ಯಭ್ರಷ್ಟನಾಗು " ಎಂದು ಇಂದ್ರನನ್ನು ಶಪಿಸಿದರು. ಇದನ್ನು ತಿಳಿದು ದೈತ್ಯರು ಇಂದ್ರನಮೇಲೆ ಯುದ್ಧಮಾಡಿ ಸ್ವರ್ಗಲೋಕವನ್ನು ಆಕ್ರಮಿಸಲು, ಇಂದ್ರನು ರಾಜ್ಯಭ್ರಷ್ಟನಾದನು.

ಅವತಾರಿಕಾ.—ದೇವತೆಗಳು ತಮ್ಮ ಐಶ್ವರ್ಯ ಮತ್ತು ಪದವಿಗಳನ್ನು ಪುನಃ ಹೊಂದುವುದಕ್ಕೆ ಬಲಿಚಕ್ರವರ್ತಿಯೊಡನೆ ಸ್ನೇಹ ಸಂಪಾದಿಸಿ ಸಮುದ್ರಮಥನಮಾಡತಕ್ಕದ್ದು ಎಂಬುದಾಗಿ ದೇವರಿಂದ ಆಜ್ಞಪ್ತರಾದರೆಂಬುವುದನ್ನು ಹೇಳುತ್ತಾರೆ.—

**ಶ್ಲೋಕ ॥ತ್ವದಾಜ್ಞಯಾ ಬಲಿನಾ ಸಂದಧಾನಾವರಾದ್ಗಿರೀಶಸ್ಯ ಪರೈರಚಾಲ್ಯಂ। ಬೃಂದಾರಕಾ ಮಂದರಮೇತ್ಯ ಬಾಹುಭಿ । ರ್ನಶೇಕುರುದ್ಧರ್ತುಮಿ ಮೇಸಮೇತಾಃ ॥೫॥**

ಅರ್ಥ.— ತ್ವದಾಜ್ಞಯಾ=ನಿನ್ನ ಅಪ್ಪಣೆಯ ಪ್ರಕಾರ, ಬಲಿನಾ= ಬಲಿಚಕ್ರವರ್ತಿಯೊಡನೆ ಸಂಧಿಮಾಡಿಕೊಂಡ, ಇಮೇ=ಈ, ಬೃಂದಾರಕಾಃ= ದೇವತೆಗಳು, (ದೈತ್ಯರುಗಳಿಂದ) ಸಮೇತಾಃ=ಕೂಡಿದವರಾಗಿ, ಗಿರೀಶಸ್ಯ= ರುದ್ರದೇವರ, ವರಾತ್=ವರದ ದೆಶೆಯಿಂದ, (ನಿನ್ನ ಹೊರತು) ಪರೈಃ- ಇತರರಿಂದ, ಅಚಾಲ್ಯಂ=ಅಲ್ಲಾಡಿಸುವುದಕ್ಕೆ ಅಸಾಧ್ಯವಾದ, ಮಂದರಂ- ಮಂದರಪರ್ವತದ, ಏತ್ಯ=ಸಮೀಪಕ್ಕೆಬಂದು, ಬಾಹುಭಿಃ=ಬಾಹುಗಳಿಂದ, ಉದ್ಧರ್ತುಂ=ಮೇಲಕ್ಕೆ ಎತ್ತುವುದಕ್ಕೆ, ನಶೇಕುಃ=ಸಮರ್ಥರಾಗಲಿಲ್ಲ.

ತಾತ್ಪರ್ಯ.— ನಿನ್ನ ಅಪ್ಪಣೆಯಪ್ರಕಾರ ಬಲಿಚಕ್ರವರ್ತಿಯೊಡನೆ ಸಂಧಾನಮಾಡಿಕೊಂಡ ದೇವತೆಗಳೂ, ರುದ್ರದೇವರ ವರಬಲದಿಂದ ಬಲಿಷ್ಠರಾದ ದೈತ್ಯರೂ ಕೂಡಿ ಮಂದರಪರ್ವತವನ್ನು ಎತ್ತುವುದಕ್ಕೆ ಕೂಡ ಸಮರ್ಥರಾಗಲಿಲ್ಲ. ನೀನೊಬ್ಬನೇ ಸಮರ್ಥನು.

ಅವತಾರಿಕೆ.—ಮಂದರಪರ್ವತವು ಆದಿಶೇಷನಲ್ಲಿ ಸ್ಥಾಪಿಸಲ್ಪಟ್ಟಿತು ಎನ್ನುವ ಗ್ರಂಥಾಂತರ ವಿರೋಧವನ್ನು ಪರಿಹರಿಸುತ್ತಾಗೆ.—

**ಶ್ಲೋಕ ॥ ತದಾತ್ವಯಾ ನಿತ್ಯ ಬಲತ್ವ ಹೇತುತೋ । ಯೋ ನಂತನಾಮಾ ಗರುಡಸ್ತದಂಸಕೇ ॥ ಉತ್ಪಾಟ್ಯ ಚೈಕೇನ ಕರೇಣ ಮಂದರೋ । ನಿಧಾಪಿತಸ್ತಂ ಸಸಹತ್ವಯಾವಹತ್ ॥೬॥**

ಅರ್ಥ.—ತದಾ=ಆಗ, ನಿತ್ಯ–ನಿರಂತರದಲ್ಲಿಯೂ, ಬಲತ್ವಹೇತುತಃ=ನಿರವಧಿಕ ಬಲಿಷ್ಟನಾಗಿರುವ, ತ್ವಯಾ=ನಿನ್ನಿಂದ, ಯಃ=ಯಾವನು, ಅನಂತನಾಮಾ=ಅನಂತನೆಂಬ ಹೆಸರುಳ್ಳ, ಗರುಡಃ=ಗರುಡನೋ, ತತ್= ಅವನ, ಅಂಸಕೇ=ಭುಜದಮೇಲೆ, ಏಕೇನ=ಒಂದೇ, ಕರೇಣ=ಕೈಯ್ಯಿಂದ ಉತ್ಪಾಟ್ಯ=ಕಿತ್ತು, ಮಂದರಃ=ಮಂದರಪರ್ವತವು, ನಿಧಾಪಿತಃ=ಸ್ಥಾಪಿಸಲ್ಪಟ್ಟಿತು. ಸಃ=ಆ ಗರುಡನು, ತ್ವಯಾಸಹ= ನಿನ್ನಿಂದ ಕೂಡಿಕೊಂಡು, ತಂ=ಆ ಮಂದರಪರ್ವತವನ್ನೂ, ಅಹವತ್=ಹೊತ್ತುಕೊಂಡನು.

ತಾತ್ಪರ್ಯ.— ನಿನ್ನ ಅನುಗ್ರಹದಿಂದ ಮಹಾಬಲಿಷ್ಠನಾದ ಅನಂತನೆಂಬ ಹೆಸರುಳ್ಳ ಗರುಡದೇವರಮೇಲೆ, ನಿನ್ನ ಒಂದೇ ಕೈಯ್ಯಿಂದ ಕಿತ್ತಲ್ಪಟ್ಟ

ಆ ಮಂದರಪರ್ವತವು ಇಡಲ್ಪಟ್ಟಿತು. ಆಗಗರುಡದೇವರು ನಿನ್ನನ್ನೂ ಆ ಮಂದರಪರ್ವತವನ್ನೂ ಹೊತ್ತುಕೊಂಡುಹೋದರು.

**ಶ್ಲೋಕ || ಪುನಃ ಪರೀಕ್ಷದ್ಭಿರಸೌ ಗಿರಿಃ ಸುರೈಃ | ಸಹಾಸುರೈರುನ್ನಮಿತಸ್ತದಂಸತಃ || ವ್ಯಚೂರ್ಣಯತ್ತಾನಖಿಲಾನ್ಪುನಶ್ಚ ತೇ | ತ್ವದೀಕ್ಷಯಾ ಪೂರ್ವವದುತ್ಥಿತಾಃ ಪ್ರಭೋ ||೭||**

ಅರ್ಥ.--ಪುನಃ=ಮತ್ತೆ, (ಗರುಡನಮೇಲೆ ಮಂದರಪರ್ವತವನ್ನು ಹೊರಿಸಿದಮೇಲೆ) (ತಮ್ಮಿಂದ ಮಂದರವನ್ನು ಎತ್ತುವುದಕ್ಕೆ ಆಗುತ್ತದೆಯೋ ಇಲ್ಲವೋ ? ಎಂಬುದಾಗಿ ) ಪರೀಕ್ಷದ್ಭಿಃ - ಪರೀಕ್ಷೆಯನ್ನು ಮಾಡಬೇಕೆಂಬ ಅಪೇಕ್ಷೆಯುಳ್ಳ, ಅಸುರೈಃಸಹ-ದೈತ್ಯರುಗಳಿಂದ ಕೂಡಿದ, ಸುರೈಃ=ದೇವತೆಗಳು, ತತ್=ಆ ಗರುಡನ, ಅಂಸತಃ=ಭುಜದಮೇಲಿನಿಂದ, ಉನ್ನಮಿತಃ =ಎತ್ತಲ್ಪಟ್ಟ, ಅಸೌ=ಈ, ಗಿರಿಃ=ಮಂದರಪರ್ವತವು (ಬಿದ್ದು) ತಾನ್-ಅಂಥಾ, ಅಖಿಲಾನ್=ಸಮಸ್ತರಾದ ದೇವಾಸುರರನ್ನು, ವ್ಯಚೂರ್ಣಯತ್= ಪುಡಿಪುಡಿಮಾಡಿತು, ಪ್ರಭೋ-ಸರ್ವ ಸಮರ್ಥನಾದ ಸ್ವಾಮಿಯೇ ! ತ್ವತ್ =ನಿನ್ನ, ಈಕ್ಷಯಾ=ಕೃಪಾಕಟಾಕ್ಷವೀಕ್ಷಣದಿಂದ, ತೇ=ಆ ದೇವಾಸುರರು, ಪೂರ್ವವತ್-ಮೊದಲು ಹೇಗೆ ದೃಢಾಂಗರಾಗಿದ್ದರೋ ಹಾಗೆಯೇ, ಪುನಶ್ಚ =ಮತ್ತೆ, ಉತ್ಥಿತಾಃ=ಎದ್ದು ನಿಲ್ಲುವರಾದರು.

**ಶ್ಲೋಕ || ಪುನಶ್ಚ ವಾಮೇನ ಕರೇಣ ವೀಶ್ವರೇ ನಿಧಾಯತಂಸ್ಕಂಧಗತಸ್ತ್ವಮಸ್ಯ || ಅಗಾಃಪಯೋಽಬ್ಧಿಂ ಸಹಿತಃ ಸುರಾಸುರೈರ್ಮಥ್ನಾಚ ತೇನಾಬ್ಧಿಮಥಾಪ್ಯಮಥ್ನಾಃ ||೮||**

ಅರ್ಥ-— ಪುನಶ್ಚ-ಮತ್ತೆ, ಅಸ್ಯ-ಈ ಗರುಡನ, ಸ್ಕಂಧ=ಹೆಗಲಿನಮೇಲೆ, ಗತಃ=ಇರುವ, ತ್ವಂ-ನೀನು, ತಂ = ಆ ಮಂದರಪರ್ವತವನ್ನು, ವಾಮೇನಕರೇಣ=ಎಡಗೈಯ್ಯಿಂದ, ವೀನಾಂ=ಪಕ್ಷಿಗಳಿಗೆಲ್ಲಾ, ಈಶ್ವರೇ-ಅಧಿಪತಿಯಾದ ಗರುಡನಲ್ಲಿ, ನಿಧಾಯ-ಇಟ್ಟು, ಸುರಾಸುರೈಃಸಹ=ದೇವಾಸುರರಿಂದ ಕೂಡಿದವನಾಗಿ, ಪಯೋಽಬ್ಧಿಂ-ಕ್ಷೀರಸಮುದ್ರವನ್ನು ಕುರಿತು, ಅಗಾಃ=ಬಂದವನಾಗಿ, ಮಥ್ನಾ=ಕಡೆಗೋಲು ಸ್ಥಾನಾಪನ್ನವಾದ, ತೇನ= ಆ ಮಂದರಪರ್ವತದಿಂದ, ಸುರಾಸುರೈಃ=ದೇವಾಸುರರಿಂದ ಕೂಡಿದವನಾಗಿಯೇ, ಅಬ್ಧಿಂಅಪಿ-ಕ್ಷೀರಸಮುದ್ರವನ್ನೂ ಕೂಡ, ಅಮಥ್ನಾಃ=ಕಡೆಯುವವನಾಗಿರುತ್ತೀ.

ತಾತ್ಪರ್ಯ.— ಗರುಡಾರೂಢನಾದ ನೀನು ಪುನಃ ಮಂದರಪರ್ವತವನ್ನು ಲೀಲಾಜಾಲವಾಗಿ ಎಡಗೈಯಿಂದ ಎತ್ತಿ ಗರುಡನಮೇಲಿಟ್ಟು, ದೇವಾಸುರರಿಂದ ಕೂಡಿದವನಾಗಿ ಕ್ಷೀರಸಮುದ್ರಕ್ಕೆ ದಯಮಾಡಿಸಿ, ಅವರ ಜೊತೆಯಲ್ಲಿಯೇ ನೀನೂ ಮಂದರಪರ್ವತವನ್ನು ಕಡೆಗೋಲನ್ನಾಗಿ ಮಾಡಿಕೊಂಡು ಕ್ಷೀರಸಮುದ್ರವನ್ನು ಮಥನಮಾಡುವವನಾದೆಯೋ ? ಸ್ವಾಮಿ.

**ಶ್ಲೋಕ ॥ ಕೃತಶ್ಚ ಕದ್ರ್ವಾ (ದ್ರ್ವೋ) ಸ್ತನಯೋತ್ರವಾಸುಕಿರ್ನೇತ್ರಂ ತ್ವಯಾ ಕಶ್ಯಪ ಜಃ ಸನಾಗರಾಟ್ ॥ ಮಮಂಥುರಬ್ಧಿಂ ಸಹಿತಾಸ್ತ್ವಯಾ ಸುರಾಃ ಸಹಾಸುರಾ ದಿವ್ಯಪಯೋಘೃತಾಧಿಕಂ ॥೯॥**

ಅರ್ಥ.— ಅತ್ರ-ಈ ಸಮುದ್ರಮಥನದಲ್ಲಿ, ಕಶ್ಯಪಜಃ-ಕಶ್ಯಪರಿಂದ ಕದ್ರ್ವಾಃ - ಕದ್ರೂದೇವಿಯ, ತನಯಃ - ಮಕ್ಕಳಾದ ಸರ್ಪಗಳಲ್ಲಿ, ನಾಗರಾಟ್ = ಶ್ರೇಷ್ಠನಾದ, ಸಃ - ಆ, ವಾಸುಕಿಃ=ವಾಸುಕಿಯೆಂಬ ಪ್ರಸಿದ್ಧನಾದ ನಾಗರಾಜನು, ತ್ವಯಾ-ನಿನ್ನಿಂದ, ನೇತ್ರಂ=ಮಂದರವೆಂಬ ಕಡೆಗೋಲನ್ನು ತಿರುಗಿಸುವುದಕ್ಕಾಗಿ ಹಗ್ಗವಾಗಿ, ಕೃತಃ=ಮಾಡಲ್ಪಟ್ಟನು. ಅಸುರಾಃಸಹ=ದೈತ್ಯರಿಂದ ಸಹಿತರಾದ, ಸುರಾಃ=ದೇವತೆಗಳು, ತ್ವಯಾ -ನಿನ್ನಿಂದ, ಸಹಿತಾಃ=ಕೂಡಿದವರಾಗಿ, ದಿವ್ಯ=ಶ್ರೇಷ್ಠನಾದ, ಪಯೋಘೃತಾಧಿಕಂ-ಹಾಲಿನಿಂದಲೂ, ತುಪ್ಪದಿಂದಲೂ, ಯಥೇಚ್ಛವಾಗಿ ತುಂಬಿರುವ ಅಬ್ಧಿಂ=ಕ್ಷೀರಸಮುದ್ರವನ್ನು, ಮಮಂಥುಃ=ಮಥನಮಾಡಿದರು.

**ಶ್ಲೋಕ ॥ ನೈಚ್ಛಂತ ಪುಚ್ಛಂದಿತಿಜಾ ಅಮಂಗಳಂ । ತದಿತ್ಯಥಾಗ್ರಂಜಗೃಹು ರ್ವಿಷೋಲ್ಬಣಂ ॥ ಶ್ರಾಂತಾಸ್ತು ತೇತೋ ವಿಬುಧಾಸ್ತು ಪುಚ್ಛಂ । ತ್ವಯಾಸಮೇತಾ ಜಗೃಹುಸ್ತ್ವದಾಶ್ರಯಾಃ ॥೧೦॥**

ಅರ್ಥ.— ದಿತಿಜಾಃ=ದೈತ್ಯರು, ತತ್-ಆ, ಪುಚ್ಛಂ=ವಾಸುಕಿಯ ಬಾಲವನ್ನು, ಅಮಂಗಳಂ ಇತಿ=ನೀಚವಾದ ಅಂಗವೆಂದು ತಿಳಿದು, ನೈಚ್ಛಂತ=ಹಿಡಿಯುವುದಕ್ಕೆ ಅಪೇಕ್ಷಿಸಲಿಲ್ಲ. ವಿಷ=ವಿಷದಿಂದ, ಉಲ್ಬಣಂ= ಕ್ರೂರವಾದ, ಅಗ್ರಂ=ಮುಖವನ್ನು, ಜಗೃಹುಃ=ಹಿಡಿದುಕೊಂಡರು, ಅತಃ =ಮುಖವನ್ನು ಹಿಡಿದುಕೊಂಡದ್ದರಿಂದ, ತೇ-ಆ ದೈತ್ಯರು, ತು=ಅತಿಶಯವಾಗಿ, ಶ್ರಾಂತಾಃ-ಕಂಗೆಟ್ಟವರಾದರು, ತ್ವಯಾ-ನಿನ್ನಿಂದ, ಸಮೇತಾಃ= ಕೂಡಿದವರಾಗಿ, ತ್ವತ್=ನೀನೇ, ಆಶ್ರಯಃ-ಆಶ್ರಯವನ್ನಾಗಿ ಉಳ್ಳ, ವಿಬುಧಾಸ್ತು=ದೇವತೆಗಳಾದರೋ, ಪುಚ್ಛಂ-ಆ ಸರ್ಪದ ಬಾಲವನ್ನು, ಜಗೃಹುಃ=ಹಿಡಿದುಕೊಂಡರು.

ಶ್ಲೋಕ || ಅಥಾತಿಭಾರಾದವಿಶತ್ಸುಕಾಂಚನೋ | ಗಿರಿಃ ಸಪಾತಾಲಮುಥತ್ವ ಮೇವ || ತಂ ಕಚ್ಛಪಾತ್ಮಾತ್ವಭರಃ ಸ್ವಪೃಷ್ಠೇ | ಹ್ಯನನ್ಯಧಾರ್ಯಂ ಪುರುಲೀಲಯೈವ ||೧೧||

ಅರ್ಥ.—ಅಥ=ಆ ಸರ್ಪದ ಬಾಲ ಮತ್ತು ಮುಖವನ್ನು ಹಿಡಿದು ಕೊಂಡಮೇಲೆ, ಸು=ಉತ್ತಮವಾದ, ಕಾಂಚನಃ = ಬಂಗಾರದ, ಗಿರಿಃ= ಮಂದರಪರ್ವತವು, ಅತಿಭಾರಾತ್=ಬಹಳಭಾರವಾಗಿದ್ದುದರಿಂದ, ಪಾತಾಲಂ=ಪಾತಾಳವನ್ನು, ಅವಿಶತ್-ಮುಳುಗಿ ಪಾತಾಳಕ್ಕೆ ಸೇರಿತು. ಅಥ= ಅನಂತರದಲ್ಲಿ, ತ್ವಂಪುನ=ನೀನೇ, ಕಚ್ಛಪ-ಕೂರ್ಮ(ಆಮೆ,) ಆತ್ಮಾ =ಸ್ವರೂಪವುಳ್ಳವನಾಗಿ, ಅನನ್ಯಧಾರ್ಯಂ=ಇತರರಿಂದ ಧರಿಸಲಸಾಧ್ಯವಾದ, ತಂ=ಆ ಮಂದರಪರ್ವತವನ್ನು, ಪುರು=ಉತ್ಕೃಷ್ಟವಾದ, ಲೀಲಯೈವ=ಲೀಲಾಜಾಲವಾಗಿ (ಅನಾಯಾಸದಿಂದ,) ಸ್ವ-ನಿನ್ನ, ಪೃಷ್ಠೇ=ಬೆನ್ನಿನಮೇಲೆ, ಅಭರಃ=ಧರಿಸುವವನಾದೆಯೋ ಸ್ವಾಮಿ! ಹಿ=ಪ್ರಸಿದ್ಧವು.

ಶ್ಲೋಕ || ಉಪರ್ಯಧಶ್ಚಾತ್ಮನಿನೇತ್ರ ಗೋತ್ರಯೋಃ | ತ್ವಯಾಪರೇಣಾವಿಶತಾ ಸಮೇಧಿತಾಃ || ಮಮಂಥುರಬ್ಧಿಂ ತರಸಾಮದೋತ್ಕಟಾಃ | ಸುರಾಸುರಾಃ ಕ್ಷೋಭಿತನಕ್ರಚಕ್ರಂ ||೧೨||

ಅರ್ಥ.—ಉಪರಿ=ಪರ್ವತದಮೇಲೂ, ಅಧಶ್ಚ=ಕೆಳಗೂ, ಆತ್ಮನಿ =ನಮ್ಮಲ್ಲಿಯೂ, ನೇತ್ರಗೋತ್ರಯೋಃ=ನೇತ್ರ=ತಿರುಗುತ್ತಿರುವ, ಹಗ್ಗಸ್ಥಾನೀಯ ಸರ್ಪದಲ್ಲಿಯೂ, ಗೋತ್ರಯೋಃ=ಪರ್ವತದಲ್ಲಿಯೂ, ಪರೇಣ= ಸರ್ವೋತ್ತಮನಾದ, ತ್ವಯಾ=ನಿನ್ನಿಂದ, ಆವಿಶತಾ = ಪ್ರವೇಶಿಸಲ್ಪಟ್ಟು, ಸಮೇಧಿತಾಃ-ಸಮ್ಯಕ್-ಚೆನ್ನಾಗಿ, ಏಧಿತಾಃ=ಬಲದಿಂದ, ಅಭಿವೃದ್ಧರಾಗಿಯೂ, ಮದ=ಮದದಿಂದ, ಉತ್ಕಟಾಃ-ಉತ್ಕೃಷ್ಟರಾದ, ಸುರಾಸುರಾಃ= ದೇವತೆಗಳೂ ಮತ್ತು ದೈತ್ಯರೂ, ತರಸಾ=ವೇಗದಿಂದ, ಕ್ಷೋಭಿತ=ಕ್ಷೋಭವನ್ನು ಹೊಂದಿದ, ನಕ್ರ=ಮೊಸಳೆಯೇ ಮೊದಲಾಗಿ ಉಳ್ಳ ಜಲಚರಗಳ, ಚಕ್ರಂ=ಸಮೂಹದಿಂದ ಕೂಡಿದ, ಅಬ್ಧಿಂ-ಕ್ಷೀರಸಾಗರವನ್ನು, ಮಮಂಥುಃ-ಮಥನಮಾಡಿದರು.

ತಾತ್ಪರ್ಯ.—ಸ್ವಾಮಿ! ಆ ಮಂದರಪರ್ವತದಮೇಲೂ, ಕೆಳಗೂ, ಒಳಗೂ, ಹೊರಗೂ, ನಮ್ಮಲ್ಲಿಯೂ, ವಾಸುಕಿಯಲ್ಲಿಯೂ, ಬಲಪ್ರದ

ನಾದ, ಸರ್ವೋತ್ತಮನಾದ ನೀನು ಪ್ರವಿಷ್ಟನಾದುದರಿಂದ ಬಹಳ ಹೆಚ್ಚಾದ ಬಲವುಳ್ಳ ದೇವಾಸುರರು ಸಮುದ್ರವನ್ನು ಮಥನಮಾಡಿದರು.

**ಶ್ಲೋಕ ॥ಶ್ರಾಂತೇಷು ತೇಷ್ವೇಕ ಉರುಕ್ರಮಸ್ತ್ವಂ । ಸುಧಾರಸಾಪ್ತ್ಯೈ ಮುದಿತೋಽಹ್ಯಮಥ್ನಾಃ ॥ ತದಾ ಜಗದ್ಗ್ರಾಸಿ ವಿಷಂ ಸಮುತ್ಥಿತಂ । ತ್ವದಾಜ್ಞಯಾ ವಾಯುರಧಾತ್ಕರೇ ನಿಜೇ ॥೧೩॥**

ಅರ್ಥ.—ತೇಷು=ಆ ದೇವಾಸುರರು, ಶ್ರಾಂತೇಷು=ಬಹಳವಾಗಿ ಬಳಲುತ್ತಿರಲು, ಉರುಕ್ರಮಃ=ಉತ್ಕೃಷ್ಟ ಪರಾಕ್ರಮವುಳ್ಳ ನೀನು, ಮುದಿತಃ=ಹರ್ಷದಿಂದ ಕೂಡಿದವನಾಗಿ, ತ್ವಂಏಕಃ-ನೀನೊಬ್ಬನೇ, ಸುಧಾರಸಃ=ಶ್ರೇಷ್ಠವಾದ ಅಮೃತದ, (ದೇವತೆಗಳಿಗೆ) ಆಪ್ತ್ಯೈ = ಪ್ರಾಪ್ತಿಗೋಸ್ಕರವಾಗಿ (ಕ್ಷೀರಸಮುದ್ರವನ್ನು) ಅಮಥ್ನಾಃ – ಮಥನಮಾಡುವವನಾದೆಯೋ ಸ್ವಾಮಿ ! ಹಿ=ಇದು ಪ್ರಸಿದ್ಧವು, ತದಾ-ಆಗ, ಜಗತ್=ಪ್ರಪಂಚವನ್ನೆಲ್ಲಾ, ನಾಶಿ=ನಾಶಮಾಡತಕ್ಕ, ವಿಷಂ=ಹಾಲಾಹಾಲವೆಂಬ ವಿಷವು, ಸಮುತ್ಥಿತಂ=ಹುಟ್ಟಿತು, ( ತಂ=ಆ ವಿಷವನ್ನು ) ತ್ವತ್-ನಿನ್ನ, ಆಜ್ಞಯಾ=ಅಪ್ಪಣೆಯ ಪ್ರಕಾರ, ವಾಯುಃ=ವಾಯುದೇವರು, ನಿಜೇ=ತನ್ನ, ಕರೇ = ಕೈಯ್ಯಲ್ಲಿ, ಅಧಾತ್ - ಧರಿಸಿದನು, ( ಹಿ=ಇದು ಪ್ರಸಿದ್ಧವು )

**ಶ್ಲೋಕ ॥ ಕಲೇಃ ಸ್ವರೂಪಂ ತದತೀವದುಸ್ಸಹಂ । ವರಾದ್ವಿಧಾತುಃ ಸಕಲೈಶ್ಚ ದುಃಸ್ಪೃಶಂ ॥ ಕರೇವಿಮಥ್ಯಾಸ್ತಬಲಂ ವಿಧಾಯ । ದದೌಸಕಿಂಚಿದ್ಗಿರಿಶಾಯವಾಯುಃ ॥೧೪॥**

ಅರ್ಥ.—(ಆ ವಿಷವು) ಕಲೇಃ=ಕಲಿಯ, ಸ್ವರೂಪಂ=ಸ್ವರೂಪವು ( ಕಲಿಯೇ ವಿಷವಾಗಿ ಹುಟ್ಟಿದ್ದಾನೆ) ವಿಧಾತುಃ=ಬ್ರಹ್ಮದೇವರ, ವರಾತ್=ವರದಬಲೆಯಿಂದ, ತತ್-ಆ ವಿಷವು, ಅತೀವ-ಅತ್ಯಂತವಾಗಿ, ದುಃಸ್ಸಹಂ=ಸಹಿಸುವುದಕ್ಕೆ ಅಶಕ್ಯವಾದದ್ದು. ಸಕಲೈಶ್ಚ=ಸರ್ವರಿಂದಲೂ ಕೂಡ, ದುಃಸ್ಪೃಶಂ=ಮುಟ್ಟುವುದಕ್ಕೆ ಸಹ ಅಶಕ್ಯವಾದದ್ದು. ಅಂಥಾ ವಿಷವನ್ನು ಸಃವಾಯುಃ=ಆ ವಾಯುದೇವರು ಸ್ವ=ತನ್ನ, ಕರೇ=ಕೈಯ್ಯಲ್ಲಿ, ವಿಮಥ್ಯ-ಚೆನ್ನಾಗಿ ಮರ್ದಿಸಿ, ಅಸ್ತಬಲಂ=ಹೋಗಲ್ಪಟ್ಟ ಸಾರವುಳ್ಳದ್ದನ್ನಾಗಿ, ವಿಧಾಯ=ಮಾಡಿ, ಕಿಂಚಿತ್-ಸ್ವಲ್ಪ ವಿಷವನ್ನು, ಗಿರಿಶಾಯ=ರುದ್ರದೇವರಿಗೆ, ದದೌ=ಕೊಟ್ಟರು.

ಶ್ಲೋಕ || ಸತತ್ಪಿಬನ್ಕಂಠ ಗತೇನತೇನ | ನಿಪಾತಿತೋ ಮೂರ್ಛಿತ ಆಶುರುದ್ರಃ || ಹರೇಃ ಕರಸ್ಪರ್ಶಬಲಾತ್ಸ ಸಂಜ್ಞಾ | ಮವಾಪ್ಯನೀಲೋಸ್ಯಗಲಸ್ತದಾಸೀತ್ ||೧೫||

ಅರ್ಥ—ತತ್=ಆ ವಿಷವನ್ನು, ಪಿಬನ್=ಪಾನಮಾಡಿದ, ಸಃ–ಆ ರುದ್ರದೇವರು, ಕಂಠಗತೇನ–ಕಂಠದಲ್ಲಿರತಕ್ಕ, ತೇನ=ಆ ವಿಷದಿಂದ, ರುದ್ರಃ=ರುದ್ರದೇವರು, ಆಶು=ತಕ್ಷಣದಲ್ಲಿಯೇ, ಮೂರ್ಛಿತಃ=ಪ್ರಜ್ಞೆತಪ್ಪಿದವರಾಗಿ, ನಿಪಾತಿತಃ–ಕೆಳಕ್ಕೆ ಬೀಳುವವರಾದರು. ಹರೇಃ=ಶ್ರೀಪರಮಾತ್ಮನ, ಕರಸ್ಪರ್ಶಬಲಾತ್–ಹಸ್ತ ಸ್ಪರ್ಶದಿಂದ, ಸಂಜ್ಞಾಂ=ಜ್ಞಾನವನ್ನು, ಅವಾಪ–ಹೊಂದಿದರು. ಸಃ=ಋದ್ರದೇವರು, ತದಾ–ವಿಷಪಾನದಿಂದ, ಅಸ್ಯ–ಋದ್ರದೇವರ, ಗಲಃ=ಕಂಠವು, ನೀಲಃ=ನೀಲವರ್ಣ ವಿಶಿಷ್ಟವಾಗಿ, ಆಸೀತ್=ಆಯಿತು. ( ಅತಏವ ಮಹದೇವರಿಗೆ " ನೀಲಕಂಠ " ನೆಂಬ ಹೆಸರು ಪ್ರಾಪ್ತವಾಯಿತು.

ಶ್ಲೋಕ || ಅಥತ್ವದಾಜ್ಞಾಂ ಪುರತೋ ನಿಧಾಯ | ನಿಧಾಯಪಾತ್ರೇ ತಪನೀಯ ರೂಪೇ || ಸ್ವಯಂ ತ್ವ ನಿರ್ಮರ್ಥ್ಯ ಬಲೋಪಪನ್ನಂ | ಪಪೌ ಸವಾಯುಸ್ತದುತಾಸ್ಯ ಜೀರ್ಣಂ ||೧೬||

ಅರ್ಥ—ಅಥ–ಅನಂತರದಲ್ಲಿ, ಸಃವಾಯುಃ=ಆ ವಾಯುದೇವರು, ತ್ವದಾಜ್ಞಾಂ=ನಿನ್ನ ಅಪ್ಪಣೆಯನ್ನು, ಪುರತೋನಿಧಾಯ = ಮುಂದೆಮಾಡಿಕೊಂಡು, ( ಮನ್ನಿಸಿ ) ತಪನೀಯರೂಪೇ=ಬಂಗಾರದ, ಪಾತ್ರೇ = ಪಾತ್ರೆಯಲ್ಲಿ, (ಕೈಯ್ಯಲ್ಲಿದ್ದ ವಿಷವನ್ನು ) ನಿಧಾಯ=ಹಾಕಿಕೊಂಡು, ಸ್ವಯಂತು=ತಾನೂ ಕೂಡ, ಅನಿರ್ಮಥ್ಯ=ಮರ್ಧನಮಾಡದೇನೇ, ಬಲೋಪಪನ್ನಂ=ಬಹುಸಾರವತ್ತಾದ ಆ ವಿಷವನ್ನು, ಪಪೌ=ಪಾನಮಾಡಿದರು. ತತ್=ಆ, ಉತ=ವಿಷವೂ ಕೂಡ, ಅಸ್ಯ=ವಾಯುದೇವರಿಗೆ, ಜೀರ್ಣಂ–ಜೀರ್ಣವಾಗಿ ಹೋಯಿತು.

ತಾತ್ಪರ್ಯ.—ವಾಯುದೇವರು ನಿನ್ನ ಅಪ್ಪಣೆಯಪ್ರಕಾರ ತನ್ನ ಕೈಯಲ್ಲಿದ್ದ ಹಾಲಾಹಲವನ್ನು ಬಂಗಾರದ ಪಾತ್ರೆಯಲ್ಲಿ ಹಾಕಿ, ಮರ್ದಿಸದೇನೇ ಪಾನಮಾಡಿ ಜೀರ್ಣಿಸಿಕೊಂಡನು.

ಅವತಾರಿಕೆ — ಈ ವಿಷಪಾನದಿಂದ ವಾಯುದೇವರಿಗೆ ಏನೂ ಆಗ ಲಿಲ್ಲವೆಂದು ಹೇಳುತ್ತಾರೆ. —

**ಶ್ಲೋಕ ||** **ಅತ್ಯಲ್ಪ ಪಾನಾಚ್ಚ ಬಭೂವಶೂಲಾ । ಶಿವಸ್ಯ ಶೀರ್ಷ್ಣ್ಯಸ್ಯ ಕರಾವಶಿಷ್ಟಂ ।। ಅಭೂತ್ಕಲಿಃ ಸರ್ವಜಗತ್ಸು ಪೂರ್ಣಂ । ಹೀತ್ವಾ ವಿಕಾರೋ ನಬಭೂವವಾಯೋಃ ।।೧೭।।**

ಅರ್ಥ. — ಅತ್ಯಲ್ಪಪಾನಾಚ್ಚ=ನಿರ್ಣಯವಾದ ಮತ್ತು ಅತ್ಯಲ್ಪವಾದ ಆ ವಿಷಪಾನಮಾತ್ರದಿಂದಲೇ, ಶಿವಸ್ಯ-ರುದ್ರದೇವರ, ಶೀರ್ಷ್ಣಿ-ತಲೆಯಲ್ಲಿ, ಶೂಲಾ=ವ್ಯಥೆಯು, ಬಭೂವ=ಉಂಟಾಯಿತು. ಅಸ್ಯ = ರುದ್ರದೇವರ, ಕರಾವಶಿಷ್ಟಂ=ಕೈಯಿಂದ ಕೆಳಕ್ಕೆ ಬಿದ್ದ, ಕಲಿಃ=ಕಲ್ಯಾತ್ಮಕ ವಿಷದಬಿಂದುಗಳು, ಸರ್ವಜಗತ್ಸು=ಸಮಸ್ತ ಲೋಕದಲ್ಲಿ, ಅಭೂತ್=ವ್ಯಾಪ್ತವಾಯಿತು. ಪೂರ್ಣಂ = ವಿಷವೆಲ್ಲವನ್ನೂ, ಹೀತ್ವಾ = ಕುಡಿದರೂ ಕೂಡ, ವಾಯೋಃ=ಶ್ರೀವಾಯುದೇವರಿಗೆ, ವಿಕಾರಃ – ಯಾವ ವಿಕಾರವೂ, ನಬಭೂವ=ಆಗಲಿಲ್ಲ.

ಅವತಾರಿಕೆ. — ವಿಷಾತ್ಮಕನಾದ ಕಲಿಗೆ ಸರ್ವಜಗತ್ತಿನಲ್ಲಿಯೂ ವ್ಯಾಪಕತ್ವವನ್ನು ಸ್ಪಷ್ಟೀಕರಿಸುತ್ತಾರೆ. —

**ಶ್ಲೋಕ ||** **ಕಲೇಃ ಶರೀರಾದಭವನ್ಕುನಾಗಾಃ । ಸವೃಶ್ಚಿಕಾಃ ಶ್ವಾಪದಯಾತುಧಾನಾಃ ।। ಅಥತ್ವಯಾಬ್ಧೌ ತು ವಿಮಥ್ಯಮಾನೇ । ಸುರಾಭವತ್ತಾಮಸುರಾ ಅವಾಪುಃ ।।೧೮।।**

ಅರ್ಥ. — ಕಲೇಃ=ಕಲಿಪುರುಷನ, ಶರೀರಾತ್–ಸ್ವರೂಪವಾದ ವಿಷದಿಂದ, ಕುನಾಗಾಃ=ಕುತ್ಸಿತವಾದ ಸರ್ಪಗಳೂ, ಸವೃಶ್ಚಿಕಾಃ=ಚೇಳುಗಳಿಂದ ಕೂಡಿದವುಗಳಾಗಿ, ಶ್ವಾಪದಾಃ=ತೋಳ, ಹುಲಿಗಳೇ ಮುಂತಾದವೂ, ಯಾತುಧಾನಾಃ=ರಾಕ್ಷಸರೂ, ಅಭವನ್=ಹುಟ್ಟಿದವರಾದರು. ಅಥ=ವಿಷವು ಹುಟ್ಟಿದನಂತರದಲ್ಲಿ, ತ್ವಯಾತು–ನಿನ್ನಿಂದಲೇ, ಅಬ್ಧೌ = ಸಮುದ್ರವು, ವಿಮಥ್ಯಮಾನೇ (ಸತಿ) – ಮಥಿಸಿಕೊಳ್ಳಲ್ಪಡುತ್ತಿರಲಾಗಿ, ಸುರಾ=ಮದ್ಯವು ಅಭವತ್=ಹುಟ್ಟಿತು. ತಾಂ=ಆ ಮದ್ಯವನ್ನು, ಅಸುರಾಃ=ದೈತ್ಯರು, ಅವಾಪುಃ=ಹೊಂದಿದರು.

ಅವತಾರಿಕೆ.— ಕ್ಷೀರಾಬ್ಧಿಯಲ್ಲಿ ಮಥನಕಾಲದಲ್ಲಿ ಹುಟ್ಟಿದ ವಸ್ತುಗಳನ್ನು ಹೇಳುತ್ತಾರೆ.—

**ಶ್ಲೋಕ || ಉಚ್ಚೈಃಶ್ರವಾ ನಾಮ ತುರಂಗಮೋಽಭೂ | ತ್ಕರೀತಥೈರಾವತ ನಾಮಧೇಯಃ || ಅನ್ಯೇಚ ದಿಕ್ಪಾಲಗಜಾ ಬಭೂವು | ರ್ವರಂ ತಥೈವಾಪ್ಸರಸಾಂ ಸಹಸ್ರಂ ||೧೯||**

ಅರ್ಥ.—ಉಚ್ಚೈಃಶ್ರವಾಃ=ಉಚ್ಚೈಃಶ್ರವಸ್ಸು ಎಂಬ, ನಾಮ=ಹೆಸರುಳ್ಳ, ತುರಂಗಮಃ=ಕುದುರೆಯು, ಅಭೂತ್=ಹುಟ್ಟಿತು, ತಥಾ=ಹಾಗೇನೇ, ಐರಾವತ=ಐರಾವತವೆಂಬ, ನಾಮಧೇಯಃ=ಹೆಸರುಳ್ಳ, ಕರೀ=ಆನೆಯು, ಅಭೂತ್=ಹುಟ್ಟಿತು. ಅನ್ಯೇ=ಇತರ, ದಿಕ್ಪಾಲ=ದಿಕ್ಪಾಲಕರ, ಗಜಾಃ=ಆನೆಗಳು, ಬಭೂವುಃ=ಹುಟ್ಟಿದುವು, ತಥೈವ=ಹಾಗೇನೇ, ವರಂ=ಶ್ರೇಷ್ಠರಾದ, ಅಪ್ಸರಸಾಂ=ಅಪ್ಸರಸ್ತ್ರೀಯರು, ಸಹಸ್ರಂ=ಸಹಸ್ರಸಂಖ್ಯೆಯು, ಅಭೂತ್=ಹುಟ್ಟಿದರು.

**ಶ್ಲೋಕ || ತಥಾಯುಧಾನ್ಯಾಭರಣಾನಿ ಚೈವ | ದಿವೌಕಸಾಂ ಪಾರಿಜಾತಸ್ತರುಶ್ಚ || ತಥೈವ ಸಾಕ್ಷಾತ್ಸುರಭಿರ್ನಿಶೇಶೋ | ಬಭೂವ ತತ್ಕೌಸ್ತುಭಂ ಲೋಕಸಾರಂ ||೨೦||**

ಅರ್ಥ.—ತಥಾ=ಹಾಗೆಯೇ, ಆಯುಧಾನಿ=ಆಯುಧಗಳೂ, ಆಭರಣಾನಿಚ=ಆಭರಣಗಳೂ, ದಿವೌಕಸಾಂ=ದೇವತೆಗಳ, ತರುಃ=ವೃಕ್ಷವಾದ ಪಾರಿಜಾತಶ್ಚ=ಪಾರಿಜಾತವೆಂಬುದೂ, ತಥೈವ=ಹಾಗೇನೇ, ಸಾಕ್ಷಾತ್=ಮುಖ್ಯ, ಸುರಭಿಃ=ಕಾಮಧೇನುವೂ, ನಿಶಿ=ರಾತ್ರಿಗೆ, ಈಶಃ=ಸ್ವಾಮಿಯಾದ ಚಂದ್ರನೂ, ಲೋಕಸಾರಂ=ಪ್ರಪಂಚದಲ್ಲೆಲ್ಲಾ ಅತ್ಯಂತ ಶ್ರೇಷ್ಠವಾದ, ಕೌಸ್ತುಭಂ=ಕೌಸ್ತುಭವೆಂಬ ರತ್ನವೂ ಕೂಡ, ಬಭೂವ=ಹುಟ್ಟಿದವು.

ವಿಶೇಷಾರ್ಥ.—" ಸಾಕ್ಷಾತ್ಸುರಭಿಃ " ಎಂಬುದರಿಂದ ಕಾಮಧೇನು ಎಂದರ್ಥವು. ನಂದಿನೀಧೇನು ಮುಂತಾದವು ಅಲ್ಲವೆಂಬರ್ಥವನ್ನು ಸೂಚಿಸುತ್ತದೆ.

ಅವತಾರಿಕೆ.—ಶ್ರೀಮಹಾಲಕ್ಷ್ಮೀದೇವಿಯರ ತಥಾ ಶ್ರೀಧನ್ವಂತರೀರೂಪಿ ಶ್ರೀಹರಿಯ ಆವಿರ್ಭಾವವನ್ನು ಹೇಳುತ್ತಾರೆ.—

**ಶ್ಲೋಕ ॥ ಅಥೇಂದಿರಾಯದ್ಯಪಿ ನಿತ್ಯದೇಹಾ । ಬಭೂವ ತತ್ರಾಪರಯಾ ಸ್ವತನ್ವಾ ॥ ತತೋಭವಾನ್ ದಕ್ಷಿಣಬಾಹುನಾ ಸುಧಾ । ಕಮಂಡಲುಂ ಕಲಶಂ ಚಾಪರೇಣ ॥೨೧॥**

ಅರ್ಥ.—ಅಥ–ಅನಂತರದಲ್ಲಿ, ಇಂದಿರಾ=ಶ್ರೀಮಹಾಲಕ್ಷ್ಮೀದೇವಿಯರು, ಯದ್ಯಪಿನಿತ್ಯದೇಹಾ=ನಾಶರಹಿತವಾದ ಸ್ವರೂಪ ಉಳ್ಳವರಾದಾಗ್ಯೂ, ಅಪರಯಾ=ಇತರವಾದ, ಸ್ವತನ್ವಾ=ತನ್ನ ದೇಹದಿಂದ, (ಎರಡನೇ ರೂಪದಿಂದ,) ತತ್ರ=ಆ ಕ್ಷೀರಸಮುದ್ರದಲ್ಲಿ, ಬಭೂವ–ಆವಿರ್ಭೂತರಾದರು ತತಃ=ಅನಂತರದಲ್ಲಿ, ಭವಾನ್=ನೀನು, ದಕ್ಷಿಣಬಾಹುನಾ=ಬಲಗೈಯ್ಯಿಂದ ಕಲಶಂ=ನೀರಿನಿಂದ ಕೂಡಿದ ಕಮಂಡಲವನ್ನೂ, ಅಪರೇಣ=ಮತ್ತೊಂದು ಕೈಯ್ಯಿಂದ (ಎಡಗೈಯ್ಯಿಂದ) ಸುಧಾಕಲಶಂ=ಅಮೃತದಿಂದ ಪೂರ್ಣವಾದ ಕಲಶವನ್ನೂ.

**ಶ್ಲೋಕ ॥ ಪ್ರಗೃಹ್ಯ ತಸ್ಮಾನ್ನಿರಗಾತ್ಸಮುದ್ರಾ । ದ್ಧನ್ವಂತರಿರ್ನಾಮ ಹರಿನ್ಮಣಿದ್ಯುತಿಃ ॥ ತತೋಭವದ್ಧಸ್ತಗತಂ ದಿತೇಃ ಸುತಾಃ । ಸುಧಾಭರಂ ಕಲಶಂಚಾಪಜಹ್ರುಃ । ಮುಕ್ತಂತ್ವಯಾ ಶಕ್ತಿಮತಾಪಿದೈತ್ಯಾ । ನ್ಸತಚ್ಯುತಾನ್ಕಾರಯಿತುಂ ವಧಾಯ ॥೨೨॥**

ಅರ್ಥ.— ಪ್ರಗೃಹ್ಯ=ಹಿಡಿದುಕೊಂಡು, ತಸ್ಮಾತ್ ಸಮುದ್ರಾತ್=ಆ ಸಮುದ್ರದ ದೆಸೆಯಿಂದ, ಹರಿನ್ಮಣಿಃ=ಇಂದ್ರ ನೀಲಮಣಿಯಂತೆ, ದ್ಯುತಿಃ=ಕಾಂತಿಯುಳ್ಳ, ಧನ್ವಂತರಿಃ=ಧನ್ವಂತರೀ ಎಂಬ, ನಾಮ=ಹೆಸರಿನಿಂದ ಪ್ರಸಿದ್ಧನಾದ ನೀನು, ನಿರಗಾತ್=ಆವಿರ್ಭೂತನಾದೆಯೋ ಸ್ವಾಮಿ ! ತತಃ=ಆಮೇಲೆ, ಭವತ್=ನಿನ್ನ, ಹಸ್ತಗತಂ=ಕೈಯ್ಯಲ್ಲಿದ್ದಂಥಾ, ಸುಧಾಭರಂ=ಅಮೃತದಿಂದ ತುಂಬಿದ, ಕಲಶಂ=ಕಲಶವನ್ನು, ದಿತೇಸುತಾಃ = ದೈತ್ಯರುಗಳು, ಅಪಜಹ್ರುಃ=ಅಪಹರಿಸಿದರು. ಶಕ್ತಿಮತ=ಶಕ್ತಿವುಳ್ಳನನಾದರೂ, ತ್ವಯಾ–ನಿನ್ನಿಂದ, ದೈತ್ಯಾನ್=ದೈತ್ಯರುಗಳನ್ನು, ವಧಾಯ – ಕೊಲ್ಲುವುದಕ್ಕೋಸ್ಕರ, ಸತ್ಯಚ್ಯುತಾನ್=ಸತ್ಯಭ್ರಷ್ಟರನ್ನಾಗಿ, ಕಾರಯಿತುಂ=ಮಾಡುವದಕ್ಕೂ, ಮುಕ್ತಂ=(ಕಲಶವು) ಬಿಡಲ್ಪಟ್ಟಿತು.

ವಿಶೇಷಾರ್ಥ.—ಸಮುದ್ರಮಥನಕಾಲದಲ್ಲಿ ಸಮುದ್ರದಲ್ಲಿ ಹುಟ್ಟಿ ಬರುವಾದ ಪದಾರ್ಥಗಳನ್ನು ಯಥಾಯೋಗ್ಯವಾಗಿ ಸ್ವೀಕರಿಸುತ್ತೇವೆಂದು ಮೊದಲೇ ದೈತ್ಯರು ಮಾತುಕೊಟ್ಟಿದ್ದರು. ಆದರಂತೆ ನಿನ್ನ ಕೈಯ್ಯಲ್ಲಿದ್ದಂಥ ಅಮೃತಕಲಶದಲ್ಲಿ ತಮಗೆ ಬರತಕ್ಕ ಭಾಗಕ್ಕೆ ನಿರೀಕ್ಷಿಸುವುದನ್ನು ಬಿಟ್ಟು ಕಲಶವನ್ನೇ ಕಿತ್ತುಕೊಂಡದ್ದರಿಂದ ದೈತ್ಯರು ಸತ್ಯಭ್ರಷ್ಟರಾದರು.

ಅವತಾರಿಕೆ.—ಶ್ರೀಮನ್ನಾರಾಯಣನ ಮೋಹಿನೀರೂಪವನ್ನು ವರ್ಣಿಸುತ್ತಾರೆ.

**ಶ್ಲೋಕ || ತತೋಭವಾನನುಪಮುತ್ತಮಂವಪು | ರ್ಬಭೂವ ದಿವ್ಯಪ್ರಮದಾತ್ಮಕಂ ತ್ವರನ್ || ಶ್ಯಾಮಂನಿತಂಬಾರ್ಪಿತ ರತ್ನಮೇಖಲಂ | ಜಾಂಬೂನದಾಭಾಂಬರಭೃತ್ಸುಮಧ್ಯಮಂ ||೨೩||**

ಅರ್ಥ.—ತತಃ-ಅನಂತರದಲ್ಲಿ, ಭವಾನ್=ನೀನು, ತ್ವರನ್-ತಕ್ಷಣದಲ್ಲಿಯೇ, ಅನುಪಮಂ-ಅಸದೃಶವಾದ, ಉತ್ತಮಂ=ಶ್ರೀಲಕ್ಷ್ಮೀ ಸ್ವರೂಪಕ್ಕಿಂತಲೂ ಉತ್ತಮವಾದ, ಶ್ಯಾಮಂ-ನೀಲವರ್ಣದ, ನಿತಂಬೆ – ಕಟಿಪ್ರದೇಶದಲ್ಲಿ, ಅರ್ಪಿತ=ಸ್ಥಾಪಿತವಾದ, ರತ್ನಮೇಖಲಂ=ರತ್ನಗಳ ಒಡ್ಯಾಣಗಳುಳ್ಳ, ಜಾಂಬೂನದ=ಬಂಗಾರದ, ಆಭಾ=ಕಾಂತಿಯಂತೆ ಪ್ರಭೆಯುಳ್ಳ ಅಂಬರ=ಪೀತಾಂಬರವನ್ನು, ಭೃತ್=ಧರಿಸಿರತಕ್ಕ, ಸುಮಧ್ಯಮಂ=ಸು ಸಮೀಚೀನವಾದ, ಮಧ್ಯಮಂ=ನೊಂಟವುಳ್ಳ, ದಿವ್ಯ=ಶ್ರೇಷ್ಠವಾದ, ಪ್ರಮದಾತ್ಮಕಂ-ಸ್ತ್ರೀಯ, ವಪುಃ=ಶರೀರವುಳ್ಳವನು. ಬಭೂವ-ಆದೆಯೋ ಸ್ವಾಮಿ.

**ಶ್ಲೋಕ || ಬೃಹನ್ನಿತಂಬಂ ಕಲಶೋಪಮಸ್ತನಂ | ಸತ್ಪುಂಡರೀಕಾಯತನೇತ್ರಮುಜ್ವಲಂ || ಸಮಸ್ತಸಾರಂ ಪರಿಪೂರ್ಣಸದ್ಗುಣಂ | ದೃಷ್ಟ್ವಾ ತತ್ಸಂಮುಮುಹುಃ ಸುರಾರಯಃ ||೨೪||**

ಅರ್ಥ.—ಬೃಹತ್=ದೊಡ್ಡದಾದ, ನಿತಂಬಂ=ಕಟಿಪಶ್ಚಾದ್ಭಾಗಳ್ಳದ್ದಾಗಿಯೂ, ಕಲಶೋಪಮಸ್ತನಂ=ಕುಂಭಗಳಂತೆ ಕುಚಗಳುಳ್ಳದ್ದಾಗಿಯೂ, ಸತ್ಪುಂಡರೀಕ=ನಿರ್ದುಷ್ಟವಾದ ಕಮಲದಂತೆ, [illegible]ಯತ-[illegible]ವಾದ, ನೇತ್ರಂ=ಕಣ್ಣುಗಳುಳ್ಳದ್ದಾಗಿಯೂ, ಉಜ್ವಲಂ = ಪ್ರಕಾಶವಾದದ್ದಾಗಿಯೂ, ಸಮಸ್ತ=ಸರ್ವವಸ್ತುಗಳಲ್ಲಿಯೂ, ಸಾರಂ=ಶ್ರೇಷ್ಠವಾದದ್ದಾಗಿಯೂ, ಪರಿಪೂರ್ಣ=ಸಂಪೂರ್ಣವಾದ, ಸದ್ಗುಣಂ-ನಿರ್ದುಷ್ಟಗು

ಗಳುಳ್ಳದ್ದೂ ಆದ, ತತ್=ಇಂಥಾ ದಿವ್ಯ ದೇಹವನ್ನು, ದೃಷ್ಟ್ವೈವ=ನೋಡಿ ದೊಡನೆಯೇ, ಸುರಾಃ-ದೇವತೆಗಳಿಗೆ, ಅರಯಃ-ಶತ್ರುಗಳಾದ ದೈತ್ಯರು, ಸಂಮುಮುಹುಃ=ಮೋಹಪಟ್ಟರು.

**ಶ್ಲೋಕ || ಪರಸ್ಪರಂ ತೇಽಮೃತಹೇತುತೋಽಖಿಲಾಃ | ವಿರುಧ್ಯಮಾನಾಃ ಪ್ರದ ದುಃಸ್ತ್ವತೇಽಕರೇ || ಸಮಂ ಸುಧಾಯಾಃ ಕಲಶಂವಿಭಜ್ಯ | ನಿಪಾಯ ಯಾಸ್ಮಾನಿತಿವಂಚಿತಾಸ್ತ್ವಯಾ ||೨೫||**

ಅರ್ಥ.—ತೇ=ಆ, ಅಖಿಲಾಃ=ಸಮಸ್ತರಾದ ದೈತ್ಯರು, ತ್ವಯಾ=ನಿನ್ನಿಂದ, ವಂಚಿತಾಃ=ಮೋಸಗೊಳಿಸಲ್ಪಟ್ಟರು, ಅಮೃತಹೇತುತಃ-ಅಮೃತ ಕ್ಕೋಸ್ಕರವಾಗಿ, ಪರಸ್ಪರಂ-ಒಬ್ಬರೊಡನೊಬ್ಬರು, ವಿರುಧ್ಯಮಾನಾಃ= ವಿರೋಧಕಟ್ಟಿಕೊಳ್ಳಲಾಗಿ, ಅಮೃತವನ್ನು, ಸಮಂ=ಸಮವಾಗಿ, ವಿಭಜ್ಯ =ಭಾಗಮಾಡಿ, ಅಸ್ಮಾನ್=ನಮ್ಮಗಳಿಗೆ, ನಿಪಾಯಯ=ಚೆನ್ನಾಗಿ ಪಾನಮಾಡಿಸು, ಇತಿ=ಈ ರೀತಿಯಾಗಿ ಹೇಳಿ, ಸುಧಾಯಾಃ=ಅಮೃತದ, ಕಲಶಂ-ಕಲಶವನ್ನು, ತೇ=ನಿನ್ನ, ಕರೇ-ಕೈಯ್ಯಲ್ಲಿ, ಪ್ರದದುಃಸ್ಮ=ಕೊಟ್ಟರು.

**ಶ್ಲೋಕ || ಧರ್ಮಚ್ಛಲಂಪಾಪಜನೇಷುಧರ್ಮ | ಇತಿತ್ವಯಾ ಜ್ಞಾಪಯಿತುಂ ತದೋಕ್ತಂ || ಯದ್ಯತ್ಕೃತಂಮೇ ಭವತಾಂಯದೀಹ | ಸಂವಾದ ಏ ವೋದ್ವಿಭಜೇ ಸುಧಾಮಿಮಾಂ ||೨೬||**

ಅರ್ಥ.—ಪಾಪಜನೇಷು-ಪಾಪಿಷ್ಠರಲ್ಲಿ, ಧರ್ಮಚ್ಛಲಂ=ಧರ್ಮಾಭಾಸವು( ಅಥವಾ ಧರ್ಮ ರಕ್ಷಣೆಗೋಸ್ಕರ ಕಪಟವನ್ನು ಆಚರಿಸತಕ್ಕದ್ದು) ಧರ್ಮಃ ಇತಿ=ಧರ್ಮವೆಂದು, ಜ್ಞಾಪಯಿತುಂ=ಲೋಕಕ್ಕೆ ತೋರಿಸುವುದಕ್ಕಾಗಿ, ಯತ್=ಯಾವ ಕಾರಣದಿಂದ, ಇಹ=ಅಮೃತ ವಿಭಾಗಮಾಡುವ ವಿಷಯದಲ್ಲಿ, ಮೇ=ನನ್ನಿಂದ ಯದ್ಯತ್ಕೃತಂ-ಯಾವಯಾವ ಕೆಲಸವು ಮಾಡಲ್ಪಡುತ್ತದೆಯೋ ಅದರಲ್ಲಿ ಭವತಾಂ-ನಿಮ್ಮಗಳಿಗೆ ಸಂವಾದಏವ-ಸಮ್ಮತಿ ಇದ್ದರೆ ಇಮಾಂಸುಧಾಂ=ಈ ಅಮೃತವನ್ನು ಉದ್ವಿಭಾಜೇ=ಹಂಚುತ್ತೇನೆಂದು ತದಾ=ಆ ಕಾಲದಲ್ಲಿ ತ್ವಯಾ=ನಿನ್ನಿಂದ ಉಕ್ತಂ-ಹೇಳಲ್ಪಟ್ಟಿತು.

**ಶ್ಲೋಕ || ಯಥೇಷ್ಟತೋಽಹಂ ವಿಭಜಾಮಿ ಸರ್ವಥಾ | ನವಿಶ್ವ ಸಧ್ವಂಮ ಯಿಕೇನಚಿತ್ಕ್ವಚಿತ್ || ಇತಿಪ್ರಹಸ್ಯಾಭಿಹಿತಂ ನಿಶಮ್ಯ | ಸ್ತ್ರೀಭಾವ ಮುಗ್ಧಾಸ್ತು ತಥೇತಿತೇ ವದನ್ ||೨೭||**

ಅರ್ಥ.—ಅಹಂ-ನಾನು, ಯಥೇಷ್ಟತಃ=ನನ್ನ ಇಷ್ಟಾನುಸಾರ, ವಿಭಜಾಮಿ=ಹಂಚುತ್ತೇನೆ, (ನೀವು ಮಾತ್ರ) ಮಯಿ-ನನ್ನಲ್ಲಿ, ಕೇನಚಿತ್=ಯಾವಪ್ರಕಾರದಿಂದಲಾಗಲೀ, ಕ್ವಚಿತ್=ಕೊಂಚವೂ, ಸರ್ವಥಾ=ಸರ್ವಪ್ರಕಾರದಿಂದಲೂ, ನವಿಶ್ವಸಧ್ವಂ-ಅನುಮಾನಪಡಕೂಡದು. ಇತಿ=ಈ ರೀತಿಯಾಗಿ, ಪ್ರಹಸ್ಯ=ಮಂದಹಾಸದಿಂದಕೂಡಿದವನಾಗಿ, ಅಭಿಹಿತಂ-ಹೇಳಿದ್ದನ್ನು, ನಿಶಮ್ಯ=ದೈತ್ಯರು ಕೇಳಿದವರಾಗಿ, ಸ್ತ್ರೀಭಾವಮುಗ್ಧಾಃ=ಸ್ತ್ರೀವ್ಯಾಮೋಹಕ್ಕೆ ಒಳಪಟ್ಟು, ತಥೇತಿ – ಹಾಗೆಯೇ ಆಗಲಿ ಎಂದು, ಏದನ್-ಹೇಳಿದರು.

**ಶ್ಲೋಕ॥ ತತಶ್ಚ ಸಂಸ್ಥಾಪ್ಯ ಪೃಥಕ್ಸುರಾ ಸುರಾಂ। ಸ್ತ್ವನಾತಿರೂಪೋಚ್ಛಲಿತಾನ್ಸುರೇತರಾನ್॥ ಸರ್ವಾನ್ಭವದ್ದರ್ಶನ ಈಕ್ಷ್ಯಲಜ್ಜಿತಾ। ಸ್ಮಿಹಂದೃಶೋಮೀಲಯತೇತ್ಯವೋಚಃ॥೨೮॥**

ಅರ್ಥ.—ತತಃ-ಅನಂತರದಲ್ಲಿ, ಸುರಾಸುರಾನ್-ದೇವದೈತ್ಯರನ್ನು, ಪೃಥಕ್ - ಬೇರೆಬೇರೆಯಾಗಿ, ಸಂಸ್ಥಾಪ್ಯ=ಕೂಡಿಸಿ, ತನ-ನಿನ್ನ, ಅತಿರೂಪೇಣ=ಸುಂದರವಾದ ರೂಪದಿಂದ, ಉಚ್ಛಲಿತಾನ್-ಮೋಹಿತರಾದ, ಸುರೇತರಾನ್ ಸರ್ವಾನ್-ಸಮಸ್ತರಾದ ದೈತ್ಯರನ್ನು ಕುರಿತು, ಭವತ್=ನಿಮಗೆ ನನ್ನ ದರ್ಶನವಾಗುತ್ತಿರಲು, ಈಕ್ಷ್ಯ-ನಿಮ್ಮನ್ನು ನೋಡಿ, ಅಹಂ-ನಾನು, ಲಜ್ಜಿತಾಸ್ಮಿ-ನಾಚಿಕೆ ಪಡುತ್ತೇನೆ, ಆದ್ದರಿಂದ ನೀವು, ದೃಶಃ=ನಿಮ್ಮ ನಿಮ್ಮ ಕಣ್ಣುಗಳನ್ನು, ಮೀಲಯತ-ಮುಚ್ಚಿಕೊಳ್ಳಿರಿ. ಇತಿ-ಹೀಗೆಂದು, ಅವೋಚಃ-ಹೇಳಿದವನಾದೆಯೋ ಸ್ವಾಮಿ! (ನೀವುಗಳು ವಕ್ರದೃಷ್ಟಿಯಿಂದ ನೋಡುತ್ತೀರಿ ಆದ್ದರಿಂದ ನಿಮ್ಮನ್ನು ಕಂಡರೆ ನನಗೆ ನಾಚಿಕೆ ಆಗುತ್ತೆ.)

**ಶ್ಲೋಕ॥ ನಿಮೀಲಿತಾಕ್ಷೇಷ್ವಸುರೇಷು ದೇವತಾ। ನ್ಯಪಾಯಯಃ ಸಾಧ್ವಮೃತಂತತಃಪುಮಾನ್॥ ಕ್ಷಣೇನಭೂತ್ವಾಪಿಬತಃ ಸುಧಾಂಶಿರೋ। ರಾಹೋರ್ನ್ಯಕೃಂತಶ್ಚ ಸುದರ್ಶನೇನ॥೨೯॥**

ಅರ್ಥ.—ಅಸುರೇಷು=ದೈತ್ಯರು, ನಿಮೀಲಿತಾನಿ=ಮುಚ್ಚಲ್ಪಟ್ಟ, ಅಕ್ಷೀಣೇಷು-ಕಣ್ಣುಗಳುಳ್ಳವರಾಗಿರಲು, ದೇವತಾನ್=ದೇವತೆಗಳಿಗೆ, ಸಾಧು=ಚೆನ್ನಾಗಿ, ಅಮೃತಂ=ಅಮೃತವನ್ನು, ನ್ಯಪಾಯಯಃ=ಪಾನಮಾಡಿಸಿರುತ್ತೀ, ತತಃ-ಅನಂತರದಲ್ಲಿ, ಕ್ಷಣೇನ=ತತ್ಕ್ಷಣದಲ್ಲಿ, ಪುಮಾನ್ಭೂತ್ವಾ

=ನೀನು ಪುರುಷರೂಪಿಯಾಗಿ, ಸುಧಾಂ=ಅಮೃತವನ್ನು, ಓಬತಃ=ದೇವ ಗಳ ಪಂಗ್ತಿಯಲ್ಲಿ ಕೂತುಕೊಂಡು ಕುಡಿಯುತ್ತಿದ್ದ, ರಾಹೋಃ=ದೈತ್ಯನಾದ ರಾಹುವಿನ, ಶಿರಃ=ತಲೆಯನ್ನು, ಸುದರ್ಶನೇನ=ನಿನ್ನ ಸುದರ್ಶನವೆಂಬ ಹೆಸರುಳ್ಳ ಚಕ್ರದಿಂದ, ನ್ಯಕೃಂತಃ-ಕತ್ತರಿಸುವವನಾಗಿದ್ದಿ.

**ಶ್ಲೋಕ ॥ ತೇನಾಮೃತಾರ್ಥಂಹಿ ಸಹಸ್ರ ಜನ್ಮಸು । ಪ್ರತಪ್ಯ ಭೂಯಸ್ತಪ ಆರಿತೋವರಃ ॥ ಸ್ವಯಂಭುವಸ್ತೇನ ಭವಾನ್ಕರೇ ಸ್ಯ । ಬಿಂದುಂಸುಧಾಂಪ್ರಾಸ್ಯಶಿರೋಜಹಾರ ॥೩೦॥**

ಅರ್ಥ.—ತೇನ=ಆ ರಾಹುವಿನಿಂದ, ಅಮೃತಾರ್ಥಂ=ಅಮೃತಪ್ರಾಪ್ತಿಗಾಗಿ, ಸಹಸ್ರಜನ್ಮಸು=ಸಾವಿರ ಜನ್ಮಗಳಲ್ಲಿ, ಭೂಯಃ=ಮಹತ್ತಾದ, ತಪಃ=ತಪಸ್ಸು, ಪ್ರತಪ್ಯ=ಮಾಡಲ್ಪಟ್ಟು, ಸ್ವಯಂಭುವಃ = ಬ್ರಹ್ಮದೇವರಿಂದ, ವರಃ=ಅಮೃತಪ್ರಾಪ್ತಿರೂಪವಾದ ವರವು, ಆರಿತಃ=ಉಂಟಾಯಿತು. ತೇನ=ಆ ಕಾರಣದಿಂದ, ಭವಾನ್=ನೀನು, ಅಸ್ಯ=ಈ ರಾಹುವಿನ, ಕರೇ=ಕೈಯ್ಯಲ್ಲಿ, ಬಿಂದುಂ=ಬಿಂದುಮಾತ್ರ, ಸುಧಾಂ = ಅಮೃತವನ್ನು, ಪ್ರಾಸ್ಯ=ಇಟ್ಟು, ರಾಹೋಃಶಿರಃ=ರಾಹುವಿನ ತಲೆಯನ್ನು, ಜಹಾರ=ಛೇದಿಸಿದಿ, ಹಿ=ಇದು ಪ್ರಸಿದ್ಧವು.

ಅವತಾರಿಕೆ.—ರಾಹುವಿನ ಪರಿಣಾಮವೇನಾಯಿತೆಂಬುದನ್ನು ಹೇಳುತ್ತಾರೆ.—

**ಶ್ಲೋಕ ॥ ಶಿರಸ್ತು ತಸ್ಯಗ್ರಹತಾಮವಾಪ । ಸುರೈಃ ಸಮಾವಿಷ್ಟಮಥೋಸಬಾಹುಃ ॥ ಕ್ಷಿಪ್ತಃಕಬಂಧೋಸ್ಯ ಶುಭೋದಸಾಗರೇ ತ್ವಯಾಸ್ಥಿತೋದ್ಯಾಪಿಹಿ ತತ್ರಸಾಮೃತಃ ॥೩೧॥**

ಅರ್ಥ.—ಸುರೈಃ=ದೇವತೆಗಳಿಂದ, ಸಮಾವಿಷ್ಟಂ=ಪ್ರವಿಷ್ಟವಾದ, ತಸ್ಯ=ಆ ರಾಹುವಿನ, ಶಿರಸ್ತು=ತಲೆಯಾದರೋ, ಗ್ರಹತಾಂ-ಗ್ರಹತ್ವವನ್ನು ಅವಾಪ=ಹೊಂದಿತು. ಅಥ-ಅನಂತರದಲ್ಲಿ, ತ್ವಯಾ=ನಿನ್ನಿಂದ, ಶುಭೋದಸಾಗರೇ=ಶುಭ-ಸ್ವಾದುವಾದ, ಉದ=ಉದಕಗಳುಳ್ಳ, ಸಾಗರೇ=ಸಮುದ್ರದಲ್ಲಿ, ಸಬಾಹುಃ=ಬಾಹುವಿನಿಂದ ಕೂಡಿದ, ಅಸ್ಯ = ಈ ರಾಹುವಿನ, ಕಬಂಧಃ=ಮುಂಡವು (ತಲೆಯಿಲ್ಲದ ದೇಹ) ಕ್ಷಿಪ್ತಃ - ಎಸೆಯಲ್ಪಟ್ಟಿತು, ಯಾವಕಾರಣದಿಂದ ಆ ಕಬಂಧವು, ಸಾಮೃತಃ=ಅಮೃತದಿಂದ ಸಹಿತವಾಗಿದೆಯೋ ಆ ಕಾರಣದಿಂದ, ಅದ್ಯಾಪಿ-ಈಗಲೂಕೂಡ, ತತ್ರ=ಆ ಸ್ವಾದೋದಕ ಸಮುದ್ರದಲ್ಲಿ, ಸ್ಥಿತಃ=ಇರುತ್ತದೆ.

**ಶ್ಲೋಕ ॥ ಅಥಾಸುರಾಃ ಪ್ರತ್ಯಪತನ್ನುದಾಯುಧಾಃ । ಸಮಸ್ತ ಶಸ್ತೇಚಹತಾ ಸ್ತ್ವಯಾರಣೇ ॥ ಕಲಿಸ್ತು ಸಬ್ರಹ್ಮವರಾದಜೇಯೋ । ಋತೇಭ ವಂತಂ ಪುರುಷೇಷು ಸಂಸ್ಥಿತಃ ॥೩೨॥**

ಅರ್ಥ.- ಅಥ=ಅನಂತರದಲ್ಲಿ, ಅಸುರಾಃ=ದೈತ್ಯರು, ಉದಾಯು ಧಾಃ=ಮೇಲಕ್ಕೆತ್ತಲ್ಪಟ್ಟ ಆಯುಧ ಉಳ್ಳವರಾಗಿ, ಪ್ರತ್ಯಪತನ-ಎದುರಾಗಿ ಬಂದರು. ತೇಸಮಸ್ತಶಃ=ಅವರೆಲ್ಲರೂ, ತ್ವಯಾ=ನಿನ್ನಿಂದ, ರಣೇ – ಯು ದ್ಧರಂಗದಲ್ಲಿ, ಹತಾಃ=ಸಂಹರಿಸಲ್ಪಟ್ಟರು. ಬ್ರಹ್ಮವರಾತ್=ಬ್ರಹ್ಮದೇವರ ವರಬಲದಿಂದ, ಭವಂತಂಯತೇ=ನಿನ್ನ ಹೊರತು, ಅಜೇಯಃ=ಜಯಿಸಲಿಕ್ಕೆ ಅಶಕ್ಯನಾದ ಸರ್ವ ಜಗತ್ತಿನಲ್ಲಿಯೂ ವ್ಯಾಪಿಸಿಕೊಂಡಿರುವ, ಸಃ-ಆ, ಕಲಿಸ್ತು-ಕಲಿಯಾದರೋ, ಪುರುಷೇಷು-ಮನುಷ್ಯರಲ್ಲಿಯೂ, ಋದ್ರಾದಿ ದೇವತೆಗಳಲ್ಲಿಯೂ, ಸಂಸ್ಥಿತಾಃ=ಇರುವವನಾಗಿದ್ದಾನೆ.

**ಶ್ಲೋಕ ॥ ತಸ್ಯಾರ್ಧದೇಹಾಸಮಭೂದಲಕ್ಷ್ಮೀ । ಸ್ತತ್ಪುತ್ರಕಾ ದೋಷಗಣಾ ಶ್ಚ ಸರ್ವಶಃ ॥ ಅಥೇಂದಿರಾವಕ್ಷಸಿತೇ ಸಮಾಸ್ಥಿತಾ । ತ್ವತ್ಕಂಠಗಂ ಕೌಸ್ತುಭಮಾಸಧಾತಾ ॥೩೩॥**

ಅರ್ಥ.— ಅಲಕ್ಷ್ಮೀಃ-ದಾರಿದ್ರ್ಯಾದಿ ದೋಷಾಭಿಮಾನಿಯಾಗಿರುವು ದರಿಂದ ಅಲಕ್ಷ್ಮೀನಾಮಕಳು, ತಸ್ಯ=ಆ ಕಲಿಗೆ, ಅರ್ಧದೇಹಾ=ಅರ್ಧಾಂ ಗಿಯಾಗಿ (ಹೆಂಡತಿ) ಸಮಭೂತ್=ಆದಳು. ದೋಷಗಣಾಶ್ಚ ಸರ್ವಶಃ-ಕಾ ಮಾದಿ ಅರಿಷಡ್ವರ್ಗಗಳಿಗೆ ಅಭಿಮಾನಿಗಳಾವ ದೈತ್ಯರ ಸಮೂಹಗಳೆಲ್ಲಾ, ತತ್=ಆ ಕಲಿಗೆ, ಪುತ್ರಕಾಃ=ಮಕ್ಕಳಾದರು, ಅಥ=ಅನಂತರದಲ್ಲಿ, ಇಂ ದಿರಾ=ಶ್ರೀಮಹಾಲಕ್ಷ್ಮೀದೇವಿಯು ರು, ತೇ-ನಿನ್ನ, ವಕ್ಷಸಿ = ವಕ್ಷಸ್ಥಳದಲ್ಲಿ (ಎದೆಯಮೇಲೆ) ಸಮಾಸ್ಥಿತಾ – ಆಶ್ರಯವನ್ನು ಹೊಂದುವವಳಾದಳು. ಧಾತಾ=ಬ್ರಹ್ಮದೇವರು, ತ್ವತ್=ನಿನ್ನ, ಕಂಠಗಂ = ಕುತ್ತಿಗೆಯಲ್ಲಿರತಕ್ಕ, ಕೌಸ್ತುಭಂ=ಕೌಸ್ತುಭಮಣಿಗೆ, ಆಸ=ಅಭಿಮಾನಿಯಾದನು.

**ಶ್ಲೋಕ ॥ ಯಥಾವಿಭಾಗಂಚ ಸುರೇಷುದತ್ತಾ । ಸ್ತ್ವಯಾತಥಾನ್ಯೇಪಿಹಿತ ತ್ರಜಾತಾಃ ॥ ಇತ್ಥಂತ್ವಯಾಸಾಧ್ವಮೃತಂಸುರೇಷು । ದತ್ತಂ ಹಿ ಮೋಕ್ಷಸ್ಯ ನಿದರ್ಶನಾಯ ॥೩೪॥**

ಅರ್ಥ.-ತತ್ರ=ಕ್ಷೀರಾಬ್ಧಿಯಲ್ಲಿ, ಜಾತಾಃ-ಹುಟ್ಟಿದ, ಅನ್ಯೇ=ಇತರ ವಾದ ( ಲಕ್ಷ್ಮೀ, ಕೌಸ್ತುಭ, ಅಮೃತ ಇವುಗಳ ಹೊರತು ) ಪದಾರ್ಥ

ಗಳು, ತ್ವಯಾ-ನಿನ್ನಿಂದ, ಸುರೇಷು-ದೇವತೆಗಳಿಗೆ, ಯಥಾ = ಯಾವ ರೀತಿಯಲ್ಲಿ, ವಿಭಾಗಂ=ವಿಭಾಗವನ್ನು ಅತಿಕ್ರಮಿಸದೆ, ದತ್ತಾಃ=ಕೊಡಲ್ಪಟ್ಟವು, ಹಿ=ಈ ವಿಭಾಗವು ಶಾಸ್ತ್ರ ಪ್ರಸಿದ್ಧಿಯು (ಏನೆಂದರೆ:—ಯಾರಿಗೆ ಅಮೃತವು ಕೊಡಲ್ಪಡುತ್ತದೆಯೋ ಅವರಿಗೆ ಮೋಕ್ಷವು) ಇತ್ಥಂ=ಹೀಗೆ ಸರಿ ಎಂಬುವುದನ್ನು, ನಿದರ್ಶನಾಯ-ತೋರಿಸುವುದಕ್ಕಾಗಿ, ತ್ವಯಾ-ನಿನ್ನಿಂದ, ಸಾಧ್ವಮೃತಂ=ರುಚಿಕರವಾದ ಅಮೃತವು, ಸುರೇಷು=ದೇವತೆಗಳಿಗೆ, ದತ್ತಂ=ಕೊಡಲ್ಪಟ್ಟಿತು.

**ಶ್ಲೋಕ || ಭವೇದ್ಧಿಮೋಕ್ಷೋನಿಯತಂ ಸುರಾಣಾಂ | ನೈವಾಸುರಾಣಾಂ ಸ ಕಥಂಚನಸ್ಯಾತ್ || ಉತ್ಸಾಹಯುಕ್ತಸ್ಯಚ ತತ್ಪ್ರತೀಪಂ | ಭವೇದ್ಧಿ ರಾಹೋರಿವದುಃಖರೂಪಂ ||೩೫||**

ಅರ್ಥ.—ಹಿ=ಯಾವ ಕಾರಣದ್ದೆಶೆಯಿಂದ, ಸುರಾಣಾಂ=ದೇವತೆಗಳಿಗೆ, ಮೋಕ್ಷಃ=ಮೋಕ್ಷವು, ನಿಯತಂ-ಸಿದ್ಧವಾಗಿರುವುದೋ (ಆದ್ದರಿಂದಲೇ ಅವರಿಗೆ ಅಮೃತವು ಕೊಡಲ್ಪಟ್ಟಿತು) ಅಸುರಾಣಾಂ=ದೈತ್ಯರಿಗೆ, ಕಥಂಚನ=ಯಾವ ಉಪಾಯದಿಂದಲೂ, ನಸ್ಯಾತ್=ಆಗಲಾರದೋ (ಆದ್ದರಿಂದಲೇ ಅವರಿಗೆ ಅಮೃತವಿಲ್ಲ.) ಉತ್ಸಾಹಯುಕ್ತಸ್ಯ=ಮೋಕ್ಷಪ್ರಾಪ್ತಿಗೆ ಅಸುರರು ಪ್ರಯತ್ನಿಸಿದರೆ, ತತ್=ಆ, ಪ್ರತೀಪಂ=ಕರ್ಮವು, ರಾಹೋರಿವ=ಅಮೃತ ಪ್ರಾಪ್ತಿಗಾಗಿ ರಾಹುವಿನಿಂದ ಮಾಡಲ್ಪಟ್ಟ ತಪಸ್ಸು ಹೇಗೆ, ದುಃಖರೂಪಂ=ದುಃಖಕ್ಕೆ ಕಾರಣವಾಯಿತೋ ಹಾಗೆ ಮೋಕ್ಷಪ್ರಾಪ್ತಿಗೂ ವಿರೋಧವಾಗಿಯೇ, ಭವೇತ್=ಆಗುವದು, ಹಿ=ಇದು ಸಿದ್ಧ.

**ಶ್ಲೋಕ || ಕಲಿಃ ಸ್ವಯಂಬ್ರಹ್ಮವರಾದಿದಾನೀಂ | ವಿಬಾಧತೇಸ್ಮಾನ್ಸಕಲಾಃ (ಲಾರ್) ಪ್ರಜಾಶ್ಚ || ಅಜ್ಞಾನ ಮಿಥ್ಯಾಮತಿರೂಪತೋ ಸೌ ಪ್ರವಿಶ್ಯ ಸಜ್ಞಾನ ವಿರುದ್ಧರೂಪಃ ||೩೬||**

ಅರ್ಥ.—ಸಜ್ಞಾನ=ಸಚ್ಛಾಸ್ತ್ರ ಜ್ಞಾನಕ್ಕೆ, ವಿರುದ್ಧರೂಪಃ=ವಿರೋಧಸ್ವಭಾವವುಳ್ಳ, ಸ್ವಯಂಕಲಿಃ=ಈ ಕಲಿಯು, ಅಸ್ಮಾನ್‌ಸಕಲಾರ್=ನಮ್ಮೆಲ್ಲರನ್ನೂ, ಅಜ್ಞಾನ=ಅಭಾವರೂಪ ಜ್ಞಾನದಿಂದಲೂ, ಮಿಥ್ಯಾಮತಿರೂಪತಃ=ವಿಪರೀತ ಜ್ಞಾನದಿಂದ ಮನಸ್ಸನ್ನು ಕೆಡಿಸಿ, ಕೆಲವುವೇಳೆ, ಇದಾನೀಂ ವರಾತ್-ಬ್ರಹ್ಮದೇವರ ವರಬಲದಿಂದ, ಪ್ರಜಾಶ್ಚ=ಪ್ರಜೆಗಳಲ್ಲಿ, ಪ್ರವಿಶ್ಯ=ಪ್ರವೇಶಿಸಿ, ವಿಬಾಧತೇ=ವಿಶೇಷಾಕಾರವಾಗಿ ಬಾಧಿಸುತ್ತಾನೆಯೋ ಸ್ವಾಮಿ

ಶ್ಲೋಕ ॥ ತ್ವದಾಜ್ಞಯಾತಸ್ಯ ವರೋಽಬ್ಜಜೇನ । ದತ್ತಃ ಸ ಆವಿಶ್ಯ ಶಿವಂಚಕಾರ ॥ ಕದಾಗಮಾಂಸ್ತಸ್ಯ ಕುಯುಕ್ತಿಬಾಧಾನ್ । ನಹಿತ್ವದನ್ಯಶ್ಚರಿತುಂ ಸಮರ್ಥಃ ॥೩೭॥

ಅರ್ಥ.—ತ್ವತ್=ನಿನ್ನ, ಆಜ್ಞಯಾ-ಅಪ್ಪಣೆಯಿಂದಲೇ, ತಸ್ಯ=ಆ ಕಲಿಗೆ, ಅಬ್ಜಜೇನ-ಬ್ರಹ್ಮದೇವರಿಂದ, ವರಃ=ವರವು, ದತ್ತಃ=ಕೊಡಲ್ಪಟ್ಟಿದೆ. ಸಃ=ಆ ಕಲಿಯು, ಶಿವಂ=ರುದ್ರನಲ್ಲಿ, ಆವಿಶ್ಯ=ಪ್ರವಿಷ್ಟನಾಗಿ, ಕದಾಗಮಾಂ=ಕುತ್ಸಿತಗಳಾದ ಶಿವಸರ್ವೋತ್ತಮ ಶಾಸ್ತ್ರಗಳನ್ನು, ಚಕಾರ=ಮಾಡಿದನು. ತಸ್ಯ=ಆ ಕಲಿಯ, ಕುಯುಕ್ತಿಬಾಧಾಂ=ಕುಹಕಯುಕ್ತಿಗಳಿಗೆ ನಿರಾಕರಣೆಯನ್ನು, ಚರಿತುಂ=ಮಾಡುವುದಕ್ಕೆ, ತ್ವದನ್ಯಃ=ನಿನ್ನ ಹೊರತು ಮತ್ತೊಬ್ಬನು, ನಸಮರ್ಥಃ-ಸಮರ್ಥನಾಗಲಾರನು, ಹಿ-ಇದು ನಿಜವು

ಶ್ಲೋಕ ॥ ವೇದಾಶ್ಚ ಸರ್ವೇಸಹಶಾಸ್ತ್ರ ಸಂಘಾ । ಉತ್ಸಾದಿತಾಸ್ತೇನನಸಂತಿತೇಽದ್ಯ ॥ ತತ್ಸಾಧುಭೂಮಾವವತೀರ್ಯವೇದಾ । ನುದ್ಧೃತ್ಯಶಾಸ್ತ್ರಾಣಿ ಕುರುಷ್ವಸಮ್ಯಕ್ ॥೩೮॥

ಅರ್ಥ.—ಸಹಶಾಸ್ತ್ರಸಂಘಾಃ-ಪಂಚರಾತ್ರಾಗಮ, ಮೂಲರಾಮಾಯಣ ಇವೇ ಮೊದಲಾದ ಸತ್‌ಶಾಸ್ತ್ರಗಳಸಮೂಹದಿಂದ ಕೂಡಿದ, ಸರ್ವೇ ಸಮಸ್ತವಾದ, ವೇದಾಶ್ಚ=ವೇದಗಳೂ, ತೇನ=ಆ ಕಲಿಯಿಂದಲೇ ಉತ್ಸಾದಿತಾಃ-ಕೆಡಿಸಲ್ಪಟ್ಟಿವೆ. ತೇ=ಆ ವೇದಗಳು, ಅದ್ಯ=ಈಗ, ನಸಂತಿ=ಇರುವದಿಲ್ಲ. ತತ್=ಆ ಕಾರಣದಿಂದ, ಸಾಧುಭೂಮೌ=ಪುಣ್ಯಕ್ಕೆ ಕಾರಣವಾದ ಈ ಕರ್ಮಭೂಮಿಯಲ್ಲಿ, ಅವತೀರ್ಯ-ಅವತಾರಮಾಡಿ, ವೇದಾ=ವೇದಗಳನ್ನು, ಪಂಚರಾತ್ರಾಗಮಾದಿಗಳನ್ನೂ ಉದ್ಧಾರಮಾಡಿ, ಶಾಸ್ತ್ರಾಣಿ=ಬ್ರಹ್ಮಸೂತ್ರ, ಭಾರತ, ಪುರಾಣಾದಿ ಶಾಸ್ತ್ರಗಳನ್ನು, ಸಮ್ಯಕ್=ಚೆನ್ನಾಗಿ, ಕುರುಷ್ವ=ಮಾಡುವವನಾಗು (ಸಂಶಯ ವಿಪರ್ಯಯಗಳು ಬಾರದಂತೆ ಅನುಗ್ರಹಮಾಡು.)

ತಾತ್ಪರ್ಯ.—ಸಕಲ ವೇದಗಳೂ, ಪಾಂಚರಾತ್ರಾದ್ಯಾಗಮಗಳೂ ಆ ಕಲಿಯಿಂದಲೇ ಅಪಾರ್ಥಾದಿಗಳಿಂದ ಭ್ರಂಶವಾಗಿ ಹೋಗಿವೆ. ನೀನು ಈ

ಕರ್ಮಭೂಮಿಯಲ್ಲಿ ಅವತರಿಸಿದ ವೇದಗಳೂ, ಹಾಗೂ ಪಾಂಚರಾತ್ರಾಗಮಾದಿಗಳೂ, ಬ್ರಹ್ಮಸೂತ್ರ, ಭಾರತ, ಭಾಗವತ, ಪುರಾಣಾದಿಗಳನ್ನು ರಚಿಸಿ, ಸಜ್ಜನರಿಗೆ ಬಂದಿರುವ ಸಂಶಯ ಜ್ಞಾನಾದಿಗಳನ್ನು ಪರಿಹರಿಸು.

**ಶ್ಲೋಕ || ಅದೃಶ್ಯಮಜ್ಞೇಯಮತರ್ಕ್ಯರೂಪಂ | ಕಲಿಂನಿಲೀನಂ ಹೃದಯೇಖಿಲಸ್ಯ || ಸಚ್ಛಾಸ್ತ್ರ ಶಸ್ತ್ರೇಣ ನಿಹತ್ಯ ಶೀಘ್ರಂ | ಪದಂನಿಜಂದೇಹಿ ಮಹಾಜನಸ್ಯ ||೩೯||**

ಅರ್ಥ.—ಅದೃಶ್ಯಂ=ದೃಷ್ಟಿಗೆ ಅಗೋಚರನಾಗಿಯೂ, ಅಜ್ಞೇಯಂ-ಎಲ್ಲಿದ್ದಾನೆಂದು ತಿಳಿಯಲು ಅಶಕ್ಯನಾಗಿಯೂ, ಅತರ್ಕ್ಯರೂಪಂ-ಊಹೆ ಮಾತ್ರದಿಂದ ಇಂತಹ ರೂಪವುಳ್ಳವನೆಂದು ನಿರ್ಧರಿಸಲು ಅಶಕ್ಯನಾಗಿಯೂ, ಅಖಿಲಸ್ಯ=ಎಲ್ಲರ, ಹೃದಯೇ=ಮನಸ್ಸಿನಲ್ಲಿ, ನಿಲೀನಂ=ಗೋಪ್ಯವಾಗಿರುವ ಕಲಿಂ–ಕಲಿಯನ್ನು, ಸಚ್ಛಾಸ್ತ್ರ-ನಿರ್ದೋಷವಾದ ಶಾಸ್ತ್ರವೆಂಬ, ಶಸ್ತ್ರೇಣ-ಶಸ್ತ್ರದಿಂದ, ಶೀಘ್ರಂ=ಜಾಗ್ರತೆಯಲ್ಲಿಯೇ, ನಿಹತ್ಯ-ಸಂಹರಿಸಿ, ಮಹಾಜನಸ್ಯ=ನಿನ್ನ ಭಕ್ತಗುಗಳಿಗೆ, ನಿಜಂ-ಅವರವರಿಗೆ ಯೋಗ್ಯವಾದ, ಪದಂ=ಪದವಿಯನ್ನು, ದೇಹಿ=ಕೊಡು.

**ಶ್ಲೋಕ || ಋತೇ ಭವಂತಂ ನಹಿತಂ ನಿಹಂತಾ | ತ್ವಮೇಕ ಏವಾಖಿಲಶಕ್ತಿಪೂರ್ಣಃ || ತತೋಭವಂತಂ ಶರಣಂಗತಾವಯಂ | ತಮೋನಿಹತ್ಯೈ ನಿಜಬೋಧವಿಗ್ರಹಂ ||೪೦||**

ಅರ್ಥ.—ಭವಂತಂ-ನಿನ್ನ, ಋತೇ-ಹೊರತು, ತಂ – ಕಲಿಯನ್ನು, ನಿಹಂತಾ=ಸಂಹರಿಸುವವನು, ನಹಿ-ಇಲ್ಲವೇ ಇಲ್ಲ. ಅಖಿಲಶಕ್ತಿಪೂರ್ಣ=ಸಮಸ್ತ ಶಕ್ತಿಯಿಂದ ಪೂರ್ಣನಾದವನು, ತ್ವಂಏಕಏವ = ನೀನೊಬ್ಬನೇ ಅಲ್ಲವೇ ? ತತಃ-ಆದ್ದರಿಂದ, ವಯಂ – ನಾವುಗಳು, ತಮೋನಿಹತ್ಯೈ-ಅಜ್ಞಾನವೆಂಬ ಕತ್ತಲನ್ನು ನಾಶಮಾಡುವುದಕ್ಕಾಗಿ, ನಿಜಬೋಧವಿಗ್ರಹಂ-ಶರೀರವಾಗಿವುಳ್ಳ, ಭವಂತಂ-ನಿನ್ನನ್ನು, ಶರಣಂ=ರಕ್ಷಕನನ್ನಾಗಿ, ಗತಾಃ=ಹೊಂದಿರುತ್ತೇವೆ.

**ಶ್ಲೋಕ || ಇತೀರಿತಸ್ತೈರಭಯಂ ಪ್ರದಾಯ ಸುರೇಶ್ವರಾಣಾಂ ಪರಮೋಪ್ರಮೇಯಃ || ಪ್ರಾದುರ್ಬಭೂವಾವ್ಯತಭೂರಿಲಾಯಾಂ | ವಿಶುದ್ಧ ವಿಜ್ಞಾನಘನ ಸ್ವರೂಪಃ ||೪೧||**

ಅರ್ಥ.— ಇತಿ-ಈ ಪ್ರಕಾರವಾಗಿ, ತೈಃ=ಆ ದೇವತೆಗಳಿಂದ, ಈರಿತಃ=ಹೇಳಿಸಿಕೊಳ್ಳಲ್ಪಟ್ಟಂಥಾ, ಪರಮಃ=ಸರ್ವೋತ್ತಮನಾದ, ಅಪ್ರಮೇಯಃ - ಸಾಕಲ್ಯೇನ ತಿಳಿಯುವುದಕ್ಕೆ ಅಶಕ್ಯನಾದಂಥ, ಅಮೃತ-ಕ್ಷಯರಹಿತವಾದ ಆನಂದಾದಿ ಗುಣಗಳಿಗೆ, ಭೂಃ-ಆಶ್ರಯನಾದಂಥ, (ಅಥವಾ, ಅಮೃತ=ಮುಕ್ತರಿಗೆ, ಭೂಃ-ಆಶ್ರಯನಾದಂಥಾ) ವಿಶುದ್ಧ - ಈಷದಪಿ ಅಜ್ಞಾನರಹಿತವಾದ, ವಿಜ್ಞಾನ=ವಿಶೇಷವಾದ ಜ್ಞಾನದಿಂದ ಘನಪೂರ್ಣವಾದ, ಸ್ವರೂಪಃ-ಸ್ವರೂಪವುಳ್ಳ ಶ್ರೀಹರಿಯು, ಸುರೇಶ್ವರಾಣಾಂ-ಆ ದೇವಶ್ರೇಷ್ಠರುಗಳಿಗೆ, ಅಭಯಂ=ಅಭಯವನ್ನು, ಪ್ರದಾಯ=ಕೊಟ್ಟು, ಇಲಾಯಾಂ-ಈ ಭೂಮಂಡಲದಲ್ಲಿ, ಪ್ರಾದುರ್ಬಭೂವ=ಆವಿರ್ಭೂತನಾದನು. (ಅವತಾರಮಾಡಿದನು)

**ಶ್ಲೋಕ || ವಸಿಷ್ಠನಾಮಾ ಕಮಲೋದ್ಭವಾತ್ಮಜಃ | ಸುತೋಸ್ಯ ಶಕ್ತಿ ಸ್ತನಯಃ ಪರಾಶರಃ || ತಸ್ಯೋತ್ತಮಂಸೋಽಪಿ ತಪೋಽಚರದ್ಧರಿಃ | ಸುತೋಮಮಸ್ಯಾದಿತಿತದ್ದರಿರ್ದದೌ ||೪೨||**

ಅರ್ಥ.— ವಸಿಷ್ಠ=ವಸಿಷ್ಠನೆಂದು, ನಾಮಾ=ಹೆಸರುಳ್ಳವನು, ಕಮಲೋದ್ಭವಸ್ಯ-ಬ್ರಹ್ಮದೇವರ, ಆತ್ಮಜಃ=ಮಗನು, ಅಸ್ಯ=ಈ ವಸಿಷ್ಠನ, ಸುತಃ=ಮಗನು, ಶಕ್ತಿಃ-ಶಕ್ತಿ ಎಂಬಾತನು, ತಸ್ಯ-ಆ ಶಕ್ತಿಯ, ತನಯಃ =ಮಗನು, ಪರಾಶರಃ=ಪರಾಶರರು, ಸಃ=ಆ ಪರಾಶರರು, ಹರಿರಪಿ=ಶ್ರೀಹರಿಯೇ, ಮಮ=ನನಗೆ, ಸುತಃ=ಮಗನು, ಸ್ಯಾತ್-ಆಗಲಿ, ಇತಿ-ಈ ರೀತಿಯಾಗಿ, ಉತ್ತಮಂ=ಶ್ರೇಷ್ಠನಾದ, ತಪಃ=ಶ್ರೀಹರಿಯನ್ನು ಕುರಿತು ತಪಸ್ಸನ್ನು, ಆಚರತ್-ಮಾಡಿದರು, ಹರಿಃ=ಶ್ರೀಪರಮಾತ್ಮನು, ತತ್= ಅವರ ಅಭೀಷ್ಟವನ್ನು, ದದೌ=ನೆರವೇರಿಸಿದನು.

**ಶ್ಲೋಕ || ಉವಾಚ ಚೈನಂ ಭಗವಾನ್ಸುತೋಷಿತೋ | ವಸೋರ್ಮದೀಯಸ್ಯ ಸುತಾಸ್ತಿ ಶೋಭನಾ || ವನೇಮೃಗಾರ್ಥಂ ಚರತೋಸ್ಯವೀರ್ಯಂ | ಪಪಾತಭಾರ್ಯಾಂ ಮನಸಾಗತಸ್ಯ ||೪೩||**

ಅರ್ಥ.— ಸುತೋಷಿತಃ-ಚೆನ್ನಾಗಿ ಸಂತೋಷಿತನಾದ (ಸಂತುಷ್ಟನಾದ) ಭಗವಾರ್ - ಷಡ್ಗುಣೈಶ್ವರ್ಯ ಸಂಪನ್ನನಾದ ಶ್ರೀನಾರಾಯಣನು, ಏನಂ=ಪರಾಶರರನ್ನು ಕುರಿತು, ಮದೀಯಸ್ಯ=ನನ್ನ ಭಕ್ತನಾದ, ವಸೋಃ

ವಸುರಾಜನಿಗೆ, ಸುಶೋಭನಾ=ಬಹು ಪುಣ್ಯಶಾಲಿಯಾದ, ಸುತಾ=ಮಗಳು ಅಸ್ತಿ=ಇದ್ದಾಳೆ. ವನೇ=ಕಾಡಿನಲ್ಲಿ, ಮೃಗಾರ್ಥಂ=ಬೇಟೆಗೋಸ್ಕರ, ಚರತಃ=ಸಂಚರಿಸುತ್ತಿರುವಾಗ, ಭಾರ್ಯಾಂ=ಹೆಂಡತಿಯನ್ನು, ಮನಸಾ=ಮನಸ್ಸಿನಲ್ಲಿ, ಆಗತಃ=ಸ್ಮರಿಸಿಕೊಂಡ, ಅಸ್ಯ-ಈ ವಸುರಾಜನ, ವಿರ್ಯಂ=ರೇತಸ್ಸು, ಪಪಾತ=ಕೆಳಗೆ ಬಿತ್ತು.

**ಶ್ಲೋಕ ॥ ತಚ್ಛ್ಯೇನಹಸ್ತೇ ಪ್ರದದೌ ಸತಸ್ಯೈ । ದಾತುಂತದನ್ಯೇನತುಯುಧ್ಯತೋ ಪತತ್ ॥ ಜಗ್ರಾಸ ತನ್ಮತ್ಸ್ಯವಧೂರ್ಯಮಸ್ವಸು ।। ಜಲಸ್ಥಮೇನಾಂ ಜಗೃಹುಃಸ್ಮದಾಶಾಃ ॥೪೪॥**

ಅರ್ಥ.—ಸಃ=ಆ ವಸುರಾಜನು, ತತ್-ಆ ವೀರ್ಯವನ್ನು, ತಸ್ಯೈ=ತನ್ನ ಹೆಂಡತಿಗೆ, ದಾತುಂ=ಕೊಡುವದಕ್ಕಾಗಿ, ಶ್ಯೇನ= ಒಂದು ಗಿಡುಗನ, ಹಸ್ತೇ-ಕೈಯ್ಯಲ್ಲಿ, (ವಶಕ್ಕೆ) ಪ್ರದದೌ=ಕೊಟ್ಟನು, ದಾರಿಯಲ್ಲಿ, ಅನ್ಯೇನತು-ಮತ್ತೊಂದು ಗಿಡುಗನ ಜೊತೆಯಲ್ಲಿ, ಯುಧ್ಯತಃ=ಜಗಳವಾಡುತ್ತಿರುವಾಗ, ತತ್=ಆ ವೀರ್ಯವು, ಆಪತತ್=ಯಮುನಾಜಲದಲ್ಲಿ ಬಿದ್ದಿತು. ಯಮಃ-ಯಮರಾಜನ ಸ್ವಸುಃ=ತಂಗಿಯಾದ ಆ ಯಮುನಾನದಿಯಲ್ಲಿ ಬಿದ್ದ ತತ್=ಆ ವಿರ್ಯವನ್ನು ಮತ್ಸ್ಯವಧೂ=ಒಂದು ಹೆಣ್ಣುಮೀನು ಜಗ್ರಾಸ=ನುಂಗಿತು. ಜಲಸ್ಥಂ - ನೀರಿನಲ್ಲಿದ್ದ ಏನಾಂ-ಈ ಹೆಣ್ಣುಮೀನನ್ನು ದಾಶಃ-ಬೆಸ್ತರು ಜಗೃಹುಃಸ್ಮ-ಹಿಡಿದರು.

**ಶ್ಲೋಕ ॥ ತದ್ಗರ್ಭತೋ ಭೂನ್ಮಿಥುನಂ ಸ್ವರಾಜ್ಞೇ । ನ್ಯವೇದಯನ್ಸೋಪಿ ವಸೋಃ ಸಮರ್ಪಯತ್ ॥ ಪುತ್ರಂಸಮಾದಾಯ ಸುತಾಂಸತಸ್ಮೈ । ದದೌ ಸುತೋಭೂದಹಥ ಮತ್ಸ್ಯರಾಜಃ ॥೪೫॥**

ಅರ್ಥ.—ತತ್=ಆ ಹೆಣ್ಣುಮೀನಿನ, ಗರ್ಭತಃ=ಗರ್ಭದಿಂದ, ಮಿಥುನಂ-ಒಂದು ಗಂಡು ಒಂದು ಹೆಣ್ಣುಮಗುವು, ಅಭೂತ್=ಆದವು. ಆ ಬೆಸ್ತರು, ಸ್ವ-ತಮಗೆ ರಾಜ್ಞೇ=ಸ್ವಾಮಿಯಾದ ದಾಶರಾಜನಿಗೆ ಆ ಎರಡು ಮಕ್ಕಳನ್ನು, ನ್ಯವೇದಯತ್-ಅರ್ಪಿಸಿದರು. ಸೋಪಿ-ಆ ದಾಶರಾಜನಾದರೋ ಆ ಎರಡು ಮಕ್ಕಳನ್ನು, ವಸೋಃ-ವಸುರಾಜನಿಗೆ, ಸಮರ್ಪಯತ್=ಸಮರ್ಪಿಸಿದನು. ಸಃ=ಆ ವಸುರಾಜನು, ಪುತ್ರಂ=ಆ ಗಂಡುಮಗುವನ್ನು, ತಾನು, ಸಮಾದಾಯ=ಇಟ್ಟುಕೊಂಡು, ಸುತಾಂ=ಆ ಹೆಣ್ಣುಮ

ಗುವನ್ನು, ತಸ್ಮೈ-ಆ ದಾಶರಾಜನಿಗೆ, ದದೌ=ಕೊಟ್ಟನು. ಅಥ=ಆ ಕಾರಣದ್ದೆಶೆಯಿಂದ, ಸುತಃ=ಆ ವಸುರಾಜನ ಮಗನು, ಮತ್ಸ್ಯರಾಜಃ=ಮೀನಿನ ಸಂಬಂಧಿಯಾದ ರಾಜನಿಗೆ (ಮೀನಿನ ಹೊಟ್ಟೆಯಲ್ಲಿ ಹುಟ್ಟಿದ್ದರಿಂದ) ಅಭೂತ್-ಆದನು.

**ಶ್ಲೋಕ ॥ ಕನ್ಯಾತುಸಾದಾಶ ರಾಜಸ್ಯ ಸದ್ಮ । ನ್ಯವರ್ಧತಾತೀವ ಸುರೂಪ ಯುಕ್ತಾ ॥ ನಾಮ್ನಾತು ಸಾ ಸತ್ಯವತೀತಿ ತಸ್ಯಾಂ । ತವಾತ್ಮಜೋಹಂ ಭವಿತಾಸ್ಮ್ಯಜೋಽಪಿ ॥೪೬॥**

ಅರ್ಥ.— ಸಾ=ಆ, ಕನ್ಯಾತು=ಹುಡುಗಿಯು, ದಾಶರಾಜಸ್ಯ-ದಾಶ ರಾಜನ, ಸದ್ಮನಿ=ಮನೆಯಲ್ಲಿ, ಅತೀವ=ಬಹು, ಸುರೂಪಯುಕ್ತಾ=ಸ್ಫುರದ್ರೂಪದಿಂದ ಕೂಡಿದವಳಾಗಿ, ಅವರ್ಧತಾ=ಬೆಳೆದಳು, ಸಾ=ವಸುರಾಜನ ಮಗಳಾದ ಆ ಹುಡುಗಿಯು, ನಾಮ್ನಾ-ಹೆಸರು, ಸತ್ಯವತೀ = ಸತ್ಯವತೀ, ಇತಿ-ಎಂಬುದಾಗಿ ಪ್ರಸಿದ್ಧಳು. ಅಹಂ=ನಾನು, ಅಜೋಽಪಿ=ಉತ್ಪತ್ತಿಶೂನ್ಯನಾಗಿದ್ದಾಗ್ಯೂ, ತಸ್ಯಾಂ=ಆ ಸತ್ಯವತೀದೇವಿಯಲ್ಲಿ, ತವ=ನಿನ್ನ, ಆತ್ಮಜಃ-ಮಗನಾಗಿ, ಭವಿತಾಸ್ಮಿ=ಅವತರಿಸುತ್ತೇನೆ.

**ಶ್ಲೋಕ ॥ ಇತೀರಿತಶ್ಚಕ್ರಧರೇಣ ತಾಂ ಮುನಿ । ರ್ಜಗಾಮ ಮಾರ್ತಾಂಡ ಸುತಾಂ ಸಮುದ್ರಗಾಂ ॥ ಉತ್ತಾರಯಂತೀಮಥ ತತ್ರ ವಿಷ್ಣುಃ । ಪ್ರಾದುರ್ಬಭೂವಾಶು ವಿಶುದ್ಧಚಿದ್ಘನಃ ॥೪೭॥**

ಅರ್ಥ.— ಇತಿ-ಈ ರೀತಿಯಾಗಿ, ಚಕ್ರಧರೇಣ-ಚಕ್ರಪಾಣಿಯಾದ ಸ್ವಾಮಿಯಿಂದ, ಈರಿತಃ-ಹೇಳಿಸಿಕೊಳ್ಳಲ್ಪಟ್ಟು, ಮುನಿಃ-ಆ, ಸಮುದ್ರಗಾಂ ಸಮುದ್ರಗಾಮಿನಿಯಾದ, ಮಾರ್ತಾಂಡ=ಸೂರ್ಯನ, ಸುತಾಂ - ಮಗಳಾದ ಯಮುನಾನದಿಯನ್ನು, ಉತ್ತಾರಯಂತೀ-ಜನರನ್ನು ದೋಣಿಯಲ್ಲಿ ದಾಟಿಸತಕ್ಕ, ತಾಂ-ಆ ಸತ್ಯವತಿಯನ್ನು, ಜಗಾಮ=ರಮಿಸಿದರು. ಅಥ =ಕ್ರೀಡಿಸಿದನಂತರದಲ್ಲಿ, ತತ್ರ=ಆ ಸತ್ಯವತೀದೇವಿಯಲ್ಲಿ, ವಿಶುದ್ಧ-ನಿರ್ಮಲವಾದ, ಚಿತ್=ಸದ್ಜ್ಞಾನದಿಂದ, ಘನಃ-ಪೂರ್ಣನಾದ ಶ್ರೀಹರಿಯು, ಆಶು -ತಕ್ಷಣದಲ್ಲಿಯೇ, ಪ್ರಾದುರ್ಬಭೂವ - ಆವಿರ್ಭವಿಸಿದನು.

ಅವತಾರಿಕೆ.— ಪರಮಾತ್ಮನಿಗೆ ನಮ್ಮಲ್ಲಿ ಶುಕ್ಲಶೋಣಿತ ಸಂಪರ್ಕ ಜನ್ಯದೇಹವಿಲ್ಲವೆಂದು ಹೇಳುತ್ತಾರೆ.—

**ಶ್ಲೋಕ ॥ ವಿದೋಷ ವಿಜ್ಞಾನ ಸುಖೈಕರೂಪೋ । ಹ್ಯಜೋ ಜನಾನ್ಮೋಹ ಯಿತುಂವ್ಯೃಷ್ವೈವ ॥ ಯೋಷಿತ್ಸುಪುಂಸೋಹ್ಯ ಜನೀವದೃಶ್ಯತೇ । ನ ಜಾಯತೇ ಕ್ವಾಪಿಬಲಾದಿ ವಿಗ್ರಹಃ ॥೪೯॥**

ಅರ್ಥ.—ವಿದೋಷ=ನಿರ್ದೋಷಗಳಾದ, ವಿಜ್ಞಾನ=ವಿಜ್ಞಾನಗಳೂ ಸುಖ=ಸೌಖ್ಯಗಳೂ, ಇವುಗಳೇ, ಏಕ=ಕೇವಲ; ರೂಪಃ - ರೂಪವಾಗಿ ಉಳ್ಳ ಶ್ರೀಹರಿಯು, ಅಜೋಪಿ=ಜನ್ಮರಹಿತನಾದಾಗ್ಯೂ, ಜನಾನ್-ಜನರನ್ನು, ಮೋಹಯಿತುಂ=ಭ್ರಾಂತಿಪಡಿಸುವುದಕ್ಕಾಗಿ, ವ್ಯೃಷ್ವೈವ-ಬೇಕೆಂದು, ಪುಂಸಃ=ಪುರುಷನ ದೆಸೆಯಿಂದ, ಯೋಷಿತ್ಸು=ಸ್ತ್ರೀಯರಲ್ಲಿ, ಅಜನೀವ=ಹುಟ್ಟಿದವನಂತೆ, ದೃಶ್ಯತೇ-ಕಾಣಿಸಿಕೊಳ್ಳುತ್ತಾನೆ. ಹಿ=ಆದಕಾರಣದ್ದೆಸೆಯಿಂದ, ಬಲಾದಿವಿಗ್ರಹಃ=ಬಲಾದಿ-ಜ್ಞಾನಾನಂದಾದಿ ಗುಣಗಳಿಗೆ ವಿಗ್ರಹಃ=ಶರೀರವಾಗಿ ಉಳ್ಳ ಶ್ರೀಹರಿಯು, ಕ್ವಾಪಿ=ಎಲ್ಲಿಯೂ ಯಾವ ಅವತಾರದಲ್ಲಿಯೂ, ನಜಾಯತೇ=ಹುಟ್ಟುವುದೇ ಇಲ್ಲ.

ಅವತಾರಿಕೆ.—ದೇವರ ಅವತಾರವು ಶುಕ್ಲಶೋಣಿತ ಸಂಬಂಧದ್ದಲ್ಲವೆಂದು ಸದೃಷ್ಟಾಂತಪೂರ್ವಕವಾಗಿ ಹೇಳುತ್ತಾರೆ.—

**ಶ್ಲೋಕ ॥ ಯಥಾನೃಸಿಂಹಾಕೃತಿರಾವಿರಾಸೀ । ತ್ಸಂಭಾತ್ತಥಾ ನಿತ್ಯತನುತ್ವತೋ ವಿಭುಃ ॥ ಅವಿರ್ಭವೇದ್ಯೋಷಿತಿನೋಮಲೋತ್ಥ । ಸ್ತಥಾಪಿ ಮೋಹಾಯ ನಿದರ್ಶಯೇತ್ತಥಾ ॥೫೯॥**

ಅರ್ಥ.—ಯಥಾ=ಹೇಗೆ, ನೃಸಿಂಹಾಕೃತಿಃ=ನೃಸಿಂಹರೂಪಿಯಾದ ಶ್ರೀಹರಿಯು, ಸ್ತಂಭಾತ್=ಕಂಭದ ದೆಸೆಯಿಂದ, ಆವಿರಾಸೀತ್=ಆವಿರ್ಭವಿಸಿದನೋ, ತಥಾ-ಹಾಗೆಯೇ, ವಿಭುಃ=ಸರ್ವತ್ರ ವ್ಯಾಪಕನಾದ ಶ್ರೀಹರಿಯು, ನಿತ್ಯ-ಎಂದಿಗೂ ನಾಶವಿಲ್ಲದ, ತನುತ್ವತಃ = ಸ್ವರೂಪವುಳ್ಳವನಾದ್ದರಿಂದ, ಯೋಷಿತಿ-ಸ್ತ್ರೀಯಲ್ಲಿ, ಆವಿರ್ಭವೇತ್=ಆವಿರ್ಭವಿಸಿದನು. ಮಲಶುಕ್ಲಶೋಣಿತಾಖ್ಯವಾದ ಕಶ್ಮಲದಿಂದ, ಉತ್ಥಃನ-ಹುಟ್ಟಿದವನಲ್ಲ, ತಥಾಪಿ=ಆದಾಗ್ಯೂ, ತಥಾ-ಮಲದಿಂದ ಹುಟ್ಟಿದವನಂತೆಯೇ, ಮೋಹಾಯ=ಮಿಥ್ಯಾಜ್ಞಾನ ಹುಟ್ಟುವದಕ್ಕೋಸ್ಕರವೇ, ನಿದರ್ಶಯೇತ್=ತೋರಿಸಿದ್ದಾನೆ

**ಶ್ಲೋಕ ॥ ಸ್ತ್ರೀಪುಂ ಪ್ರಸಂಗಾತ್ಪರತೋಯತೋಹರಿಃ । ಪ್ರಾದುರ್ಭವತ್ಯೇಷ ವಿಮೋಹಯನ್ಜನಂ ॥ ಅಥೋಮಲೋತ್ಥೋಯಮಿತಿಸ್ಮಮನ್ಯತೇ । ಜನೋಶುಭಃ ಪೂರ್ಣಗುಣೈಕವಿಗ್ರಹಂ ॥೫೦॥**

ಅರ್ಥ.— ಸ್ತ್ರೀ=ಸ್ತ್ರೀಯರು, ಪುಂ=ಪುರುಷರು, ಇವರುಗಳ, ಪ್ರಸಂಗಾತ್-ಸಂಬಂಧದಿಂದ, ಪರತಃ=ಉತ್ತರಕಾಲದಲ್ಲಿ, ಯತಃ=ಯಾವ ಕಾರಣದಿಂದ, ಹರಿಃ=ಶ್ರೀಹರಿಯು, ಜನಂ=ಜನರನ್ನು, ವಿಮೋಹಯನ್-ಮೋಹಪಡಿಸುವವನಾಗಿ, ಪ್ರಾದುರ್ಭವತಿ-ಆವಿರ್ಭವಿಸುತ್ತಾನೋ, ಅತಃ=ಆ ಕಾರಣದ್ದೆಸೆಯಿಂದ, ಏಷಃ-ಶ್ರೀಹರಿಯು, ಮಲೋತ್ಥಃ-ಸ್ತ್ರೀ ಪುರುಷರ ಸಂಬಂಧದಿಂದಲೇ ಹುಟ್ಟಿದವನೆಂದು, ಇತಿ=ಈ ರೀತಿಯಾಗಿ, ಅಶುಭಃ-ದುಷ್ಟರಾದ, ಜನಾ=ಜನರು, ಪೂರ್ಣ=ತುಂಬಿದ, ಗುಣೈಕ-ಜ್ಞಾನಾನಂದಾದಿ ಗುಣಗಳೇ, ವಿಗ್ರಹಂ-ಶರೀರವಾಗಿ ಉಳ್ಳ ಸ್ವಾಮಿಯನ್ನು, ಮನ್ಯತೇಸ್ಮ-ತಿಳಿಯುವರಾಗುತ್ತಾರೆ.

ಅವತಾರಿಕೆ.—ಶ್ರೀವೇದವ್ಯಾಸರು ಪ್ರಾದುರ್ಭವಿಸಿದ ಸ್ಥಳವನ್ನು ಹೇಳುತ್ತಾರೆ.-

**ಶ್ಲೋಕ ॥ ದ್ವೀಪೇ ಭಗಿನ್ಯಾಶ್ಚ ಯಮಸ್ಯ ವಿಶ್ವಕೃತ್ಪ್ರಕಾಶೇ ಜ್ಞಾನಮರೀಚಿಮಂಡಲಃ ॥ ಪ್ರಭಾಸಯನ್ನಂಡ ಬಹಿಸ್ತಥಾಂತಃ । ಸಹಸ್ರಲಕ್ಷಾಮಿತಭಾನುದೀಧಿತಿಃ ॥೫೧॥**

ಅರ್ಥ.— ವಿಶ್ವಕೃತ್=ಸಮಸ್ತ ಜಗತ್ತಿಗೂ ಜನಕನಾದ ಶ್ರೀನಾರಾಯಣನು, ಮರೀಚಯಇವ-ಕಿರಣಗಳಂತೆ ಇರತಕ್ಕ ಜ್ಞಾನಗಳ, ಮಂಡಲಃ=ಸಮೂಹವುಳ್ಳವನು, ಅಂಡಸ್ಯ=ಬ್ರಹ್ಮಾಂಡದ, ಬಹಿಃ=ಹೊರಗೂ, ತಥಾ=ಹಾಗೆಯೇ, ಅಂತಃ=ಒಳಗೂ, ಪ್ರಭಾಸಯನ್-ಪ್ರಕಾಶಪಡಿಸುವನು ಸಹಸ್ರ=ಒಂದುಸಾವಿರ, ಲಕ್ಷ=ಒಂದುಲಕ್ಷ, ಅಮಿತ-ಅಪರಿಮಿತ, ಭಾನುಃ=ಸೂರ್ಯರ, ಧೀಧಿತಿಃ-ಕಾಂತಿಯಂತೆ ಕಾಂತಿಯುಳ್ಳ ಸ್ವಾಮಿಯು, ಯಮಶ್ಚ=ಯಮದೇವರ, ಭಗಿನ್ಯಾಃ - ತಂಗಿಯಾದ ಯಮುನಾನದಿಯ, ದ್ವೀಪೇ-ನಡುಗಡ್ಡೆಯಲ್ಲಿ, (ದ್ವೀಪ) ಪ್ರಕಾಶತೇ=ಪ್ರಕಾಶಿಸುವವನಾಗಿದ್ದಾನೆ.

ಅವತಾರಿಕೆ.-ಅವತಾರಮಾಡಿದ ಶ್ರೀವೇದವ್ಯಾಸರ ಸ್ವರೂಪವನ್ನೂ ಸಾಮರ್ಥ್ಯವನ್ನೂ ವರ್ಣಿಸುತ್ತಾರೆ.

**ಶ್ಲೋಕ ॥ ಅಗಣ್ಯ ದಿವ್ಯೋರುಗುಣಾರ್ಣವಃ ಪ್ರಭುಃ । ಸಮಸ್ತ ವಿದ್ಯಾಧಿಪಜಗದ್ಗುರುಃ ॥ ಅನಂತಶಕ್ತಿರ್ಜಗದೀಶ್ವರೇಶ್ವರಃ । ಸಮಸ್ತದೋಷಾತಿವಿದೂರವಿಗ್ರಹಃ ॥೫೨॥**

ಅರ್ಥ.—ಅಗಣ್ಯಾಃ-ಲೆಕ್ಕಮಾಡುವುದಕ್ಕೆ ಸಾಧ್ಯವಿಲ್ಲದ, ದಿವ್ಯಾಃ= ಲೋಕವಿಲಕ್ಷಣಗಳಾದ, ಉರವಃ-ಉತ್ತಮಗಳಾದ, ಗುಣಾಃ=ಕಲ್ಯಾಣ ಗುಣಗಳಿಗೆ, ಅರ್ಣವಃ=ಸಮುದ್ರದಂತೆ ಇರತಕ್ಕವನು, ವಿಭುಃ=ಸೃಷ್ಟಿಕ ರ್ತನು ಅಥವಾ ಸರ್ವಸಮರ್ಥನು, ಸಮಸ್ತ=ಸಕಲ, ವಿದ್ಯಾಧಿಪತಿಃ - ವಿ ದ್ಯೆಗಳಿಗೂ ಅಧಿಪತಿಯು, ಜಗದ್ಗುರುಃ=ಜಗತ್ತಿಗೆ ಗುರುವಾದವನು, ಅನಂ ತಶಕ್ತಿಃ=ಅಪರಿಮಿತ ಶಕ್ತಿ ಸಂಪನ್ನನು, ಜಗತ್=ಈ ಜಗತ್ತಿಗೆ, ಈಶ್ವರಾಃ =ನಿಯಾಮಕರಾದ ಬ್ರಹ್ಮಾದಿಗಳಿಗೂ, ಈಶ್ವರಃ-ಸ್ವಾಮಿಯಾದ, ಸಮಸ್ತ =ಸಕಲ, ದೋಷೇಭ್ಯಃ=ದೋಷಗಳಿಂದಲೂ, ಅತಿ=ಅತ್ಯಂತ, ವಿದೂರ= ದೂರವಾದ, ವಿಗ್ರಹಃ=ಶರೀರವುಳ್ಳವನು.

**ಶ್ಲೋಕ ॥ ಶುಭಮರಕತವರ್ಣೋ ರಕ್ತಪಾದಾಬ್ಜನೇತ್ರಾ । ಧರ (ಕರ) ನಖ ರಸನಾಗ್ರಶ್ಚಕ್ರಶಂಖಾಬ್ಜರೇಖಾಃ ॥ ರವಿಕರವರಗೌರಂ ಚರ್ಮಚೈ ಣಂವಸಾನ ॥ಸ್ತಟಿದಮಲಜಟಾಸಂದೀಪ್ತಚೂಡಂದಧಾನಃ ॥೫೩॥**

ಅರ್ಥ.—ಶುಭ=ಶುದ್ಧವಾದ, ಮರಕತವರ್ಣ-ಇಂದ್ರ ನೀಲಮಣಿ ಯಂತೆ ಬಣ್ಣವುಳ್ಳವನು, ರಕ್ತಪಾದಬ್ಜನೇತ್ರಾಃ=ರಕ್ತ=ಕೆಂಪಾದ, ಪಾದಾ ಬ್ಜಃ=ಪಾದಕಮಲಗಳೂ, ನೇತ್ರಃ=ಕಣ್ಣುಗಳೂ, ಅಧರಃ-ಕೆಳಗಿನ ತುಟಿ ಯೂ, ಕರಃ=ಕೈಗಳೂ, ನಖರಃ=ಉಗುರುಗಳೂ, ರಸನಾಗ್ರಃ = ನಾಲಿಗೆ ಯ ತುದಿಯೂ ಉಳ್ಳವನು, ಚಕ್ರಶಂಖಾಬ್ಜರೇಖಃ-ಚಕ್ರ, ಶಂಖ, ಕಮಲ ಇವುಗಳಂತಿರುವ, ರೇಖ := ಗೆರೆಗಳುಳ್ಳವನು, ರವಿಕರವರಗೌರಂ=ಸೂರ್ಯ ನ ಕಿರಣಗಳಂತೆ ಶ್ರೇಷ್ಠವಾದ ಶುಭ್ರ ಬಣ್ಣವುಳ್ಳ, ಏಣಂ-ಜಿಂಕೆಯ ಸಂಬಂ ಧಿಯಾದ, ಚರ್ಮ=ಚರ್ಮವನ್ನು (ಕೃಷ್ಣಾಂಜಿನವನ್ನು) ದಸಾನಃ-ಧರಿಸಿ ರುವವನು," ತಟಿತ್=ಮಿಂಚಿನಂತೆ, ಅಮಲ=ನಿರ್ಮಲವಾದ, ಜಟಾಃ= ಜಟೆಗಳಿಂದ, ಸಂದೀಪ್ತಾಃ=ಚೆನ್ನಾಗಿ ಪ್ರಕಾಶಮಾನವಾದ, ಚೂತಂ=ಕೂ ದಲುಗಳುಳ್ಳ ಶಿರಸ್ಸನ್ನು, ದಧಾನಃ=ಧರಿಸಿರುವವನು.

**ಶ್ಲೋಕ ॥ ವಿಸ್ತೀರ್ಣವಕ್ಷಾಃ ಕಮಲಾಯತಾಕ್ಷೋ । ಬೃಹದ್ಭುಜಃ ಕಂಬು ಸಮಾನ ಕಂಠಃ ॥ ಸಮಸ್ತವೇದಾನ್ಮುಖತಃ ಸಮುದ್ಗಿರನ್ । ಅನಂತ ಚಂದ್ರಾಧಿಕಕಾಂತಿ ಸನ್ಮುಖಃ ॥೫೪॥**

ಅರ್ಥ.—ವಿಸ್ತೀರ್ಣ=ವಿಶಾಲವಾದ, ವಕ್ಷಾ=ಎದೆಯುಳ್ಳವನು, ಕಮಲ-ಕಮಲದಂತೆ, ಆಯತ-ವಿಶಾಲವಾದ, ಅಕ್ಷಿ=ಕಣ್ಣುಗಳುಳ್ಳವನು, ಬೃಹತ್=ದೊಡ್ಡದಾದ, ಭುಜಃ=ಭುಜಗಳುಳ್ಳವನು, ಕಂಬುಸಮಾನಕಂಠಃ=ಶಂಖದಂತೆ ರೇಖಾತ್ರಯೋಪೇತನುಘ್ಯೆ ಉನ್ನತವಾಗಿರುವ ಕಂಠವುಳ್ಳವನು, ಸಮಸ್ತ=ಸಕಲವಾದ, ವೇದಾ-ವೇದಗಳನ್ನು, ಮುಖತಃ-ಮುಖದಿಂದ, ಸಮ್ಯಕ್=ಚೆನ್ನಾಗಿ, ಉದ್ಗಿರ=ಉಚ್ಚರಿಸುವವನು, ಅನಂತಚಂದ್ರೇಭ್ಯಃ-ಅನಂತಾನಂತ ಚಂದ್ರರಿಗಿಂತಲೂ, ಅಧಿಕಕಾಂತಿಃ – ಅತ್ಯಂತ ಕಾಂತಿಯುಳ್ಳ, ಸನ್ಮುಖಃ=ಶೋಭಾಯಮಾನವಾದ ನಿರ್ದುಷ್ಟವಾದ ಮುಖ ಉಳ್ಳವನು.

**ಶ್ಲೋಕ ॥ ಪ್ರಬೋಧ ಮುದ್ರಾಭಯದೋರ್ದ್ವಯಾನ್ವಿತೋ । ಯಜ್ಞೋಪವೀತಾಜಿನಮೇಖಲೋಲ್ಲಸ ॥ ದೃಶಮಹಾಜ್ಞಾನ ಭುಜಂಗದಷ್ಟ । ಮುಜ್ಜೀವಯಾನೋ ಜಗದತ್ಯರೋಚತ ॥೫೫॥**

ಅರ್ಥ.—ಪ್ರಭೋಧಮುದ್ರಾ=ಜ್ಞಾನಸಮುದ್ರ, ಅಭಯಮುದ್ರ, ಇವುಗಳಿಗಿರುವ, ದೋರ್ದ್ವಯಾಂನ್ವಿತಃ – ಎರಡು ಕೈಗಳಿಂದ ಕೂಡಿದವನು ಯಜ್ಞೋಪವೀತಾಜಿನಮೇಖಲಾಭಿಃ = ಯಜ್ಞೋಪವೀತ, ಕೃಷ್ಣಾಜಿನ, ಮೌಂಜಿ ಇವುಗಳಿಂದ ಕೂಡಿದ, ಉಲ್ಲಸನ್ = ಶೋಭಾಯಮಾನವಾಗಿರುವನು, ದೃಶಾ=ಪ್ರಸನ್ನವಾದ ದೃಷ್ಟಿಯಿಂದ, ಮಹಾ=ಮಹತ್ತಾದ, ಅಜ್ಞಾನ=ಅಜ್ಞಾನವೆಂಬ, ಭುಜಂಗದಷ್ಟಂ – ಸರ್ಪದಿಂದ ಕಚ್ಚಲ್ಪಟ್ಟ ಭಕ್ತವೃಂದವನ್ನು, ಉಜ್ಜೀವಯಾನ=ಬದುಕಿಸುತ್ತಿರುವ ಶ್ರೀವೇದವ್ಯಾಸರು, ಜಗತಿ-ಜಗತ್ತಿನಲ್ಲಿ, ಅತ್ಯರೋಚತ=ಬಹಳ ಪ್ರಕಾಶಿಸಿದನು.

**ಶ್ಲೋಕ ॥ ಸಲೋಕ ಧರ್ಮಾಭಿರಿರಕ್ಷಯಾಪಿತು । ರ್ದ್ವಿಜತ್ವಮಪ್ಯಾಶುಪಿತುರ್ದದೌನಿಜಂ ॥ ಜ್ಞಾನಂ ತಯೋಃ ಸಂಸ್ಮೃತಿಮಾತ್ರತಸ್ಸದಾ । ಪ್ರತ್ಯಕ್ಷಭಾವಂಪರಮಾತ್ಮನೋದಧೌ ॥೫೬॥**

ಅರ್ಥ—ಸಃ=ಆ ವೇದವ್ಯಾಸರು, ಲೋಕಧರ್ಮಾ-ಲೋಕಮರ್ಯಾದೆಗಳ, ಅಭಿರಿರಕ್ಷಯಾ=ಪಾಲಿಸಬೇಕೆಂಬ ಇಚ್ಛೆಯಿಂದ, ಪಿತುಃಸಕಾಶಾತ್=ತಂದೆಯ ದೆಸೆಯಿಂದ, ಆಶು=ಶೀಘ್ರವಾಗಿ, ದ್ವಿಜತ್ವಂ=ಬ್ರಾಹ್ಮಣತ್ವವನ್ನು, ಆಪ್ಯ=ಹೊಂದಿ ಪಿತುಃ=ತಂದೆಗೆ, ನಿಜಂ=ತನ್ನ, ಜ್ಞಾನಂ=ಜ್ಞಾನವನ್ನು, ದದೌ=ಕೊಟ್ಟರು. ತಯೋಃ=ಆ ತಂದೆತಾಯಿಗಳಿಗೆ, ಸದಾ

ಯಾವಾಗಲೂ, ಸಂಸ್ಮೃತಿಮಾತ್ರತಃ=ಸ್ಮರಣಮಾತ್ರದಿಂದಲೇ, ಆತ್ಮನಃ-ತನ್ನ, ಪ್ರತ್ಯಕ್ಷಭಾವಂ-ಕಣ್ಣಿಗೆ ಕಾಣಿಸುವ, ಪರಂ-ಪರವನ್ನು, ದದೌ-ಕೊಟ್ಟರು.

**ಶ್ಲೋಕ || ದ್ವೈಪಾಯನಃ ಸೋಥ ಜಗಾಮ ಮೇರುಂ | ಚತುರ್ಮುಖಾದ್ಯೈರನುಗಮ್ಯಮಾನಃ || ಉದ್ಧೃತ್ಯ ವೇದಾನಖಿಲಾನ್ಸುರೇಭ್ಯೋ | ದದೌ ಮುನಿಭ್ಯಶ್ಚ ಯಥಾದಿಸೃಷ್ಟೌ ||೩೯||**

ಅರ್ಥ.— ಅಥ=ಅನಂತರದಲ್ಲಿ, ಸಃ=ಆ. ದ್ವೈಪಾಯನಃ=ಶ್ರೀವೇದವ್ಯಾಸರು, ಚತುರ್ಮುಖಾದ್ಯೈಃ=ಬ್ರಹ್ಮಾದಿ ದೇವತೆಗಳಿಂದ, ಅನುಗಮ್ಯಮಾನಃ=ಅನುಸರಿಸಿಕೊಳ್ಳಲ್ಪಟ್ಟವರಾಗಿ, ಮೇರುಂ=ಮೇರುಪರ್ವತವನ್ನು ಕುರಿತು, ಜಗಾಮ=ಹೋದರು. ಯಥಾ=ಹೇಗೆ, ಆದಿಸೃಷ್ಟೌ=ಆದಿಸೃಷ್ಟಿಯಲ್ಲಿ ಹೇಗೆ ಇತ್ತೋ ಹಾಗೆ, ವೇದಾನ್=ವೇದವೇ ಮೊದಲಾಗಿ ಉಳ್ಳ ವಿದ್ಯೆಯನ್ನು, ದದೌ=ಉಪದೇಶಿಸಿದರೋ, ತಥಾ=ಹಾಗೆಯೇ, ಉದ್ಧೃತ್ಯ=ಉದ್ಧಾರಮಾಡಿ, ಸುರೇಭ್ಯಃ=ದೇವತೆಗಳಿಗೂ, ಮುನಿಭ್ಯಶ್ಚ=ಋಷಿಗಳಿಗೂ ಕೊಟ್ಟರು.

ತಾತ್ಪರ್ಯ.— ಆಮೇಲೆ ಶ್ರೀವೇದವ್ಯಾಸರು ಬ್ರಹ್ಮಾದಿ ದೇವತೆಗಳಿಂದ ಅನುಸರಿಸಿಕೊಳ್ಳಲ್ಪಟ್ಟವರಾಗಿ ಮೇರುಪರ್ವತವನ್ನು ಕುರಿತು ಹೋಗುವವರಾದರು. ಸೃಷ್ಟಿಯ ಆದಿಯಲ್ಲಿ ಹೇಗೆ ಶ್ರೀನಾರಾಯಣನು ದೇವತೆಗಳನ್ನು ಉದ್ಧಾರಮಾಡಿ ವೇದಾದಿ ವಿದ್ಯೆಗಳನ್ನು ಬ್ರಹ್ಮದೇವರಿಗೆ ಉಪದೇಶಿಸಿದನೋ ಹಾಗೆಯೇ ಶ್ರೀವೇದವ್ಯಾಸರು ದೇವತೆಗಳಿಗೂ ಋಷಿಗಳಿಗೂ ಉಪದೇಶಿಸಿದರು.

**ಶ್ಲೋಕ || ಸರ್ವಾಣಿ ಶಾಸ್ತ್ರಾಣಿ ತಥೈವ ಕೃತ್ವಾ ವಿನಿರ್ಣಯಂ ಬ್ರಹ್ಮಸೂತ್ರಂ ಚಕಾರ || ತಚ್ಚುಶ್ರುವುರ್ಬ್ರಹ್ಮಗಿರೀಶ ಮುಖ್ಯಾಃ | ಸುರಾಮುನೀನಾಂಪ್ರವರಾಶ್ಚ ತಸ್ಮಾತ್ ||೪೦||**

ಅರ್ಥ.—ಆ ವೇದವ್ಯಾಸರು, ಸರ್ವಾಣಿ-ಸಮಸ್ತಗಳಾದ, ಶಾಸ್ತ್ರಾಣಿ=ಶಾಸ್ತ್ರಗಳನ್ನೂ, ಕೃತ್ವಾ=ಮಾಡಿ, ತಥೈವ=ಹಾಗೆಯೇ, ವಿ=ವಿಶೇಷಾಕಾರವಾಗಿ, ನಿರ್ಣಯಂ=ವೇದಾರ್ಥ ನಿರ್ಣಾಯಕವಾದ, ಬ್ರಹ್ಮಸೂತ್ರಂ=ಬ್ರಹ್ಮಸೂತ್ರವನ್ನು, ಚಕಾರ=ಮಾಡಿದರು. ಬ್ರಹ್ಮಗಿರೀಶಮುಖ್ಯಾಃ=ಬ್ರಹ್

ರುದ್ರ ಮೊದಲಾದ, ಸುರಾಃ=ದೇವತೆಗಳೂ, ಮುನೀನಾಂ-ಋಷಿಗಳ ಮಧ್ಯದಲ್ಲಿ, ಪ್ರವರಾಃಚ=ಶ್ರೇಷ್ಠರಾದವರೂ ಕೂಡ, ತಸ್ಮಾತ್=ಆ ವೇದವ್ಯಾಸರ ಬಳಿಯಿಂದ, ತತ್=ಆ ಬ್ರಹ್ಮಸೂತ್ರವನ್ನು, ಶುಶ್ರುವುಃ=ಕೇಳುವವರಾದರು (ಶ್ರವಣಮಾಡಿದರು.)

**ಶ್ಲೋಕ ॥ ಸಮಸ್ತ ಶಾಸ್ತ್ರಾರ್ಥ ನಿದರ್ಶನಾತ್ಮಕಂ । ಚಕ್ರೇ ಮಹಾಭಾರತನಾಮಧೇಯಂ ॥ ವೇದೋತ್ತಮಂ ತಚ್ಚ ವಿಧಾತೃಶಂಕರ । ಪ್ರಧಾನಕೈಸ್ತನ್ಮುಖತಃ ಸುರೈಃ ಶ್ರುತಂ ॥೫೯॥**

ಅರ್ಥ.— ಸಮಸ್ತಶಾಸ್ತ್ರ-ಸಕಲ ಶಾಸ್ತ್ರಗಳ, ಅರ್ಥ - ಅರ್ಥಕ್ಕೆ, ನಿದರ್ಶನಾತ್ಮಕಂ-ದೃಷ್ಟಾಂತರೂಪವಾದ, ವೇದೋತ್ತಮಂ-ವೇದಗಳಿಗಿಂತಲೂ ಉತ್ತಮವಾದ, ಮಹಾಭಾರತನಾಮಧೇಯಂ=ಮಹಾಭಾರತವೆಂದು ಹೆಸರುಳ್ಳ ಗ್ರಂಥವನ್ನು, ಚಕ್ರೇ=ಮಾಡಿದರು. ತತ್=ಆ ಭಾರತವು, ವಿಧಾತೃಶಂಕರಪ್ರಧಾನಕೈಃ-ಬ್ರಹ್ಮ ರುದ್ರರೇ ಮುಖ್ಯವಾಗಿ ಉಳ್ಳ, ಸುರೈಃ=ದೇವತೆಗಳಿಂದ, ತನ್ಮುಖತಃ=ಆ ವೇದವ್ಯಾಸರಿಂದಲೇ ಸಾಕ್ಷಾತ್ತಾಗಿ, ಶ್ರುತಂ=ಕೇಳಲ್ಪಟ್ಟಿತು.

**ಶ್ಲೋಕ ॥ ಅಥೋ ಗಿರೀಶಾದಿಮನೋನುಶಾಯೀ । ಕಲಿರ್ಮಮಾರಾಶು ಸುವಾಙ್ಮಯೈಃ ಶರೈಃ ॥ ನಿಕೃತ್ತಶೀರ್ಷೋ ಭಗವನ್ಮುಖೇರಿತೈಃ । ಸುರಾಶ್ಚ ಸಜ್ಞಾನ ಸುಧಾರಸಂ ಪಪುಃ ॥೬೦॥**

ಅರ್ಥ.— ಅಥ=ಅನಂತರದಲ್ಲಿ, ಗಿರೀಶಾದಿಮನೋನುಶಾಯಿ = ರುದ್ರದೇವರೇ ಮೊದಲಾದ ದೇವತೆಗಳ ಮನಸ್ಸನ್ನು ಆವರಿಸಿಕೊಂಡಿರುವ, ಕಲಿಃ=ಕಲಿಯು, ಭಗವನ್ಮುಖೇ ಈರಿತೈಃ=ಷಡ್ಗುಣೈಶ್ವರ್ಯ ಸಂಪನ್ನರಾದ ಶ್ರೀವೇದವ್ಯಾಸರ ಮುಖದಿಂದ ಹೊರಟ, ಸುವಾಙ್ಮಯೈಃ=ವೇದ, ಭಾರತ, ಬ್ರಹ್ಮಸೂತ್ರ ಮೊದಲಾದ ಸದ್ವಾಕ್ಯರೂಪ, ಶರೈಃ=ಬಾಣಗಳಿಂದ, ನಿಕೃತ್ತಶೀರ್ಷಃ=ಕತ್ತರಿಸಲ್ಪಟ್ಟ ಶಿರಸ್ಸುಳ್ಳವನಾಗಿ, ಆಶು=ಶೀಘ್ರದಲಿಯೇ, ಮಮಾರ=ಮೃತನಾದಂತೆ ನಿಶ್ಚೇಷ್ಟಿತನಾದನು. ಸುರಾಶ್ಚ=ದೇವತೆಗಳಾದರೋ ಸುಧಾರಸಂ=ಅಮೃತದಂತೆ ಇರುವ, ಸಜ್ಞಾನ=ಸಮೀಚೀನ ಜ್ಞಾನವನ್ನು, ಪಪುಃ=ಪಾನಮಾಡಿದರು. (ಸಮೀಚೀನ ಜ್ಞಾನವನ್ನು ಹೊಂದಿದರು)

ಶ್ಲೋಕ ‖ ಅಥೋಮನುಷ್ಯೇಷು ತಥಾಸುರೇಷು ರೂಪಾಂತರೈಃ ಕಲಿರೇವಾವಶಿಷ್ಟಃ ‖ ತತೋಮನುಷ್ಯೇಷು ಚ ಸತ್ಸುಸಂಸ್ಥಿತೋ । ವಿನಾಶ್ಯ ಇತ್ಯೇವ ಹರಿರ್ವ್ಯಚಿಂತಯತ್ ‖೬೦‖

ಅರ್ಥ.— ಅಥ= ದೇವತೆಗಳ ಮನಸ್ಸಿನಿಂದ ಕಲಿಯನ್ನು ಹೊರಕ್ಕೆ ಹೊರಡಿಸಿದಮೇಲೆ, ಮನುಷ್ಯೇಷು- ತ್ರಿವಿಧ ಮನುಷ್ಯರಲ್ಲಿಯೂ, ತಥಾ= ಹಾಗೆಯೇ, ಅಸುರೇಷು= ಅಸುರರಲ್ಲಿಯೂ, ರೂಪಾಂತರೈಃ = ಬೇರೆಬೇರೆ ರೂಪಗಳಿಂದ, ಕಲಿಃ= ಕಲಿಯು, ಅವಶಿಷ್ಟಏವ- ಉಳಿದುಕೊಂಡೇ ಇರುತ್ತಾನೆ. ತತಃ- ಆ ಕಾರಣದ್ದೆಸೆಯಿಂದ, ಸತ್ಸುಮನುಷ್ಯೇಷು= ಮನುಷ್ಯೋತ್ತಮರಲ್ಲಿ, ಸಂಸ್ಥಿತಃ= ಇರತಕ್ಕ, ಆ ಕಲಿಯು ನನ್ನಿಂದ, ವಿನಾಶ್ಯಃ= ನಾಶಪಡಿಸಲಿಕ್ಕೆ ಅರ್ಹನು, ಇತಿಏವ- ಈ ರೀತಿಯಾಗಿ, ಹರಿಃ- ಶ್ರೀವೇದವ್ಯಾಸರು, ವ್ಯಚಿಂತಯತ್= ಆಲೋಚಿಸಿದರು.

ತಾತ್ಪರ್ಯ.— ದೇವತೆಗಳ ಮನಸ್ಸಿನಿಂದ ಕಲಿಯನ್ನು ಹೊರಕ್ಕೆ ಮಾಡಿದಮೇಲೆ, ಕಲಿಯು ಇನ್ನೂ ರೂಪಾಂತರಗಳಿಂದ, ತ್ರಿವಿಧ ಮನುಷ್ಯರಲ್ಲಿಯೂ, ಅಸುರರಲ್ಲಿಯೂ ಇದ್ದಾನೆ. ಮನುಷ್ಯೋತ್ತಮರಲ್ಲಿರತಕ್ಕ ಕಲಿಯನ್ನು ಅವಶ್ಯವಾಗಿ ನಾಶಪಡಿಸಬೇಕೆಂಬುದಾಗಿ ಶ್ರೀವೇದವ್ಯಾಸರು ಆಲೋಚಿಸಿದರು.

ಶ್ಲೋಕ ‖ ತತೋನೃಣಾಂ ಕಾಲಬಲಾತ್ಸುಮಂದ । ಮಾಯುರ್ಮತಿಂ ಕರ್ಮಚವೀಕ್ಷ್ಯ ಕೃಷ್ಣಃ ‖ ವಿವ್ಯಾಸ ವೇದಾನ್ಸ ವಿಭುಶ್ಚತುರ್ಧಾ । ಚಕ್ರೇ ತಥಾ ಭಾಗವತಂ ಪುರಾಣಂ ‖೬೧‖

ಅರ್ಥ.— ತತಃ- ಅನಂತರದಲ್ಲಿ, ವಿಭುಃ= ಸರ್ವಸಮರ್ಥರಾದ, ಕೃಷ್ಣಃ- ಶ್ರೀವೇದವ್ಯಾಸರು, ನೃಣಾಂ= ಮನುಷ್ಯರಿಗೆ, ಕಾಲಬಲಾತ್= ಕಲಿಕಾಲದ ಪ್ರಾಬಲ್ಯದಿಂದ, ಸುಮಂದಂ= ಅತ್ಯಲ್ಪವಾದ, ಆಯುಃ= ಆಯುಸ್ಸು ಮತಿಂ= ಬುದ್ಧಿ ಶಕ್ತಿಯನ್ನೂ, ಕರ್ಮಚ- ಕರ್ಮಾಚರಣೆಯಲ್ಲಿ ಲೋಪವನ್ನು ವಿಚಾರಮಾಡಿ, ವೇದಾನ್= ಮೂಲವೇದಗಳನ್ನೂ, ಚತುರ್ಧಾ= ಋಗ್ವೇದವೇ ಮೊದಲಾದ ನಾಲ್ಕುಭಾಗವಾಗಿ, ವಿವ್ಯಾಸ= ವಿಭಾಗಮಾಡಿದರು- ತಥಾ- ಹಾಗೆಯೇ, ಭಾಗವತಂ- ಭಾಗವತವೆಂಬ, ಪುರಾಣಂ- ಪುರಾಣವನ್ನು, ಚಕ್ರೇ= ಮಾಡಿದರು.

ಶ್ಲೋಕ ॥ ಯೇಯೇಚ ಸಂತಸ್ತಮಸಾನುವಿಷ್ಟಾ । ಸ್ತಾಂಸ್ತಾನ್ಸುವಾಕ್ಯೈಸ್ತ ಮಸೋವಿಮುಂಚನ್ ॥ ಚಚಾರಲೋಕಾನ್ಸಪಥಿಪ್ರಯಾಂತಂ । ಕೀ ಟಂನ್ಯಪಶ್ಯತ್ತಮುವಾಚಕೃಷ್ಣಃ ॥೬೩॥

ಅರ್ಥ.— ಯೇಯೇ=ಯಾವಯಾವ, ಸಂತಃ-ಸಜ್ಜನರು, ತಮಸಾ =ಅಜ್ಞಾನದಿಂದ, ಅನುವಿಷ್ಟಾಃ=ಪ್ರವಿಷ್ಟರಾಗಿದ್ದರೊ, ತಾನ್ ತಾನ್=ಅಂ ಥವರನ್ನು, ಸುವಾಕ್ಯೈಃ-ಬ್ರಹ್ಮಸೂತ್ರಾದಿಗಳಲ್ಲಿ ಹೇಳಲ್ಪಟ್ಟ ನಿರ್ಣಯಕ ಸದ್ವಾಕ್ಯಗಳಿಂದ, ತಮಸಃ=ಅಜ್ಞಾನದಿಂದ, ವಿಮುಂಚನ್=ಬಿಡಿಸಿದವರಾ ಗಿ, ಲೋಕಾನ್=ಸಜ್ಜನರಿಂದ ಸೇವಿಸಲ್ಪಟ್ಟ ಲೋಕಗಳಲ್ಲಿ, ಚಚಾರ-ಸಂ ಚರಿಸಿದರು. ಒಂದಾನೊಂದು ಸಮಯದಲ್ಲಿ, ಕೃಷ್ಣಃ=ಆ ವೇದವ್ಯಾಸರು, ಪಥಿ=ದಾರಿಯಲ್ಲಿ, ಪ್ರಯಾಂತಂ-ಹೋಗುತ್ತಿದ್ದ, ಕೀಟಂ=ಕೀಟಜನ್ಮವನ್ನು ಹೊಂದಿದ್ದ ಯಾವನೋ ಒಬ್ಬನನ್ನು, ನ್ಯಪಶ್ಯತ್-ನೋಡಿದರು. ತಂ=ಆ ಶಾಪೋಪಹತ ಪುರುಷನನ್ನು ಕುರಿತು, ಉವಾಚ-ಹೀಗೆ ಹೇಳಿದರು.

ಶ್ಲೋಕ ॥ ಭವಸ್ವ ರಾಜಾ ಕುಶರೀರಮೇತ । ತ್ತ್ಯಕ್ತ್ವೇತಿನೈಚ್ಛತ್ತದಸೌತತ ಸ್ತಂ । ಅತ್ಯಕ್ತದೇಹಂ ನೃಪತಿಂ ಚಕಾರ । ಪುರಾಸ್ವಭಕ್ತಂ ವೃಷಲಂ ಸುಲುಬ್ಧಂ ॥೬೪॥

ಅರ್ಥ.— ಏತತ್-ಈ, ಕುಶರೀರಂ-ನಿಂದ್ಯವಾದ ಶರೀರವನ್ನು, ತ್ಯ ಕ್ತ್ವಾ=ಬಿಟ್ಟು, ರಾಜಾ=ರಾಜನು, ಭವಸ್ವ=ಆಗು, ಇತಿ=ಈ ರೀತಿಯಾಗಿ ಹೇಳಿದರೂ, ಅಸೌ=ಆ ಕ್ರಿಮಿಯು ತನ್ನ ದೇಹವನ್ನು ಬಿಡುವುದಕ್ಕೆ, ನೈ ಚ್ಛತ್=ಅಪೇಕ್ಷಿಸಲಿಲ್ಲ. ಪುರಾ=ಪೂರ್ವದಲ್ಲಿ, ಸ್ವ-ತನ್ನ, ಭಕ್ತಂ=ಭಕ್ತ ನಾಗಿಯೂ, ವೃಷಲಂ=ಶೂದ್ರನಾಗಿಯೂ, ಸು-ಬಹಳ, ಲುಬ್ಧಂ=ಲೋ ಭಾಖ್ಯದೋಷದಿಂದ ಕೂಡಿದವನಾಗಿಯೂ ಇದ್ದು, ಈಗ, ಅತ್ಯಕ್ತದೇಹಂ -ಬಿಡುವುದಕ್ಕೆ ಇಷ್ಟವಿಲ್ಲದ ಶರೀರವುಳ್ಳ, ತಂ=ಕೀಟವನ್ನು, ನೃಪತಿಂ-ರಾ ಜನನ್ನಾಗಿ, ಚಕಾರ=ಮಾಡಿದರು.

ತಾತ್ಪರ್ಯ.—" ಎಲೈ ಕೀಟವೇ ! ಈ ನೀಚದೇಹವನ್ನು ಬಿಟ್ಟು ರಾಜನಾಗುವೆಯಾ " ಎಂದು ಶ್ರೀವೇದವ್ಯಾಸರು ಕೇಳಲು, ಆ ಕೀಟವು ಆ ದೇಹವನ್ನು ಬಿಡಲು ಅಪೇಕ್ಷಿಸಲಿಲ್ಲ. ಆಗ ಶ್ರೀವ್ಯಾಸರು ತನ್ನ ಭಕ್ತನಾದ ಶೂದ್ರನಾದ, ಅತಿ ಲೋಭಾಖ್ಯದೋಷದಿಂದ ಕೂಡಿದ ಆ ಜೀವಿಯನ್ನು ಆ ದೇಹದಲ್ಲಿರುವಾಗಲೇ ರಾಜನನ್ನಾಗಿ ಮಾಡಿದರು.

**ಶ್ಲೋಕ || ಲೋಭಾತ್ಸಕೀಟತ್ವಮುಪೇತ್ಯ ಕೃಷ್ಣ । ಪ್ರಸಾದತಶ್ಚಾಶುಬಭೂವ ರಾಜಾ || ತದೈವತಂ ಸರ್ವನೃಪಾಃ ಪ್ರಣೇಮು । ರ್ದದುಃ ಕರಂಚಾಸ್ಯ ಯಥೈವ ವೈಶ್ಯಾಃ ||೬೫||**

ಅರ್ಥ— ಸಃ – ಆ ಭಕ್ತನೂ, ಲುಬ್ಧನೂ ಆಗಿದ್ದ ಆ ಶೂದ್ರನು, ಲೋಭಾತ್–ಲೋಭದ ದೆಸೆಯಿಂದ, ಕೀಟತ್ವಂ=ಕೀಟಸ್ವರೂಪವನ್ನು, ಉಪೇತ್ಯ=ಹೊಂದಿ, ಕೃಷ್ಣಪ್ರಸಾದತಶ್ಚ=ಶ್ರೀವೇದವ್ಯಾಸರ ಅನುಗ್ರಹದಿಂದ, ಆಶು=ಶೀಘ್ರದಲ್ಲಿಯೇ, ರಾಜಾ=ದೊರೆಯು, ಬಭೂವ=ಆದನು, ತದೈವ=ಆಗಲೇ, ತಂ=ಆ ಹುಳುರೂಪಿಯಾದ ರಾಜನನ್ನು, ಸರ್ವನೃಪಾಃ=ಸಮಸ್ತ ರಾಜರೂ, ಪ್ರಣೇಮುಃ=ನಮಸ್ಕರಿಸಿದರು, ಮತ್ತು, ಯಥೈವ = ಹೇಗೆ, ವೈಶ್ಯಾಃ=ವೈಶ್ಯರು ಬಲಿಷ್ಠನಾದ ರಾಜನಿಗೆ, ಕರಂ=ಕಪ್ಪವನ್ನು ಕೊಡುತ್ತಾರೋ, ತಥೈವ–ಹಾಗೆಯೇ, ಅಸ್ಯ–ಕೀಟರೂಪಿಯಾದ ರಾಜನಿಗೆ ಕಪ್ಪವನ್ನು, ದದುಃ=ಕೊಟ್ಟರು.

**ಶ್ಲೋಕ || ಉವಾಚ ತಂ ಭಗವಾನ್ಮುಕ್ತಿ ಮಸ್ಮಿಂ । ಸ್ತವಕ್ಷಣೇದಾತುಮಹಂ ಸಮರ್ಥಃ || ತಥಾಪಿ ಸೀಮಾರ್ಥಮವಾಪ್ಯ ವಿಪ್ರ । ತನುಂ ವಿಮುಕ್ತೋಭವಮತ್ಪ್ರಸಾದಾತ್ ||೬೬||**

ಅರ್ಥ.— ಭಗವಾನ್= ಪೂಜ್ಯರಾದ (ಷಡ್ಗುಣೈಶ್ವರ್ಯ ಸಂಪನ್ನರಾದ) ಶ್ರೀವೇದವ್ಯಾಸರು, ತಂ=ಆ ಕೀಟ ಸ್ವರೂಪ ರಾಜನನ್ನು ಕುರಿತು, ಉವಾಚ=ಹೀಗೆ ಹೇಳಿದರು, ಏನೆಂದರೆ, ತವ=ನಿನಗೆ, ಅಸ್ಮಿನ್ ಕ್ಷಣೇ=ಈ ಕ್ಷಣದಲ್ಲಿಯೇ, ಮುಕ್ತಿಂ–ಮೋಕ್ಷವನ್ನು, ದಾತುಂ–ಕೊಡುವುದಕ್ಕೆ, ಅಹಂ–ನಾನು, ಸಮರ್ಥಃ=ಸಮರ್ಥನು, ತಥಾಪಿ=ಆದಾಗ್ಯೂ, ಬ್ರಾಹ್ಮಣ ಜನ್ಮವನ್ನು ಹೊಂದಿಯೇ ಮುಕ್ತಿಯನ್ನು ಹೊಂದತಕ್ಕದ್ದು, ಬೇರೆ ವರ್ಣದವರಿಂದ ಮುಕ್ತಿಯು ಹೊಂದತಕ್ಕದ್ದಲ್ಲ, ಎಂಬ, ಸೀಮಾರ್ಥಂ=ಶಾಸ್ತ್ರಮರ್ಯಾದೆಯನ್ನು ರಕ್ಷಿಸುವುದಕ್ಕಾಗಿ, ವಿಪ್ರತನುಂ=ಬ್ರಾಹ್ಮಣ ಶರೀರವನ್ನು, ಅವಾಪ್ಯ=ಹೊಂದಿ, ಮತ್ಪ್ರಸಾದಾತ್=ನನ್ನನುಗ್ರಹದಿಂದ, ತ್ವಂ=ನೀನು, ವಿಮುಕ್ತೋಭವ–ಮುಕ್ತನಾಗು.

**ಶ್ಲೋಕ || ಜ್ಞಾನಂ ಚ ತಸ್ಮೈ ವಿಮಲಂ ದದೌ ಸಃ । ಮಹೀಂಚ ಸರ್ವಾಂ ಬುಭುಜೇತದಂತೇ || ತ್ಯಕ್ತ್ವಾ ತನುಂ ವಿಪ್ರವರತ್ವಮೇತ್ಯ । ಪದಂ ಹರೇರಾಪ ಸುತತ್ವವೇದೀ ||೬೭||**

ಅರ್ಥ.— ಸಃ=ಆ ವೇದವ್ಯಾಸರು, ತಸ್ಮೈ=ಆ ಕೀಟರಾಜನಿಗೆ, ವಿಮಲಂ-ನಿರ್ಮಲವಾದ, ಜ್ಞಾನಂ=ಭಗವದ್ವಿಷಯಕವಾದ ಜ್ಞಾನವನ್ನು, ದದೌ=ಉಪದೇಶರೂಪದಿಂದ ಕೊಟ್ಟರು. ಆ ಕೀಟನು, ಸರ್ವಾಂ-ಸಮಸ್ತವಾದ, ಭೂಮಿಂ=ಭೂಮಂಡಲವನ್ನು (ಸಾರ್ವಭೌಮಪದವಿಯನ್ನು) ಬುಭುಜೇ-ಅನುಭವಿಸಿದನು. ತದಂತೇ-ಸಾರ್ವಭೌಮಪದವಿಯನ್ನು ಅನುಭವಿಸಿದನಂತರದಲ್ಲಿ, ತನುಂ=ಆ ಕೀಟದೇಹವನ್ನು, ತ್ಯಕ್ತ್ವಾ=ಬಿಟ್ಟು, ವಿಪ್ರವರತ್ವಂ=ಬ್ರಾಹ್ಮಣೋತ್ತಮ ಜನ್ಮವನ್ನು, ಏತ್ಯ=ಹೊಂದಿ, ಸು=ಚೆನ್ನಾಗಿ, ತತ್ವಂ-ಹರಿ ಸ್ವರೂಪವನ್ನು, ವೇದೀ-ತಿಳಿದವನಾಗಿ, ಹರೇಃಪದಂ=ಪರಮಪದವಿಯನ್ನು, (ಮುಕ್ತಿಯನ್ನು) ಅಪ=ಹೊಂದಿದನು.

ಶ್ಲೋಕ || ಏವಂಬಹೂನ್ಸಂಸೃತಿಬಂಧತಃ ಪ್ರಭು | ರ್ವ್ಯಮೋಚಯದ್ವ್ಯಾಸತನುರ್ಜನಾರ್ದನಃ || ಬಹೂನ್ಯಚಿಂತ್ಯಾನಿಚತಸ್ಯಕರ್ಮಾ | ಣ್ಯಶೇಷದೇವೇಶಸದೋದಿತಾನಿ ||೬೮||

ಅರ್ಥ.— ಪ್ರಭುಃ=ಸಮರ್ಥನಾದ, ವ್ಯಾಸತನು=ವ್ಯಾಸಾಖ್ಯ ಶರೀರವುಳ್ಳ, ಜನಾರ್ದನಂ-ಶ್ರೀನಾರಾಯಣನು, ಏವಂ=ಈ ಕೀಟದಂತೆಯೇ, ಬಹೂನ್=ಅನೇಕಮಂದಿ ತನ್ನ ಭಕ್ತರನ್ನು, ಸಂಸೃತಿ-ಸಂಸಾರದ, ಬಂಧಿತಃ=ಬಂಧನದಿಂದ, ವ್ಯಮೋಚಯತ್=ಬಿಡಿಸಿದನು. ಅಶೇಷ=ಸಮಸ್ತರಾದ, ದೇವೇಶ=ಬ್ರಹ್ಮಾದಿದೇವತೆಗಳಿಂದ, ಸದಾ=ಸರ್ವಕಾಲದಲ್ಲಿಯೂ, (ಸಂಸಾರ ಮತ್ತು ಮುಕ್ತ್ಯವಸ್ಥೆಗಳಲ್ಲಿಯೂ) ಉದಿತಾನಿ=ಸ್ವೀಕರಿಸಲ್ಪಟ್ಟ ಅಚಿಂತ್ಯಾನಿ-ಮನಸ್ಸಿನಿಂದ ಸ್ಮರಿಸುವದಕ್ಕೂ ಅಶಕ್ಯಗಳಾದ, ಬಹೂನಿ-ಅನೇಕ, ಕರ್ಮಾಣಿ-ಇಂಥಾ ವ್ಯಾಪಾರಗಳು, ಸಂತಿ-ಇವೆ.

ಶ್ಲೋಕ || ಅಥಾಸ್ಯ ಪುತ್ರತ್ವಮವಾಪ್ತುಮಿಚ್ಛ | ಶ್ಚಚಾರ ರುದ್ರಃ ಸುತಪಸ್ತದೀಯಂ || ದದೌಚತಸ್ಮೈಭಗವಾನ್ವರಂತಂ | ಸ್ವಯಂಚ ತಸ್ಥೈವ ತಪೋವಿಮೋಹಯನ್ ||೬೯||

ಅರ್ಥ.— ಅಥ=ಅನಂತರದಲ್ಲಿ, ರುದ್ರಃ=ರುದ್ರದೇವರು, ಅಸ್ಯ=ಈ ವ್ಯಾಸರ, ಪುತ್ರತ್ವ=ಮಗನು, ಅವಾಪ್ತುಂ=ಆಗಬೇಕೆಂದು, ಇಚ್ಛ=ಅಪೇಕ್ಷಿಸುವವರಾಗಿ, ತದೀಯಂ=ವ್ಯಾಸಸಂಬಂಧಿಯಾದ, ಸುತಪಃ-ಮಹಾತಪಸ್ಸನ್ನು, ಚಚಾರ=ಮಾಡಿದರು. ಭಗವಾನ್ - ಷಡ್ಗುಣೈಶ್ವರ್ಯಸಂಪನ್ನರಾದ

ಶ್ರೀವೇದವ್ಯಾಸರು, ಸ್ವಯಂಚ=ತಾನೇ ಸೇ, ತಪ್ತ್ವಾ=ತಪಸ್ಸನ್ನು ಮಾಡಿ, ತಂ-ಆ ರುದ್ರದೇವರನ್ನು ಪುತ್ರನನ್ನಾಗಿ ಪಡೆವಸು, ಎನ್ನುವಹಾಗೆ (ದೈತ್ಯರನ್ನು) ವಿಮೋಹಯನ್=ಮೋಹಪಡಿಸುವವನಾಗಿ, ತಸ್ಮೈ=ಆ ರುದ್ರದೇವರಿಗೆ, ವರಂ=ತನಗೆ ಪುತ್ರನಾಗುವಂತೆ ವರವನ್ನು, ದದೌ-ಕೊಟ್ಟರು.

ಅವತಾರಿಕೆ.—ಸ್ವಾಮಿಯು ಹೀಗೆಯೇ ಅವತಾರಾಂತರಗಳಲ್ಲಿಯೂ ಅಸುರಜನಮೋಹನಾರ್ಥನಾಗಿ ತಪಸ್ಸನ್ನು ಮಾಡಿದಂತೆ ತೋರಿಸಿದ್ದಾನೆ.-

**ಶ್ಲೋಕ ॥ ವಿಮೋಹನಾಯಾ ಸುರಸರ್ಗಿಣಾಂ ಪ್ರಭುಃ । ಸ್ವಯಂಕರೋತೀವ ತಪಃ ಪ್ರದರ್ಶಯೇತ್ ॥ ಕಾಮಾದಿದೋಷಾಂಶ್ಚ ಮೃಷೈವದರ್ಶಯೇ । ನ್ನತಾವತಾತಸ್ಯಹಿಸಂತಿ ಕುತ್ರಚಿತ್ ॥೭೦॥**

ಅರ್ಥ.—ಅಸುರಸರ್ಗಿಣಾಂ=ದೈತ್ಯ ಸ್ವಭಾವವುಳ್ಳವರಿಗೆ, ವಿಮೋಹನಾಯ-ವಿಪರೀತ ಜ್ಞಾನವನ್ನು ಹುಟ್ಟಿಸುವುದಕ್ಕೋಸ್ಕರವಾಗಿ, ಪ್ರಭುಃ=ಸಮರ್ಥರಾದ ಶ್ರೀವೇದವ್ಯಾಸರು, ತಪಃ=ತಪಸ್ಸನ್ನು, ಸ್ವಯಂ-ತಾನೂ ಕೂಡ, ಕರೋತೀವ=ಮಾಡುವವನಂತೆ, ಪ್ರದರ್ಶಯೇತ್-ತೋರಿಸಿದ್ದಾರೆ ಕಾಮಾದಿ-ಪುತ್ರೇಚ್ಛಾದಿ, ದೋಷಾಂಶ್ಚ-ದೋಷಗಳನ್ನು, ಮೃಷೈವ=ಅವಿದ್ಯಮಾನಗಳಾದುವು, ದರ್ಶಯೇತ್=ತೋರಿಸಿದ್ದಾರೆ. ತಾವತಾ=ಆ ರೀತಿಯಲ್ಲಿ ತೋರಿಸಿದಮಾತ್ರದಿಂದಲೇ ಆ ದೋಷಗಳು, ತಸ್ಯ = ಶ್ರೀಹರಿಗೆ ಕುತ್ರಚಿತ್=ಯಾವದೇಶದಲ್ಲಿಯೇ ಆಗಲಿ, ಯಾವ ಕಾಲದಲ್ಲಿಯೇ ಆಗಲೀ, ನಸಂತಿ=ಇಲ್ಲವೇ ಇಲ್ಲ. ಹಿ=ಈ ವಿಷಯವು ನಿರ್ಣಯಗ್ರಂಥಗಳಲ್ಲಿ ಪ್ರಸಿದ್ಧವು

ಅವತಾರಿಕೆ.-ಮಹಾದೇವರು ಅವತರಿಸಿದ ರೀತಿಯನ್ನು ಹೇಳುತ್ತಾರೆ

**ಶ್ಲೋಕ ॥ ತತಸ್ತ್ವರಣ್ಯೋಃ ಸಬಭೂವಪುತ್ರಕಃ । ಶಿವಸ್ಯಸೋಭೂಚ್ಛುಕನಾಮಧೇಯಃ ॥ ಶುಕೀಹಿಭೂತ್ವಾಹ್ಯಗಮುದ್ಘೃತಾಚೀ । ವ್ಯಾಸಂವಿಮಂಥ್ನಂತಮುತಾರಣೀಂತಂ ॥೭೧॥**

ಅರ್ಥ.-ತತಃ=ಆ ರುದ್ರದೇವರಿಗೆ ವರಕೊಟ್ಟನಂತರ, ಅರಣ್ಯೋಃ =ಅಗ್ನಿಮಥನಮಾಡುವ ಕಾಷ್ಠದ ದೆಸೆಯಿಂದ, ಅಸ್ಯ=ಈ ವೇದವ್ಯಾಸರಿಗೆ, ಸಃಶಿವಃ=ಆ ರುದ್ರದೇವರು, ಪುತ್ರಕಃ=ಮಕ್ಕಳಾಗಿ, ಬಭೂವ=ಜನಿಸಿದರು, ಸಃ=ಆ ರುದ್ರದೇವರು, ಶುಕಃ-ಶುಕಾಚಾರ್ಯರೆಂಬ, ನಾಮಧೇಯಃ=ಹೆಸರುಳ್ಳವರಾಗಿ, ಅಭೂತ್=ಆದರು. (ಹಾಗಾದರೆ ಅರಣೀಕಾಷ್ಠಮಥನದ್ದೆ

ಸೆಯಿಂದ ಹುಟ್ಟಿದ ಮಗನಿಗೆ " ಶುಕ " ನೆಂಬ ಹೆಸರು ಹೇಗೆ ಬಂತೇದರೆ ಹೇಳುತ್ತಾರೆ. ) ಘೃತಾಚೀ = ಘೃತಾಚೀ ಎಂಬಪ್ಸರಸ್ತ್ರೀಯು, ಶುಕೀ= ಹೆಣ್ಣು ಗಿಳಿಯ ರೂಪವನ್ನು, ಭೂತ್ವಾ-ಆಗಿ (ಧರಿಸಿ ) ಅರಣೀಂ=ಅರಣೀ ಕಾಷ್ಠವನ್ನು, ವಿಮಥ್ನಂ- ಮಥನಮಾಡತಕ್ಕ, ತಂ=ಆ, ವ್ಯಾಸಂ=ವೇದ ವ್ಯಾಸರನ್ನು, ಅಗಮತ್-ಸಮೀಪಕ್ಕೆ ಬಂದಳು. ( ಹೊಂದಿದಳು )

**ಶ್ಲೋಕ || ಅಕಾಮಯನ್ಕಾಮುಕವತ್ಸಭೂತ್ವಾ । ತಯಾರ್ಥಿತಸ್ತಂ ಶುಕನಾಮಧೇಯಂ || ಚಕ್ರೇಽಹ್ಯರಣ್ಯೋಸ್ತನಯಂಚ ಸೃಷ್ಟ್ವಾ । ವಿಮೋಹಯಂಸ್ತತ್ತ್ವಮಾರ್ಗೇಷ್ವಯೋಗ್ಯಾನ್ ||೭೨||**

ಅರ್ಥ.—ಅನಂತರದಲ್ಲಿ, ಸಃ=ಆ ವೇದವ್ಯಾಸರು, ತಾವು, ಅಕಾಮಯನ್=ಕಾಮರಹಿತರಾದಾಗ್ಯೂ, ಕಾಮುಕವತ್=ಕಾಮುಕರಂತೆ, ಭೂತ್ವಾ=ಆಗಿ, ತಯಾ=ಆ ಘೃತಾಚಿಯಿಂದ, ಅರ್ಥಿತಃ = ಪ್ರಾರ್ಥಿಸಲ್ಪಟ್ಟವರಾಗಿ, ಅರಣ್ಯೋಃ=ಅರಣೀದೆಸೆಯಿಂದ, ತನಯಂ=ಮಗನನ್ನು, ಸೃಷ್ಟ್ವಾ ಉತ್ಪಾದನಮಾಡಿ, ಅಯೋಗ್ಯಾನ್-ಅಯೋಗ್ಯರಾದ ದೈತ್ಯರನ್ನು, ತತ್ತ್ವಮಾರ್ಗೇ-ತತ್ತ್ವವಿಷಯದಲ್ಲಿ, ವಿಮೋಹಯನ್=ಮೋಹಪಡಿಸುವುದಕ್ಕಾಗಿ, ತಂ -ಅರಣೀಮಥನದಿಂದ ಉದ್ಭವಿಸಿದ ಮಗನನ್ನು, ಶುಕನಾಮಧೇಯಂ= ಶುಕನೆಂಬ ಹೆಸರುಳ್ಳವರನ್ನಾಗಿ, ಚಕ್ರೇ=ಮಾಡಿದರು.

**ಶ್ಲೋಕ || ಶುಕಂತಮಾಶುಪ್ರವಿವೇಶವಾಯು । ರ್ವ್ಯಾಸಸ್ಯ ಸೇವಾರ್ಥಮಥಾಸ್ಯಸರ್ವಂ || ಜ್ಞಾನಂದದೌ ಭಗವಾನ್ಸರ್ವವೇದಾನ್ । ಸಭಾರತಂ ಭಾಗವತಂ ಪುರಾಣಂ ||೭೩||**

ಅರ್ಥ.—ವಾಯುಃ=ವಾಯುದೇವರು, ವ್ಯಾಸಸ್ಯ=ಶ್ರೀವೇದವ್ಯಾಸರ ಸೇವಾರ್ಥಂ-ಸೇವೆಗೋಸ್ಕರ, ಆಶು-ಶೀಘ್ರದಲ್ಲಿ, ತಂಶುಕಂ = ಆ ಶುಕಾಚಾರ್ಯರನ್ನು, ಪ್ರವಿವೇಶ-ಪ್ರವೇಶಿಸಿದರು. ಅಥ=ಅನಂತರದಲ್ಲಿ, ಅಸ್ಯ-ಶುಕಾಚಾರ್ಯರಿಗೆ ಅಥವಾ ವಾಯುದೇವರಿಗೆ, ಸರ್ವಜ್ಞಾನಂ-ಸರ್ವ ವಿಷಯಕ ಜ್ಞಾನವನ್ನು, ಅಂದರೆ, ಸರ್ವವೇದಾನ್ - ಸಮಸ್ತ ವೇದಗಳನ್ನೂ, ಸಭಾರತಂ- ಭಾರತದಿಂದ ಕೂಡಿದ, ಭಾಗವತಂ=ಭಾಗವತವನ್ನೂ, ಪುರಾಣಂ=ಭಗವತ್ಸಂಬಂಧಿ ಪುರಾಣಗಳನ್ನೂ ಸಹ, ಭಗವಾನ್-ಷಡ್ಗುಣೈಶ್ವರ್ಯಸಂಪನ್ನರಾದ ವ್ಯಾಸರು, ದದೌ-ಉಪದೇಶಕೊಟ್ಟರು. ( ವೇದವ್ಯಾಸರುಪದೇಶಕ್ಕೆ ಸಾಕ್ಷಾತ್ ಮುಖ್ಯಾಧಿಕಾರಿಗಳು ವಾಯುದೇವರು. )

ಅವತಾರಿಕೆ.—ವೇದವ್ಯಾಸರ ಮುಖ್ಯ ಉಪದೇಶವನ್ನು ಹೊಂದುವುದಕ್ಕೆ ದೇವತೆಗಳೂ ಕೂಡ ತಮ್ಮ ಯೋಗ್ಯತಾನುಸಾರ ಅಧಿಕಾರಿಗಳು ಎಂಬುವುದನ್ನು ಸೂಚಿಸುವುದಕ್ಕಾಗಿ ದೇವತೆಗಳು ಋಷಿಗಳಲ್ಲಿ ಪ್ರವೇಶಿಸಿದ್ದನ್ನು ಹೇಳುತ್ತಾರೆ.—

**ಶ್ಲೋಕ ॥ ಶೇಷೋಥಪೈಲಂ ಮುನಿಮಾವಿಶತ್ತದಾ । ವೀಶಃ ಸುಮಂತುಮಪಿ ವಾರುಣಿಂಮುನಿಂ ॥ ಬ್ರಹ್ಮಾವಿಶತ್ತ ಮುತ ವೈಶಂಪಾಯನಂ । ಶಕ್ರಶ್ಚ ಜೈಮಿನಿಮಥಾವಿಶದ್ವಿಭುಃ ॥೭೪॥**

ಅರ್ಥ.—ಅಥ=ಶುಕಾಚಾರ್ಯರಿಗೆ ಉಪದೇಶಮಾಡಿದನಂತರದಲ್ಲಿ, ಶೇಷಂ-ಶೇಷದೇವರು, ಪೈಲಮುನಿಂ=ಪೈಲಮುನಿಯನ್ನು, ಆವಿಶತ್-ಪ್ರವೇಶಮಾಡಿದರು. ತದಾ-ಆಗ ಉಪದೇಶಕಾಲದಲ್ಲಿ, ವೀಶಃಅಪಿ=ಗರುಡದೇವರಾದರೋ, ವಾರುಣಿಂ=ವರುಣಪುತ್ರನಾದ, ಸುಮಂತುಂಮುನಿಂ=ಸುಮಂತುನಾಮಕಮುನಿಯನ್ನು, ಆವಿಶತ್=ಪ್ರವೇಶಿಸಿದರು. ಬ್ರಹ್ಮಾತಮುತ=ಬ್ರಹ್ಮದೇವರೂ ಕೂಡ, ವೈಶಂಪಾಯನಂ-ವೈಶಂಪಾಯನರಲ್ಲಿಯೂ ಆವಿಶತ್=ಪ್ರವೇಶಿಸಿದರು. ಅಥ-ಅನಂತರದಲ್ಲಿ, ವಿಭುಃ=ಸಮರ್ಥನಾದ, ಶಕ್ರಶ್ಚ=ಇಂದ್ರನಾದರೋ, ಜೈಮಿನಿಂ=ಜೈಮಿನಿಋಷಿಯಲ್ಲಿ ಪ್ರವೇಶಿಸಿದರು.

ವಿಶೇಷಾಂಶ:--ಬ್ರಹ್ಮಾದಿ ದೇವತೆಗಳು ವೇದಗಳನ್ನು ತಮ್ಮ ಮೂಲರೂಪದಿಂದಲೇ ಸಾಕ್ಷಾತ್ ವೇದವ್ಯಾಸರಿಂದ ಶ್ರವಣಮಾಡಿದ್ದರೂ, ಈ ಮುನಿಗಳಲ್ಲಿ ಆವಿಷ್ಟರಾಗಿ ಮತ್ತೆ ಪತಕ್ಕೆ ಶ್ರವಣಮಾಡಲುದ್ಯುಕ್ತರಾದರು ? ಎಂಬ ಶಂಕೆ ಬಂದರೆ ಅದಕ್ಕೆ ಪರಿಹಾರ ಬ್ರಹ್ಮಾದಿಗಳು ವೇದವ್ಯಾಸರ ಮುಖದಿಂದ ಅಖಂಡ ವೇದರಾಶಿಯನ್ನು ಶ್ರವಣಮಾಡುವವರಾಗಿದ್ದರು. ಋಗಾದಿಭಾಗಗಳಾದನಂತರ ಕೇಳಿರಲಿಲ್ಲ. ಈಗ ವ್ಯಾಸರು ವೇದಗಳನ್ನು ನಾಲ್ಕು ಭಾಗಗಳಾಗಿ ವಿಂಗಡಿಸಿ ಮಹಾ ಉತ್ತಮವಾದ ವಾಕ್ಯಗಳನ್ನುದ್ಧರಿಸಿ ಶಾಖಾಭೇದಮಾಡಿದುದೇ ಮೊದಲಾದ ಮಹಾಕೌಶಲವನ್ನು ತಿಳಿಯುವದಕ್ಕಾಗಿ ಋಷಿಗಳಲ್ಲಿ ಪ್ರವೇಶಿಸಿದರು ಎಂದು ಭಾವವು.

**ಶ್ಲೋಕ ॥ ಕೃಷ್ಣಸ್ಯ ಪಾದಪರಿಸೇವನೋತ್ಸುಕಾಃ । ಸುರೇಶ್ವರಾವಿವಿಶುರಾಶು ತಾನ್ಮುನೀನ್ ॥ ಸಮುಸ್ತವಿದ್ಯಾಃ ಪ್ರತಿಪಾದ್ಯತೇಷ್ವಸೌ । ಪ್ರವರ್ತಕಾಂಸ್ತಾನ್ನಿದಧೇಹರಿಃ ಪುನಃ ॥೭೫॥**

ಅರ್ಥ.—ಕೃಷ್ಣಸ್ಯ=ಶ್ರೀವೇದವ್ಯಾಸರ, ಪಾದಪರಿಸೇವನೇ=ಪಾದಗಳನ್ನು, ಚೆನ್ನಾಗಿ, ಸೇವನೆ=ಪರಿಚರ್ಯಮಾಡುವ ವಿಷಯದಲ್ಲಿ, ಉತ್ಸುಕಾಃ ಬಹಳ ಕುತೂಹಲವುಳ್ಳ, ಸುರೇಶ್ವರಾಃ=ದೇವಶ್ರೇಷ್ಠರುಗಳು, ಅತ್ರ-ಶೀಘ್ರದಲ್ಲಿ, ತಾನ್‌ಮುನೀನ್=ಆ ಪೈಲ ಮೊದಲಾದ ಋಷಿಗಳನ್ನು, ವಿವಿಶುಃ=ಪ್ರವೇಶಮಾಡಿದರು. ಅಸೌ=ಈ ವೇದವ್ಯಾಸರು, ತೇಷು-ಆ ದೇವತೆಗಳಿಗೆ ಅಥವಾ ಮುನಿಗಳಿಗೆ, ಸಮಸ್ತವಿದ್ಯಾಃ=ಎಲ್ಲಾ ವಿದ್ಯೆಗಳನ್ನು, ಪ್ರತಿಪಾದ್ಯ-ಉಪದೇಶಕೊಟ್ಟು, ಪುನಃ=ಆಮೇಲೆ, ತಾನ್ - ಶಿಷ್ಯಾದಿಗಳಿಂದ ಆವಿಷ್ಟರಾದ ಪೈಲನೇ ಮೊದಲಾದ ಋಷಿಗಳನ್ನು, ಪ್ರವರ್ತಕಾನ್=ಭೂಲೋಕವೇ ಮೊದಲಾದವುಗಳಲ್ಲಿ, ಆಯಾಯಾ ಶಾಖಾಪ್ರಚಾರಕ ಆಚಾರ್ಯರುಗಳನ್ನಾಗಿ, ಹರಿಃ-ಶ್ರೀವೇದವ್ಯಾಸರು, ವಿದಧೇ=ನೇಮಕಮಾಡಿದರು.

ಅವತಾರಿಕೆ.—ಯಾವಯಾವ ಶಾಖೆಗೆ ಯಾರುಯಾರು ಪ್ರವರ್ತಕರೆಂಬುವುದನ್ನು ಹೇಳುತ್ತಾರೆ.—

**ಶ್ಲೋಕ ॥ ಋಚಾಂಪ್ರವರ್ತಕಂ ಪೈಲಂಋಜುಷಾಂಚ ಪ್ರವರ್ತಕಂ । ವೈಶಂಪಾಯನಮೇವೈಕಂ ದ್ವಿತೀಯಂ ಸೂರ್ಯಮೇವಚ ॥೭೬॥**

ಅರ್ಥ.—ವೇದವ್ಯಾಸರು, ಪೈಲಂ=ಪೈಲಋಷಿಗಳನ್ನು, ಋಚಾಂ=ಋಗ್ವೇದಕ್ಕೆ, ಪ್ರವರ್ತಕಂ - ಪ್ರವರ್ತಕಾಚಾರ್ಯರನ್ನಾಗಿಯೂ, ಯಜುಷಾಂಚ=ಶುಕ್ಲ ಮತ್ತು ಕೃಷ್ಣ ಎಂಬ ಎರಡುಬಗೆಭೇದವುಳ್ಳ ಯಜುರ್ವೇದ ಕೃಷ್ಣಯಜುರ್ವೇದಗಳಿಗೆ, ಏಕಂ=ಒಬ್ಬ, ವೈಶಂಪಾಯನ=ವೈಶಂಪಾಯನರನ್ನು ಪ್ರವರ್ತಕಂ=ಪ್ರವರ್ತಕರನ್ನಾಗಿಯೂ, ಶುಕ್ಲಯಜುರ್ವೇದಗಳಿಗೆ, ಎರಡನೆಯದಾದ ಶುಕ್ಲ ಎಜುಶಾಖೆಗೆ, ಸೂರ್ಯಮೇವಚ-ಸೂರ್ಯನನ್ನೇ ಪ್ರವರ್ತಕರನ್ನಾಗಿ, ಚಕ್ರೇ=ಮಾಡಿದರು.

**ಶ್ಲೋಕ ॥ ಚಕ್ರೇಥ ಜೈಮಿನಿಂ ಸಾಮ್ನಾಮಥರ್ವಾಂಗಿರಸಾಮಪಿ ॥ ಸುಮಂತುಂ ಭಾರತಸ್ಯಾಪಿ ವೈಶಂಪಾಯನಮಾದಿಶತ್ ॥೭೭॥**

ಅರ್ಥ.—ಅಥ=ಆಮೇಲೆ, ಸಾಮ್ನಾಂ-ಸಾಮವೇದಗಳಿಗೆ, ಜೈಮಿನಿಂ=ಜೈಮಿನಿಗಳನ್ನು, ಚಕ್ರೇ=ಪ್ರವರ್ತಕರನ್ನಾಗಿ ಮಾಡಿದರು. ಅಥರ್ವಾಂಗಿರಸಾಂಅಪಿ=ಅಥರ್ವಣವೇದಗಳಿಗೆಯಾದರೋ, ಸುಮಂತುಂ=ಸುಮಂತುವನ್ನು, ಚಕ್ರೇ=ಪ್ರವರ್ತಕರನ್ನಾಗಿ ಮಾಡಿದರು. ವೈಶಂಪಾಯನಂ-ವೈ

ಶಂಪಾಯನರನ್ನು, (ಕೃಷ್ಣಯಜುರ್ವೇದಕ್ಕೆ ಮಾತ್ರವಲ್ಲದೆ) ಭಾರತಸ್ಯಾ ಪಿ=ಭಾರತಕ್ಕೂ ಕೂಡ ಪ್ರವರ್ತಕರನ್ನಾಗಿರುವಂತೆ, ಶ್ರೀವ್ಯಾಸರು, ಆದಿ ಶತ್=ಅಪ್ಪಣೆಮಾಡುವವರಾದರು.

**ಶ್ಲೋಕ ॥ ಪ್ರವರ್ತನೇಮಾನುಷೇಷು ಗಂಧರ್ವಾದಿಷುಚಾತ್ಮಜಂ । ನಾರದಂ ಪಾಠಯಿತ್ವಾಚ ದೇವಲೋಕೇ ಪ್ರವೃತ್ತಯೇ ॥೭೮॥**

ಅರ್ಥ.—ವೇದವ್ಯಾಸರು, ಆತ್ಮಜಂ=ತನ್ನ ಮಗನಾದ ಶುಕಾಚಾರ್ಯರನ್ನು, ಮಾನುಷೇಷು–ಮನುಷ್ಯರಲ್ಲಿಯೂ (ಪರೀಕ್ಷಿತನೇ ಮೊದಲಾದ ಚಕ್ರವರ್ತಿಗಳಲ್ಲಿ,) ಗಂಧರ್ವಾದಿಷು=ಗಂಧರ್ವ, ಸಿದ್ಧ, ಸಾಧ್ಯ, ಚಾರಣಾದಿಗಳಲ್ಲಿಯೂ, ಪ್ರವರ್ತನೇ=ವೇದಾದಿಗಳನ್ನು ಪ್ರವರ್ತನೆ ಮಾಡುವದಕ್ಕಾಗಿ ಅಪ್ಪಣೆಕೊಟ್ಟರು. ದೇವಲೋಕೇ-ಸ್ವರ್ಗಲೋಕದಲ್ಲಿ, ಪ್ರವರ್ತಯೇ-ವೇದಾದಿಗಳ ಪ್ರವರ್ತನೆಗಾಗಿ, ನಾರದಂ-ನಾರದರನ್ನು, ಪಾಠಯಿತ್ವಾಚ=ಅಭ್ಯಾಸಮಾಡಿಸಿ ಅಪ್ಪಣೆಮಾಡಿದರು.

**ಶ್ಲೋಕ ॥ ಆದಿಶತ್ಸಸೃಜೇಸೋಽಥರೋಮಾಂಚಾದ್ರೋಮಹರ್ಷಣಂ । ತಂ ಭಾರತ ಪುರಾಣಾನಾಂ ಮಹಾರಾಮಾಯಣಸ್ಯಚ ॥೭೯॥**
**ಪಂಚರಾತ್ರಸ್ಯ ಕೃತ್ಸ್ನಸ್ಯ ಪ್ರವೃತ್ತ್ಯರ್ಥಮಥಾದಿಶತ್ ॥ ತಮಾವಿಶತ್ಕಾಮದೇವಃ ಕೃಷ್ಣಸೇವಾಸಮುತ್ಸುಕಃ ॥೮೦॥**

ಅರ್ಥ.—ಅಥ=ಅನಂತರದಲ್ಲಿ, ಸಃ-ಆ ವೇದವ್ಯಾಸರು, ರೋಮಾಂಚಾತ್-ತನ್ನ ರೋಮಕೂಪಗಳ ದೆಸೆಯಿಂದ, ರೋಮಹರ್ಷಣಂ=ರೋಮಹರ್ಷಣನನ್ನು, ಸಸೃಜೇ=ಸೃಷ್ಟಿಸಿದರು. ತಂ=ರೋಮಹರ್ಷಣನನ್ನು, ಭಾರತಪುರಾಣಾನಾಂ-ವೇದವ್ಯತಿರಿಕ್ತ ಭಾರತಕ್ಕೂ, ಮತ್ತು ಪುರಾಣಗಳಿಗೂ, ಮಹಾರಾಮಾಯಣಸ್ಯಚ=ಮಹಾರಾಮಾಯಣಕ್ಕೂ, ॥೭೯॥

ಕೃತ್ಸ್ನಸ್ಯ=ನಿಖಿಲವಾದ, ಪಂಚರಾತ್ರಸ್ಯ-ಪಾಂಚರಾತ್ರಾಗಮಕ್ಕೂ ಪ್ರವೃತ್ತ್ಯರ್ಥಂ=ಪ್ರವರ್ತಕರನ್ನಾಗಿ, ಆದಿಶತ್-ಅಪ್ಪಣೆಕೊಟ್ಟರು. ಅಥ-ಅನಂತರದಲ್ಲಿ, ಕೃಷ್ಣಸೇವಾಸಮುತ್ಸುಕಃ=ಶ್ರೀವೇದವ್ಯಾಸರಲ್ಲಿಯೇ, ಅತ್ಯಂತುತ್ಸಾಹಶಾಲಿಯಾದ, ಕಾಮದೇವಃ=ಮನ್ಮಥನು, ತಂ=ಆ ರೋಮಹರ್ಷಣನನ್ನು, ಆವಿಶತ್=ಪ್ರವೇಶಿಸಿದನು.

**ಶ್ಲೋಕ ॥ ಸತಸ್ಮೈಜ್ಞಾನಮಖಿಲಂ ದದೌ ದ್ವೈಪಾಯನಃ ಪ್ರಭುಃ । ಸನತ್ಕುಮಾರ ಪ್ರಮುಖಾಂಶ್ಚಕ್ರೇ ಯೋಗಪ್ರವರ್ತಕಾನ್ ॥೮೧॥**

ಅರ್ಥ.— ವಿಭುಃ= ಸರ್ವ ಸಮರ್ಥರಾದ, ಸಃ= ಆ, ದ್ವೈಪಾಯನಃ=ಶ್ರೀವೇದವ್ಯಾಸದೇವರು, ತಸ್ಮೈ= ಆ ಮನ್ಮಥನಿಗೆ, ಅಖಿಲಂ= ಸಮಸ್ತವಾದ, ಜ್ಞಾನಂ= ಅಪೌರುಷೇಯ ಗ್ರಂಥಗಳ ಉಪದೇಶದಿಂದ ವೇದವೇ ಮೊದಲಾದ ಜ್ಞಾನವನ್ನು, ದದೌ- ಉಪದೇಶಮುಖೇನ ಕೊಟ್ಟರು, ಸನತ್ಕುಮಾರಪ್ರಮುಖಾನ್= ಸನತ್ಕುಮಾರರೇ ಮೊದಲಾದವರನ್ನು, ಯೋಗಃ= ಯೋಗಶಾಸ್ತ್ರಕ್ಕೆ, ಪ್ರವರ್ತಕಾನ್= ಪ್ರವರ್ತಕರನ್ನಾಗಿ, ಚಕ್ರೇ= ಮಾಡಿದರು

**ಶ್ಲೋಕ ॥ ಭೃಗ್ವಾದೀನ್ಕರ್ಮಯೋಗಸ್ಯ ಜ್ಞಾನಂದತ್ವಾಮಲಂಶುಭಂ । ಜೈಮಿನಿಂ ಕರ್ಮಮೀಮಾಂಸಾ ಕರ್ತಾರಮಕರೋತ್ಪ್ರಭುಃ ॥೮೨॥**

ಅರ್ಥ.— ಭೃಗ್ವಾದೀನ್- ಭೃಗು ಮೊದಲಾದ ಋಷಿಗಳನ್ನು, ಅಮಲಂ= ಸಂಶಯ ವಿಪರ್ಯಯ ರಹಿತವಾದ, ಶುಭಂ- ಶ್ರೀಹರಿಸ್ವರೂಪ ಪ್ರಕಾಶಕವಾದ, ಜ್ಞಾನಂ= ಜ್ಞಾನವನ್ನು, ದತ್ವಾ= ಕೊಟ್ಟು, ಅವರನ್ನು, ಕರ್ಮಯೋಗಸ್ಯ= ಕರ್ಮಯೋಗಪ್ರವರ್ತಕರನ್ನಾಗಿ, ಚಕ್ರೇ- ಮಾಡಿದರು. ಪ್ರಭುಃ= ಸಮರ್ಥರಾದ ಶ್ರೀವೇದವ್ಯಾಸರು, ಜೈಮಿನಿಂ = ಜೈಮಿನಿಯನ್ನು, ಕರ್ಮಮೀಮಾಂಸಾ- ಕರ್ಮಮೀಮಾಂಸಾ ಶಾಸ್ತ್ರದ, ಕರ್ತಾರಂ- ಕರ್ತೃಗಳನ್ನಾಗಿ, ಅಕರೋತ್= ಮಾಡಿದರು.

**ಶ್ಲೋಕ ॥ ದೇವಮೀಮಾಂಸಕಾದ್ಯಂತಂ ಕೃತ್ವಾ ಪೈಲಮಥಾದಿಶತ್ । ಶೇಷಂ ಚ ಮಧ್ಯಕರಣೇ ಪುರಾಣಾನ್ಯಥಚಾಕರೋತ್ ॥೮೩॥**

ಅರ್ಥ.—ವೇದವ್ಯಾಸರು, ದೇವಮೀಮಾಂಸಕಾಯಾಃ= ದೇವಮೀಮಾಂಸಾ ಶಾಸ್ತ್ರದ, ಆದ್ಯಂತಂ= ಆದಿ ಮತ್ತು ಅಂತ್ಯಭಾಗವನ್ನೂ, ಕೃತ್ವಾ = ತಾವೇ ಮಾಡಿ, ಆ ಶಾಸ್ತ್ರದ, ಮಧ್ಯೇ= ಮಧ್ಯಭಾಗವನ್ನು, ಕರಣೇ= ಮಾಡುವುದಕ್ಕಾಗಿ, ಪೈಲಂ- ಪೈಲರನ್ನೂ, ಶೇಷಂಚ= ಪೈಲಾವಿಶಿಷ್ಟರಾದ ಶೇಷದೇವರನ್ನೂ, ಆದಿಶತ್= ಅಪ್ಪಣೆಮಾಡಿದರು. ಅಥ- ಅನಂತರದಲ್ಲಿ, ಪುರಾಣಾನಿಚ= ಪುರಾಣಗಳನ್ನು ಕೂಡ, ಅಕರೋತ್- ಮಾಡಿದರು.

**ಶ್ಲೋಕ ॥ ಶೈವಾನ್ಪಾಶುಪತಾಶ್ಚಕ್ರೇ ಸಂಶಯಾರ್ಥಂ ಸುರದ್ವಿಷಾಂ ॥ ವೈಷ್ಣವಾನ್ಪಂಚರಾತ್ರಾಶ್ಚ ಯಥಾರ್ಥ ಜ್ಞಾನಸಿದ್ಧಯೇ ॥೮೪॥**

ಅರ್ಥ.—ಪಾಶುಪತಾತ್ - ಪಾಶುಪತಾಗಮದ ದೆಶೆಯಿಂದ, ಸುರದ್ವಿಷಾಂ- ದೇವತೆಗಳಿಗೆ ಶತೃಗಳಾದ ದೈತ್ಯರಿಗೆ, ಸಂಶಯಾರ್ಥಂ- ವಿಪರೀತ

ಜ್ಞಾನಹುಟ್ಟುವುದಕ್ಕಾಗಿ, ಶೈವಾನ್=ಶಿವಸರ್ವೋತ್ತಮತ್ವವನ್ನು ಹೇಳತಕ್ಕ ತಾಮಸ ಪುರಾಣಗ್ರಂಥಗಳನ್ನು, ಚಕ್ರೇ-ರಚಿಸಿದರು. ಹಾಗೂ ಸಜ್ಜನರಿಗೆ, ಯಥಾರ್ಥಜ್ಞಾನಸಿದ್ಧಯೇ=ಯಥಾರ್ಥಜ್ಞಾನ ಹುಟ್ಟುವುದಕ್ಕಾಗಿ, ಪಂಚರಾತ್ರಾತ್=ಪಂಚರಾತ್ರಾಗಮುದ್ದೇಶಿಯಿಂದ, ವೈಷ್ಣವಾನ್ - ವಿಷ್ಣು ಸರ್ವೋತ್ತಮ ಪ್ರತಿಪಾದಕಗಳಾದ ಸಾತ್ವಿಕ ಪುರಾಣಗ್ರಂಥಗಳನ್ನು, ಚಕ್ರೇ=ಮಾಡಿದರು.

**ಶ್ಲೋಕ || ಬ್ರಾಹ್ಮಾಶ್ಚ ವೇದತಶ್ಚಕ್ರೇ ಪುರಾಣಗ್ರಂಥ ಸಂಗ್ರಹಾನ್ | ಏವಂ ಜ್ಞಾನಂ ಪುನಃಪ್ರಾಪುರ್ದೇವಾಶ್ಚ ಋಷಯಸ್ತಥಾ ||೮೫||**

ಅರ್ಥ.—ವೇದತಃ-ಮೇಲೆ ನೋಡುವುದಕ್ಕೆ ಸಂಶಯಜ್ಞಾನ ಹುಟ್ಟುವುದಕ್ಕಾಗಿ ಕರ್ಮಾದಿಗಳನ್ನು ಮುಖ್ಯತಯಾ ಪ್ರತಿಪಾದಿಸುವಂತೆ ತೋರುವ ವೇದಗಳನ್ನು ಅನುಸರಿಸಿ, ಬ್ರಾಹ್ಮಾಂಶ್ಚ-ಬ್ರಾಹ್ಮಪುರಾಣ ಇವೇ ಮೊದಲಾದ, ಪುರಾಣಗ್ರಂಥಸಂಗ್ರಹಾನ್=ರಾಜಸ ಪುರಾಣಗ್ರಂಥಗಳನ್ನು, ಚಕ್ರೇ=ರಚಿಸಿದರು. ಏವಂ=ಹೀಗೆ, ದೇವಾಶ್ಚ=ದೇವತೆಗಳೂ, ಋಷಯಃ-ಋಷಿಗಳೂ, ಜ್ಞಾನಂ=ಸುಜ್ಞಾನವನ್ನು, ಪುನಃ=ಮತ್ತೆ, ಪ್ರಾಪುಃ=ಹೊಂದಿದರು.

**ಶ್ಲೋಕ || ಸನತ್ಕುಮಾರ ಪ್ರಮುಖಾ ಯೋಗಿನೋ ಮಾನುಷಾಸ್ತಥಾ | ಕೃಷ್ಣದ್ವೈಪಾಯನಾತ್ಪ್ರಾಪ್ಯ ಜ್ಞಾನಂತೇ ಮುಮುದುಃ ಸದಾ ||೮೬||**

ಅರ್ಥ.—ಸನತ್ಕುಮಾರಃ=ಸನತ್ಕುಮಾರನೇ, ಪ್ರಮುಖಾಃ-ಮೊದಲಾಗಿವುಳ್ಳ, ಯೋಗಿನಃ=ಯೋಗಿಗಳು, ತಥಾ-ಹಾಗೆಯೇ, ಮಾನುಷಾಃ ಮನುಷ್ಯರೂ ಮತ್ತು, ತೇ - ಹಿಂದೆ ಹೇಳಿದ ದೇವತೆಗಳೂ, ಕೃಷ್ಣದ್ವೈಪಾಯನಾತ್=ಶ್ರೀವೇದವ್ಯಾಸರಿಂದ, ಜ್ಞಾನಂ=ಸುಜ್ಞಾನವನ್ನು, ಪ್ರಾಪ್ಯ=ಹೊಂದಿ, ಸದಾ=ಇಹಲೋಕದಲ್ಲಿಯೂ ಮತ್ತು ಪರಲೋಕದಲ್ಲಿಯೂ ಮುದುಃ=ಸಂತೋಷಪಟ್ಟರು.

**ಶ್ಲೋಕ || ಸಮಸ್ತ ವಿಜ್ಞಾನಗಭಸ್ತಿ ಚಕ್ರಂ | ವಿತಾಯ ವಿಜ್ಞಾನ ಮಹಾದಿವಾಕರಃ || ನಿರಸ್ಯಚಾ ಜ್ಞಾನತಮೋ ಜಗತ್ತತಂ | ಪ್ರಭಾಸತೇ ಭಾನುರಿವಾವಭಾಸಯನ್ ||೮೭||**

ಅರ್ಥ.—ವಿಜ್ಞಾನ=ವಿಜ್ಞಾನಮಯನಾದ, ಮಹಾದಿವಾಕರಃ=ಸೂ... ...ಜ್ಞಾನವೆಂಬ ತನ್ನ, ಗಭಸ್ತಯಃ=ಕಿರಣಗಳ, ಚಕ್ರಂ=

ಸಮೂಹವನ್ನು, ವಿತಾಯ=ವಿಸ್ತಾರಮಾಡಿ, ಜಗತ್ಸು ತಂ=ಪ್ರಪಂಚದಲ್ಲಿ ವ್ಯಾಪ್ತವಾದ. ಅಜ್ಞಾನತಮಃ-ಅಜ್ಞಾನವೆಂಬ ಕತ್ತಲೆಯನ್ನು, ನಿರಸ್ಯ=ನಾಶಮಾಡಿ, ಭಾನುರಿವ-ಸೂರ್ಯನಂತೆ ಜಗತ್ತನ್ನು, ಭಾಸಯನ್=ಪ್ರಕಾಶಪಡಿಸುವವನಾಗಿ, ಪ್ರಭಾಸತೇ-ಸರ್ವೋತ್ಕೃಷ್ಟನಾಗಿ ಪ್ರಕಾಶಿಸುತ್ತಾನೆ.

**ಶ್ಲೋಕ || ಚತುರ್ಮುಖೇಶಾನ ಸುರೇಂದ್ರ ಪೂರ್ವಕೈಃ । ಸದಾಸುರೈಃ ಸೇವಿತಪಾದಪಲ್ಲವಃ || ಪ್ರಕಾಶಯಂ ಸ್ತೇಷು ಸದಾತ್ಮಗುಹ್ಯಂ । ಮುಮೋದ ಮೇರೌಚ ತಥಾ ಬದರ್ಯಾಂ ||೮೮||**

ಅರ್ಥ.— ಚತುರ್ಮುಖ=ಬ್ರಹ್ಮನು, ಈಶಾನ=ರುದ್ರನು, ಸುರೇಂದ್ರ=ದೇವೇಂದ್ರನೇ, ಪೂರ್ವಕೈಃ-ಮೊದಲಾಗಿವುಳ್ಳ, ಸುರೈಃ - ದೇವತೆಗಳಿಂದ, ಸದಾ=ಯಾವಾಗಲೂ, ಸೇವಿತಃ=ಸೇವಿಸಿಕೊಳ್ಳಲ್ಪಟ್ಟ, ಪಾದಪಲ್ಲವಃ-ಚಿಗುರಿನಂತೆ ಕೋಮಲವಾದ ಪಾದಪದ್ಮಗಳುಳ್ಳ ಶ್ರೀವೇದವ್ಯಾಸರು, ತೇಷು=ಆ ಚತುರ್ಮುಖಾದಿಗಳಲ್ಲಿ, ಸದಾ-ಯಾವಾಗಲೂ ಆತ್ಮ = ತನ್ನ ಸಂಬಂಧಿಯಾದ, ಗುಹ್ಯಂ=ಗುಣಾದಿ ರಹಸ್ಯವನ್ನು, ಪ್ರಕಾಶಯನ್=ಪ್ರಕಾಶಪಡಿಸುವವನಾಗಿ, ಮೇರೌ-ಮೇರುಪರ್ವತದಲ್ಲಿಯೂ, ತಥಾ=ಹಾಗೇನೇ ಬದರ್ಯಾಂ-ಬದರಿಕಾಶ್ರಮದಲ್ಲಿಯೂ, ಮುಮೋದ-ಸಂತೋಷಿಸಿದರು.

ತಾತ್ಪರ್ಯ.— ಚತುರ್ಮುಖಬ್ರಹ್ಮ, ರುದ್ರ, ದೇವೇಂದ್ರ ಮೊದಲಾದ ದೇವತೆಗಳಿಂದ ಯಾವಾಗಲೂ ಸೇವಿತವಾದ ಪಾದಪಲ್ಲವವುಳ್ಳ ಶ್ರೀವೇದವ್ಯಾಸರು, ಆ ಚತುರ್ಮುಖಾದಿ ದೇವತೆಗಳಲ್ಲಿ ತನ್ನ ಸಂಬಂಧಿಯಾದ ಗುಣವೇ ಮೊದಲಾದ ರಹಸ್ಯವನ್ನು ಪ್ರಕಾಶಪಡಿಸುವವನಾಗಿ, ಮೇರುಪರ್ವತದಲ್ಲಿಯೂ, ಹಾಗೂ ಬದರಿಕಾಶ್ರಮದಲ್ಲಿಯೂ, ಸಂತೋಷಿಸುತ್ತಿದ್ದರು.

ಇತಿ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯ ವಿರಚಿತೇ
ಶ್ರೀಮನ್ಮಹಾಭಾರತ ತಾತ್ಪರ್ಯನಿರ್ಣಯೇ ವ್ಯಾಸಾವತಾರ
ಕಥಾನಿರೂಪಣಂನಾಮ ದಶಮೋಽಧ್ಯಾಯಃ ಸಮಾಪ್ತಃ
ಶ್ರೀಕೃಷ್ಣಾರ್ಪಣಮಸ್ತು.

ಬಿ. ಪಿ. ಪ್ರೆಸ್ಸ್, ಮಲ್ಲೇಶ್ವರಂ ಬಿ. ಸಿಟಿ.